ತುಳು ಸಂಸ್ಕೃತಿಯನ್ನು ಬಿಂಬಿಸುವ ನೂರಾರು ಚಿತ್ರಗಳನ್ನು ಬಿಡಿಸಿರುವ
ಶಿಕ್ಷಣ ಹಾಗೂ ಶಿಕ್ಷಕರು ಹೇಗಿರಬೇಕೆಂದು ತಿಳಿಸಿರುವ



ನಿವೃತ್ತ ಚಿತ್ರಕಲಾ ಸಹಾಯಕ ನಿರ್ದೇಶಕ

ಜೀ. Are. ಉಪಾಧ್ಯಾಯರ

# (ವಿ)ಚಿತ್ರ ಜೀವನ



ನಿವೃತ್ತ ಚಿತ್ರಕಲಾ ಸಹಾಯಕ ನಿರ್ದೇಶಕ

## जी. Are. ಉಪಾಧ್ಯಾಯರ

# (ವಿ)ಚಿತ್ರ ಜೀವನ


YouTube Artist

**G. R. Upadhyaya,** A.M.,G.D.(Art)

Rtd. A.D.P.I (Art)

4-80/6, 'Shri Sathyakala Nikethana', Mahathma Nagara
KAVOOR - MANGALURU. 575 015
E-mail: grupadhyayaartist@gmail.com
Web: www.artistgrupadhyaya.weebly.com

MOB: 94806 00910 RES: 0824-2484016

G.R. Upadhyayas'
**"(VI)CHITRA JEEVANA"**
By
**G.R. Upadhyaya,** *Artist*
'Sri Sathyakala Nikethana'
Mahathma Nagara, Kavoor
Mangaluru - 575 015. M: 094806 00910

Publisher: **G.R. Upadhyaya** (C) Copyright

1st Addition: 2017 (Copies 1000)

Pages: 256+24+4=284

Paper: Cover Page=300gsm Art
Color Pages=130gsm Art
Bl. &Wt. Pages=80gsm Maplitho

Page Setting: B. Dinakara Adiga - 99002 53131
bdinakara@gmail.com

Editing: Guruprasad - 94486 22785
guruprasadin@gmail.com

Cover Page: **G.R. Upadhyaya**

Printers: **Impressions**
B-2, Impressions Building
3360/4, Gondhali Galli
Belagavi - 590 002

**Price: ₹ 300/-**

**For copies contact:**

MANGALURU:
**School Book Company**
School Book Building
1st Floor, Carstreet, Mangaluru
Ph: 08254 - 4281777, 2496938

UDUPI:
**Seetha Book Centre**
Deenadayalu Circle
Udupi - 576 101. M: 99017 28373

PUTTUR:
**Shree Jnanaganga Pusthaka Malige**
Near Aruna Theatre
Behind Shrikanth Lodge
Main Road, Puttur - 574 201
M: 94804 51560

**Popular News Agency Book Stall**
Near Bus Stand / Police Station
Puttur - 574 201. D.K.
ಮೊ: 93417 45115

ಜಿ.ಆರ್. ಉಪಾಧ್ಯಾಯರ
**"(ವಿ)ಚಿತ್ರ ಜೀವನ"**
ಬರೆದವರು:
**ಜಿ.ಆರ್. ಉಪಾಧ್ಯಾಯ,** ಕಲಾವಿದ
'ಶ್ರೀ ಸತ್ಯಕಲಾ ನಿಕೇತನ'
ಮಹಾತ್ಮ ನಗರ, ಕಾವೂರು
ಮಂಗಳೂರು – 575 015. ಮೊ: 094806 00910

ಬರೆದವರು: **ಜಿ.ಆರ್. ಉಪಾಧ್ಯಾಯ** (C) ಹಕ್ಕುಗಳು

ಮೊದಲ ಮುದ್ರಣ: 2017 (ಪ್ರತಿಗಳು 1000)

ಪುಟಗಳು: 256+24+4=284

ಪೇಪರ್: ರಕ್ಷಾಪುಟ=300ಜಿಎಸ್ಎಂ ಆರ್ಟ್
ಬಣ್ಣದ ಪುಟ=130ಜಿಎಸ್ಎಂ ಆರ್ಟ್
ಕಪ್ಪುಬಿಳಿ ಪುಟ=80ಜಿಎಸ್ಎಂ ಮ್ಯಾಪ್ಲಿಥೊ

ಪುಟ ವಿನ್ಯಾಸ: ಬಿ. ದಿನಕರ ಅಡಿಗ – 99002 53131
bdinakara@gmail.com

ಸಂಯೋಜನೆ: ಗುರುಪ್ರಸಾದ – 94486 22785
guruprasadin@gmail.com

ಮುಖಪುಟ: **ಜಿ.ಆರ್. ಉಪಾಧ್ಯಾಯ**

ಮುದ್ರಕರು: **ಇಂಪ್ರೆಶನ್ಸ್**
ಬಿ–2, ಇಂಪ್ರೆಶನ್ಸ್ ಬಿಲ್ಡಿಂಗ್
3360/4, ಗೊಂದಲಿ ಗಲ್ಲಿ
ಬೆಳಗಾವಿ – 590 002

**ಬೆಲೆ: ₹ 300/–**

**ಪ್ರತಿಗಳಿಗಾಗಿ ಸಂಪರ್ಕಿಸಿ:**

ಮಂಗಳೂರು:
**ಸ್ಕೂಲ್ ಬುಕ್ ಕಂಪೆನಿ**
ಸ್ಕೂಲ್ ಬುಕ್ ಬಿಲ್ಡಿಂಗ್
1ನೇ ಮಹಡಿ, ರಥಬೀದಿ, ಮಂಗಳೂರು
ಫೋ: 08254 – 4281777, 2496938

ಉಡುಪಿ:
**ಸೀತಾ ಬುಕ್ ಸೆಂಟರ್**
ದೀನದಯಾಳ್ ವೃತ್ತ
ಉಡುಪಿ – 576 101. ಮೊ: 99017 28373

ಪುತ್ತೂರು:
**ಶ್ರೀ ಜ್ಞಾನಗಂಗಾ ಪುಸ್ತಕ ಮಳಿಗೆ**
ಅರುಣ ಥಿಯೇಟರ್ ಬಳಿ
ಶ್ರೀಕಾಂತ್ ಲಾಡ್ಜ್‌ನ ಹಿಂಬಾಗ
ಮುಖ್ಯ ರಸ್ತೆ, ಪುತ್ತೂರು – 574 201
ಮೊ: 94804 51560

**ಪೊಪ್ಯುಲರ್ ನ್ಯೂಸ್ ಏಜನ್ಸಿ ಪುಸ್ತಕ ಮಳಿಗೆ**
ಬಸ್ ನಿಲ್ದಾಣದ ಹತ್ತಿರ / ಪೊಲೀಸ್ ಠಾಣೆ ಬಳಿ
ಪುತ್ತೂರು – 574 201. ದ.ಕ.
ಮೊ: 93417 45115

# ಇದು ನನ್ನ ಅಭಿಪ್ರಾಯ

ನನ್ನ ಜೀವನವೇ ಒಂದು ವಿಚಿತ್ರ. ಹಾಗಾಗಿ ನಾನು ಬರೆದಿರುವ ಈ ಪುಸ್ತಕಕ್ಕೆ "(ವಿ) ಚಿತ್ರ ಜೀವನ" ಎಂದು ನಾಮಕರಣ ಮಾಡಿದ್ದೇನೆ. ನಾನು ಹುಟ್ಟಿದ್ದಕ್ಕೆ ಈ ಪುಸ್ತಕ ಸಾಕ್ಷಿ.

ಉಡುಪಿಯ ಶಿರ್ವ ಗ್ರಾಮದ (ಮೋಕ್ಷ ಮಾಯವಾದ ಬೆಟ್ಟು) ಮೋಣಿಬೆಟ್ಟು ಎಂಬ ಹಳ್ಳಿಯ ಮೂಡುಮಠದಲ್ಲಿ ಕೃಷ್ಣವೇಣಿ-ರಾಮ ಉಪಾಧ್ಯಾಯರ 3ನೇ ಮಗುವಾಗಿ-ಮೊದಲನೇ ಗಂಡು ಮಗುವಾಗಿ 1947 ಮೇ 19 ರಂದು ಹುಟ್ಟಿದ ನನ್ನ ಹೆಸರು ಗೋಪಾಲ ಕೃಷ್ಣ. ಕ್ರಮೇಣ (ಗೋಪಾಲಕೃಷ್ಣ ರಾಮ ಉಪಾಧ್ಯಾಯ) ಜಿ.ಆರ್. ಉಪಾಧ್ಯಾಯ ಆಯ್ತು.

ಚಿಕ್ಕಂದಿನಿಂದಲೂ ಚಿತ್ರಕಲಾಸಕ್ತಿ ಇದ್ದ ನಾನು ಕಲಿಯುವುದರಲ್ಲಿ ದಡ್ಡನಾಗಿದ್ದೆ. 6ನೇ ಯಿಂದ 8ನೇ ತರಗತಿ ತನಕ ಶಿರ್ವ ಸೈಂಟ್ ಮೇರೀಸ್ ಹೈಸ್ಕೂಲಿನಲ್ಲಿ ಚಿತ್ರಕಲಾ ಅಧ್ಯಾಪಕರಾಗಿದ್ದ ಶ್ರೀಯುತ ಸಚ್ಚಿದಾನಂದ ಆಚಾರ್ಯರು ನನ್ನ ಚಿತ್ರಕಲಾಸಕ್ತಿಗೆ ತುಂಬಾ ಪ್ರೋತ್ಸಾಹ ಕೊಟ್ಟರು. ಅಂದಿನ ಅವರ ಪ್ರೋತ್ಸಾಹವೇ ಇಂದು ನನ್ನನ್ನು ಈ ಹಂತದ ತನಕ ತಂದಿದೆ ಎಂದು ಖಂಡಿತವಾಗಿ ಹೇಳಬಲ್ಲೆ.

S.S.L.C ನಂತರ ಅಮ್ಮನಿಂದ ರೂ 25/- ಪಡೆದು ಗುಟ್ಟಾಗಿ ಮನೆಬಿಟ್ಟು ಪರಾರಿಯಾದ ನಾನು ಧಾರವಾಡದ ಹೋಟೇಲಿನಲ್ಲಿ ಸಪ್ಲೈ ಕೆಲಸ ಮಾಡುತ್ತಾ ಶ್ರೀ ಡಿ.ವಿ. ಹಾಲಭಾವಿಯವರಲ್ಲಿ ಚಿತ್ರಕಲಾಭ್ಯಾಸ ಮಾಡುತ್ತಿರುವಾಗ ನಡೆದ ರಾಜ್ಯಮಟ್ಟದ ಪರೀಕ್ಷೆಯಲ್ಲಿ 2ನೇ ರ್‍ಯಾಂಕ್ ಪಡೆದು, ಬಾಯಿ ಬಾರದ ತಂಗಿಗಾಗಿ ಟೈಲರಿಂಗ್ ಕಲಿತು, ನನ್ನ 20ನೇ ವರ್ಷಕ್ಕೆ ಬೆಳ-ಮಾರು ಸರಕಾರಿ ಪ್ರೌಢ ಶಾಲೆಯಲ್ಲಿ ಕೆಲಸಕ್ಕೆ ಸೇರಿ 13 ವರ್ಷ ಹೊಲಿಗೆ ಮತ್ತು ಚಿತ್ರಕಲಾ ಅಧ್ಯಾಪಕನಾಗಿದ್ದು - 3 ವರ್ಷ ಸಾಗರ ಸರಕಾರಿ ಪ.ಪೂ. ಕಾಲೇಜಿನಲ್ಲಿ ಚಿತ್ರಕಲಾ ಅಧ್ಯಾಪಕನಾಗಿದ್ದು - 17 ವರ್ಷ ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಪ್ರಶಿಕ್ಷಕನಾಗಿದ್ದು - 3 ವರ್ಷ ಸರಕಾರಿ ಬಿ.ಎಡ್. ಕಾಲೇಜಿನಲ್ಲಿ ಉಪನ್ಯಾಸಕನಾಗಿ - ಬಳಿಕ ರಾಜ್ಯದ ಉನ್ನತ ಹುದ್ದೆ ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ ಬಡ್ತಿ ಹೊಂದಿ - 4 ತಿಂಗಳ ಕಾಲ ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸಿ, ಸ್ವಯಂ ನಿವೃತ್ತಿ ಪಡೆದು ಕಾವೂರಿನ ನನ್ನ ಮನೆಯಲ್ಲಿ ಚಿತ್ರಗಳನ್ನು ಬಿಡಿಸುತ್ತಾ, ಪ್ರದರ್ಶನಗಳನ್ನು ಮಾಡುತ್ತಾ ಜೀವಿಸುತ್ತಿದ್ದೇನೆ.

ಪ್ರತಿಯೊಬ್ಬರಲ್ಲೂ ಒಂದೊಂದು ರೀತಿಯ ಪ್ರತಿಭೆಗಳಿರುತ್ತವೆ. ಆ ಪ್ರತಿಭೆಗೆ ಸ್ವಪ್ರಯತ್ನ - ಪ್ರೋತ್ಸಾಹ - ಪ್ರದರ್ಶನ - ಪ್ರೇಕ್ಷಕರು - ಪ್ರಚಾರ ಸಿಕ್ಕಿದಾಗ ಪ್ರಸಿದ್ಧಿ ಪಡೆದು ಪ್ರಪಂಚದಲ್ಲೇ ಪ್ರಖ್ಯಾತರಾಗುವುದರಲ್ಲಿ ಸಂದೇಹವೇ ಇಲ್ಲ. ನನ್ನ ಚಿತ್ರಕಲಾಸಕ್ತಿಗೆ ಸರಿಯಾಗಿ ಈ ಎಲ್ಲಾ ಅವಕಾಶ ಸಿಕ್ಕಿರುವುದು ನನ್ನ ಭಾಗ್ಯ - ಭಗವಂತನ ಅನುಗ್ರಹ. (ನಮ್ಮ ಆರೋಗ್ಯಕ್ಕೆ ಹವ್ಯಾಸ ಅಗತ್ಯ)

ತುಳುನಾಡಿನಲ್ಲಿ ಹುಟ್ಟಿ ಬೆಳೆದ ನಾನು - ನನ್ನ ಜೀವನಕ್ರಮ - ಸಂಸ್ಕೃತಿ, ಪರಿಸರ, ಶಿಕ್ಷಣ, ಆಡಿದ ಆಟಗಳು, ಹಬ್ಬಗಳು, ತಿಂದ ತಿಂಡಿಗಳು - ನೋಡಿದ ವಸ್ತುಗಳು ಹೇಗೆ ಇತ್ತು ಎನ್ನುವುದನ್ನು ಮುಂದಿನ ಜನಾಂಗಕ್ಕೆ ತಿಳಿಸುವ ಉದ್ದೇಶದಿಂದ ನೂರಾರು ಚಿತ್ರ ಬಿಡಿಸಿ - ವಿವರಣೆ ಬರೆದು ಪುಸ್ತಕ ರಚಿಸಿದ್ದೇನೆ.

36 ವರ್ಷ ಶಿಕ್ಷಕನಾಗಿದ್ದಾಗ 20 ವರ್ಷ ಶಿಕ್ಷಕ ತರಬೇತಿ ಸಂಸ್ಥೆಯಲ್ಲಿ ಹಾಗೂ ಬಿ.ಎಡ್. ಕಾಲೇಜಿನಲ್ಲಿ ಬೋಧಿಸಿದ ಅನುಭವದ ಆಧಾರದಲ್ಲಿ ಹಿಂದಿನ ಶಿಕ್ಷಣ ಪದ್ಧತಿಗೂ ಇಂದಿನ ಪದ್ಧತಿಗೂ ಏನು ವ್ಯತ್ಯಾಸವಾಗಿದೆ - ವಿದ್ಯಾರ್ಥಿಗಳೊಂದಿಗೆ ಶಿಕ್ಷಕರು ಹೇಗೆ ಇರಬೇಕು - ಶಿಕ್ಷಣದ ಕ್ರಮದಲ್ಲಿ ಏನೇನು ಬದಲಾವಣೆಯಾದರೆ ಸಮಾಜ ಸುಧಾರಣೆಯಾದೀತು ಎಂಬುದನ್ನು ನನ್ನ ಅನಿಸಿಕೆಯಂತೆ ಬರೆದಿದ್ದೇನೆ.

ಈ ಪುಸ್ತಕ ರಚಿಸಲು ಸಹಕರಿಸಿದ ಶ್ರೀ ಜಿ. ದಿವಾಕರ ಅಡಿಗರಿಗೆ, ನನ್ನ ಮಗ ಗುರುಪ್ರಸಾದನಿಗೆ, D.T.P. ಮಾಡಿಕೊಟ್ಟ "ಸುಮುಖ ಪ್ರಿಂಟರ್ಸ್" ಕಾವೂರು ಮತ್ತು ಅತೀ ಸುಂದರವಾಗಿ ಮುದ್ರಿಸಿಕೊಟ್ಟ "ಇಂಪ್ರೆಶನ್ಸ್" ಬೆಳಗಾವಿ ಇವರಿಗೆ, ಅಂದಿನ ವಸ್ತುಗಳ ಚಿತ್ರವನ್ನು ಬಿಡಿಸಲು ಸಹಕರಿಸಿದ ಪ್ರೊ। ಎಂ. ಜಯರಾಮ ಪೂಂಜರಿಗೆ, ಸಾಹಿತಿಗಳಾದ ಪ್ರೊ। ಎಂ. ಪ್ರಭಾಕರ ಜೋಶಿಯವರಿಗೆ, ಈ ಪುಸ್ತಕಕ್ಕೆ ವಿಮರ್ಶೆ ಬರೆದಿರುವ ಸಾಹಿತಿಗಳಾದ ಪ್ರೊ। ಮುರಳೀಧರ ಉಪಾಧ್ಯಾಯ ಹಿರಿಯಡ್ಕ ಇವರಿಗೆಲ್ಲಾ ನನ್ನ ಪ್ರೀತಿ ಪೂರ್ವಕವಾದ ಅಭಿನಂದನೆಗಳು.

ಆತ್ಮೀಯರೇ, ಈ ಪುಸ್ತಕದ ಪ್ರತೀ ಪುಟದ ಎಲ್ಲಾ ವಿಷಯಗಳನ್ನು ಕೂಲಂಕಷವಾಗಿ ಓದಿ, ವಿಶೇಷತೆ ಗುರುತಿಸಿ, ತಮ್ಮ ಜೀವನಕ್ಕೂ ಅನುಭವಾಮೃತಗಳನ್ನು ಅಳವಡಿಸಿಕೊಂಡು ಜೀವಿಸಿದರೆ ಈ ಪುಸ್ತಕ ಬರೆದ ನಾನು ಧನ್ಯ. ದಯಮಾಡಿ ಓದಿ ನಿಮ್ಮ ಅಭಿಪ್ರಾಯ ನನಗೆ ತಿಳಿಸಿ. ನಿಮ್ಮ ಆತ್ಮೀಯರಿಗೂ ಓದಲು ಹೇಳಿ.

Upadhyaya

G.R. ಉಪಾಧ್ಯಾಯ
KAVOOR.
24.5.2017

# ಶಿರ್ವ ಮಾಣಿಬೆಟ್ಟು ಮೂಡುಮಠದ ವಂಶವೃಕ್ಷ



# ಶಿರ್ವ ಮಾಣಿಬೆಟ್ಟು ಮೂಡುಮಠದ ವಂಶ

| ತಂದೆ – ತಾಯಿ | 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|---|
| | ಶ್ರೀನಿವಾಸ-ಸತ್ಯ | | | | | | | | |
| ಶ್ರೀನಿವಾಸ-ಸತ್ಯ | ವೆಂಕಟಕೃಷ್ಣ-ಕಮಲ | | | | | | | | |
| ವೆಂಕಟಕೃಷ್ಣ ಕಮಲ | ಜಲಜ-ವಿಠಲದಾಸ | ರಾಮ-ಕೃಷ್ಣವೇಣಿ | ಲಕ್ಷ್ಮೀ-ಅನಂತ | ಶ್ರೀನಿವಾಸ-ಪದ್ಮಾಕ್ಷಿ | ನಾರಾಯಣ-ಗುಲಾಬಿ | ಯಮುನ-ಕೃಷ್ಣ | ಪದ್ಮ-ರಾಮರಾವ್ | | |
| ಜಲಜ – ವಿಠಲದಾಸ | ರಾಧ-ಗೋವಿಂದ | ಕೃಷ್ಣವೇಣಿ-ಪದ್ಮನಾಭ | ಗುರುರಾಜ-ಶ್ರೀಲಕ್ಷ್ಮೀ | ಬಾಲಕೃಷ್ಣ-ಜಯಲಕ್ಷ್ಮೀ | ಶಾರದ-ಮಾಧವ | ಹಯವದನ-ವಿಜಯಲಕ್ಷ್ಮೀ | ಮಾಧವ-ನಳಿನಿ | ಶ್ರೀಪತಿ-ಸರಸ್ವತಿ | ವಾಸುದೇವ-ವಿಜಯಲಕ್ಷ್ಮೀ |
| ರಾಮ – ಕೃಷ್ಣವೇಣಿ | ಸುಮತಿ-ಪದ್ಮನಾಭ | ಸುಲೋಚನ-ರಾಮಚಂದ್ರ | ಗೋಪಾಲಕೃಷ್ಣ-ಸತ್ಯಭಾಮ | ತ್ರಿವೇಣಿ-ಗೋಪಾಲ | ನಾಗರಾಜ-ಸುಮಂಗಲಾ | ವಿಷ್ಣುಮೂರ್ತಿ-ಗಾಯತ್ರಿ | ಆಶಾ-ರವಿ | | |
| ಲಕ್ಷ್ಮೀ ಅನಂತ | ಪದ್ಮನಾಭ-ಸುಮತಿ | ರಾಮಚಂದ್ರ-ಪರಮೇಶ್ವರಿ | ವಿಠಲ | ಸತ್ಯಭಾಮ-ಗೋಪಾಲಕೃಷ್ಣ | ನಾರಾಯಣ-ವಸಂತಲಕ್ಷ್ಮೀ | ಗಣಪತಿ-ಜಾಜಿ | | | |
| ಶ್ರೀನಿವಾಸ – ಪದ್ಮಾಕ್ಷಿ | ಕೃಷ್ಣಮೂರ್ತಿ-ಮಾಲತಿ | ಪುಷ್ಪ-ಕೇಶವ | ಹರಿ-ಪ್ರಭಾ | ಉದಯ-ಉಷಾ | ವಾಮನ-ಶಾಂತಾ | ಮೋಹಿನಿ-ನಾಗರಾಜ | ಮೋಹನ – ಸುಕನ್ಯಾ | ಅನಸೂಯ-ಗಣಪತಿ | ಶೇಖರ್ |
| ನಾರಾಯಣ – ಗುಲಾಬಿ | ರಮೇಶ-ಜಯಶ್ರೀ | ಶಶಿ-ವೆಂಕಟರಮಣ | ಮಧು-ಸುಕನ್ಯಾ | ಬಾಲು-ಸವಿತಾ | ಸುನೀತ-ಮನೋಜ್ | ವಿಶ್ವನಾಥ-ಸಂಧ್ಯ | ಜ್ಯೋತಿ-ಕೃಷ್ಣಮೂರ್ತಿ | | |
| ಯಮುನ – ಕೃಷ್ಣ | ಗೋವಿಂದ-ಲಕ್ಷ್ಮೀ | ಸರೋಜಿನಿ-ಶ್ರೀಪತಿ | | | | | | | |
| ಪದ್ಮ-ರಾಮರಾವ್ | ಶ್ರೀಕಾಂತ-ಶೈಲಜ | ಶಶಿಕಾಂತ-ನಾಗರತ್ನ | ಉಷಾ-ಪ್ರಭಾಕರ | ಜಯಂತಿ-ವೈ.ಎನ್.ಭಟ್ | ಉಮಾಕಾಂತ-ಲಕ್ಷ್ಮೀ | ಲಕ್ಷ್ಮೀಕಾಂತ-ರಾಧಿಕಾ | ಲತಾ ವಿಎಸ್‌ಕೆ ಹೊಳ್ಳ | ಗೀತಾ-ರವಿಕುಮಾರ್ | |
| 1 | | | | | | | | | |
| ರಾಧಾ – ಗೋವಿಂದ | ವಸಂತಿ-ಶ್ರೀನಿವಾಸ | ರಾಮಕೃಷ್ಣ-ವಸಂತ | ಶ್ಯಾಮಲ-ನಾರಾಯಣ | ರಾಘವೇಂದ್ರ-ಗುಲಾಬಿ | ಸೀತಾರಾಮ-ಶಶಿ | ಕಮಲಿ-ಗಣಪತಿ | | | |
| ಕೃಷ್ಣವೇಣಿ-ಪದ್ಮನಾಭ | ಸತ್ಯಾನಂದ-ಪರಿಮಳ | ಹರೀಶ-ಕುಸುಮ | ನರಸಿಂಹ-ಸುಜಾತ | ಆಶಾ-ರಮೇಶ್ | ಉಷಾ-ಸುಬ್ರಹ್ಮಣ್ಯ | ಮುರಳಿ-ಕವಿತಾ | | | |
| ಗುರುರಾಜ-ಶ್ರೀಲಕ್ಷ್ಮೀ | ಪದ್ಮಿನಿ-ಸುಬ್ರಹ್ಮಣ್ಯ | ನಳಿನಿ-ಹರೀಶ್ | ಬೇಬಿ-ಮಧು | ಕೃಷ್ಣ-ರೂಪ | | | | | |
| ಬಾಲಕೃಷ್ಣ-ಜಯಲಕ್ಷ್ಮೀ | ಆಲೋಕ-ಸುಮನ | ರಾಮು&ಶಾಮು-ಲಲಿತಾ | ಅನಿತಾ-ವಾದಿರಾಜ | ವಿಠಲ – ಸುಜಾತ | | | | | |
| ಶಾರದ-ಮಾಧವ | ಸುಮಂಗಲಾ-ನಾಗರಾಜ | ಶ್ರೀಕಾಂತ-ಜ್ಯೋತಿ | ಪ್ರಫುಲ್ಲಾ-ಜನಾರ್ಧನ | ಪ್ರಶಾಂತ್-ಸವಿತಾ | | | | | |
| ಹಯವದನ-ವಿಜಯಲಕ್ಷ್ಮೀ | ಸುಧೀರ್-ಚಂದ್ರಿಕಾ | ಸುನಿತ-ಶಿವಶಂಕರ್ | ಸುಜಯ್-ದಿವ್ಯ | | | | | | |
| ಮಾಧವ-ನಳಿನಿ | ಗುರುಪ್ರಸಾದ್-ಶ್ವೇತಾ | ಪ್ರತಿಭಾ-ಅಶ್ವಿನಿಕುಮಾರ್ | | | | | | | |
| ಶ್ರೀಪತಿ-ಸರಸ್ವತಿ | ಶಿಲ್ಪ-ಶ್ರೀನಿವಾಸ | ಗೀತಾ-ಕೃಷ್ಣರಾಜ | ಸಾಗರ್ | | | | | | |
| ವಾಸುದೇವ-ವಿಜಯಲಕ್ಷ್ಮೀ | ವಿನೋದ-ನಿರುಪಮಾ | ವಿಜೇತ್-ಶ್ರುತಿ | | | | | | | |
| 2 | | | | | | | | | |
| ಸುಮತಿ-ಪದ್ಮನಾಭ | ಶ್ರೀಕಲಾ-ಕೃಷ್ಣಮೂರ್ತಿ | ಶ್ರೀಲತಾ-ಶ್ರೀಶ | ರಾಘವೇಂದ್ರ-ಉಷಾ | ನಾರಾಯಣ-ಲಕ್ಷ್ಮೀ | | | | | |
| ಸುಲೋಚನ-ರಾಮಚಂದ್ರ | ಶಾಂತಿ | ಉಮಾ-ಶ್ರೀನಿವಾಸ | ನಾರಾಯಣ-ರಾಜಲಕ್ಷ್ಮೀ | ಸವಿತಾ-ಹರೀಶ್ | ವನಿತಾ-ಶ್ರೀಪತಿ | ಗುರು-ದಿವ್ಯ | | | |
| ಗೋಪಾಲಕೃಷ್ಣ-ಸತ್ಯಭಾಮ | ಸೌಮ್ಯ-ದೇವಿಪ್ರಸಾದ್ | ಗುರುಪ್ರಸಾದ್-ಸುಮನ | | | | | | | |
| ತ್ರಿವೇಣಿ-ಗೋಪಾಲ | ಪ್ರಸನ್ನ-ಭಾರ್ಗವಿ | | | | | | | | |
| ನಾಗರಾಜ-ಸುಮಂಗಲ | ದಿವ್ಯ-ಪ್ರಕಾಶ್ | ಶ್ರೀರಾಮ | | | | | | | |
| ವಿಷ್ಣುಮೂರ್ತಿ-ಗಾಯತ್ರಿ | ಸ್ವಾತಿ-ಗುರುಪ್ರಸಾದ್ | ಕಾರ್ತಿಕ್ | | | | | | | |
| ಆಶಾ-ರವಿ | ಕಿರಣ್ | ಅರುಣ್ | | | | | | | |
| 3 | | | | | | | | | |
| ಪದ್ಮನಾಭ-ಸುಮತಿ | ಸುಜಾತ-ವೇದವ್ಯಾಸ | ಲತಾ-ರಾಮಚಂದ್ರ | ಗುರುಪ್ರಸಾದ್ ವಾಣಿ | ಸವಿತಾ-ಶ್ರೀಧರ್ | ಸರಸ್ವತಿ-ವೆಂಕಟೇಶ್ | | | | |
| ರಾಮಚಂದ್ರ-ಪರಮೇಶ್ವರಿ | ಕೀರ್ತನ್ | | | | | | | | |
| ವಿಠಲ | | | | | | | | | |
| ಸತ್ಯಭಾಮ-ಗೋಪಾಲಕೃಷ್ಣ | ಸೌಮ್ಯ-ದೇವೀಪ್ರಸಾದ್ | ಗುರುಪ್ರಸಾದ್-ಸುಮನ | | | | | | | |
| ನಾರಾಯಣ-ವಸಂತಲಕ್ಷ್ಮೀ | ಶ್ರುತಿ | ಕೃತಿ | | | | | | | |
| ಗಣಪತಿ-ಜಾಜಿ | ಅಶೋಕ | ಆಶಾ | | | | | | | |
| 4 | | | | | | | | | |
| ಕೃಷ್ಣಮೂರ್ತಿ-ಮಾಲತಿ | ಕೃಪಾ-ವೆಂಕಟೇಶ್ | ಕೈಲಾಶ್ | | | | | | | |
| ಪುಷ್ಪ-ಕೇಶವ | – | – | ಗುರುರಾಜ್-ರಮ್ಯ | | | | | | |
| ಹರಿ-ಪ್ರಭಾ | ಅನಿರುದ್ಧ | ಅಭಿರಾಮ್ | | | | | | | |
| ಉದಯ-ಉಷಾ | ಉಲ್ಲಾಸ್ | ಶ್ರೀವಾಸ | | | | | | | |
| ವಾಮನ-ಶಾಂತ | – | – | | | | | | | |
| ಮೋಹಿನಿ-ನಾಗರಾಜ | ರಶ್ಮಿ-ಶ್ರೀಶ | ಶ್ವೇತ-ಹರೀಶ್ | ರೋಹಿಣಿ | | | | | | |
| ಮೋಹನ್-ಸುಕನ್ಯಾ | ಅಂಕಿತಾ | ಅರ್ಪಿತಾ | | | | | | | |
| ಅನಸೂಯ-ಗಣಪತಿ | ಮಾನಸ-ಶ್ರೀನಿವಾಸ್ | ಅನುದೀಪ್ | | | | | | | |
| ಶೇಖರ | – | – | | | | | | | |
| 5 | | | | | | | | | |
| ರಮೇಶ-ಜಯಶ್ರೀ | ಅಮಿತ್ | ಅನುಷ್-ಅರವಿಂದ್ | | | | | | | |
| ಶಶಿ-ವೆಂಕಟರಮಣ | ಕವಿತಾ ಕಿಶೋರ್ | ಗುರುಪ್ರಸಾದ್-ಅಖಿಲಾ | ನಾಗೇಶ್ – ಪೂಜಾ | | | | | | |
| ಮಧು-ಸುಕನ್ಯ | ಶ್ರೀವತ್ಸ | ಶ್ರೀಪಾದ | | | | | | | |
| ಬಾಲು-ಸವಿತ | ಶುಭಾನಿ | ಶರಣ್ಯ | | | | | | | |
| ಸುನೀತ-ಮನೋಜ್ | ದೀಪಿಕಾ | ಶಶಾಂಕ್ | | | | | | | |
| ವಿಶ್ವನಾಥ್-ಸಂಧ್ಯ | ಶ್ರವಣ್ | ವರುಣ್ | | | | | | | |
| ಜ್ಯೋತಿ-ಕೃಷ್ಣಮೂರ್ತಿ | ಕೌಟಿಲ್ಯ | ಕೀರ್ತನ್ | | | | | | | |
| 6 | | | | | | | | | |
| ಗೋವಿಂದ-ಲಕ್ಷ್ಮೀ | ರಘುಪತಿ-ರಾಜೇಶ್ವರಿ | ಪದ್ಮಾವತಿ-ಮುರಳೀಧರ | | | | | | | |
| ಸರೋಜಿನಿ-ಶ್ರೀಪತಿ | ಸುಬ್ರಹ್ಮಣ್ಯ | ಸಂಧ್ಯಾ-ಕೇಶವ | | | | | | | |
| 7 | | | | | | | | | |
| ಶ್ರೀಕಾಂತ-ಶೈಲಜ | ಸುಪ್ರಿಯ ಪ್ರಶಾಂತ್ | | | | | | | | |
| | ಮಕ್ಕಳು-ಶಶಾಂಕ್-ಪ್ರತೀಕ್ಷಾ | | | | | | | | |
| ಶಶಿಕಾಂತ-ನಾಗರತ್ನ | ಶ್ರೀಶ | ಶ್ರೀನಿಧಿ | | | | | | | |
| ಉಷಾ-ಪ್ರಭಾಕರ | ಅಭಿಷೇಕ್-ರಮ್ಯ | | | | | | | | |
| ಜಯಂತಿ-ವೈಯನ್.ಭಟ್ | ಪರಿಮಳ-ಅಮಿತ್ | | | | | | | | |
| | ಮಗ – ಅದಿತಿ | | | | | | | | |
| ಉಮಾಕಾಂತ-ಲಕ್ಷ್ಮೀ | ಕಾವ್ಯ | | | | | | | | |
| ಲಕ್ಷ್ಮೀಕಾಂತ-ರಾಧಿಕಾ | ಅಕ್ಷತಾ | | | | | | | | |
| ಲತಾ-ವಿ.ಎಸ್.ಕೆ. ಹೊಳ್ಳ | ರೋಹಿತ್ & ರೋಶನ್ | | | | | | | | |
| ಗೀತಾ-ರವಿಕುಮಾರ್ | ಅಶ್ವಿನಿ | ಅರ್ಜುನ್ | | | | | | | |
| ಕೃಷ್ಣವೇಣಿ-ರಾಮ ಉಪಾಧ್ಯಾಯರ ಮೊಮ್ಮಕ್ಕಳು ಮತ್ತು ಮರಿಮಕ್ಕಳು | | | | | | | | | |
| ಶ್ರೀಕಲಾ-ಕೃಷ್ಣಮೂರ್ತಿ | ದೀಪಿಕಾ-ಕಿರಣ್ | ಪ್ರಿಯಾಂಕ | | | | | | | |
| ಶ್ರೀಲತಾ-ಶ್ರೀಶ | ಶ್ರೀಕರ | ಸೌಂದರ್ಯ | | | | | | | |
| ರಾಘವೇಂದ್ರ-ಉಷಾ | ಹೃಷಿಕೇಶ | | | | | | | | |
| ನಾರಾಯಣ-ಲಕ್ಷ್ಮೀ | ಅನಿರುದ್ಧ | ಅದಿತಿ | | | | | | | |
| ಉಮಾ-ಶ್ರೀನಿವಾಸ | ಅಭಿಷೇಕ್ | | | | | | | | |
| ನಾರಾಯಣ-ರಾಜಲಕ್ಷ್ಮೀ | ಶ್ರೀನಿಧಿ | ದುರ್ಗಾಪ್ರಸಾದ್ | | | | | | | |
| ಸವಿತಾ-ಹರೀಶ್ | ಅರುಣ್ | ಅಶ್ವಥ್ | | | | | | | |
| ವನಿತಾ-ಶ್ರೀಪತಿ | ಚಿನ್ಮಯ್ | | | | | | | | |
| ಗುರು-ದಿವ್ಯ | ಮನಸ್ವಿನಿ | | | | | | | | |
| ಸೌಮ್ಯ-ದೇವಿಪ್ರಸಾದ್ | ಶರಣ್ಯ | ಸೌಜನ್ಯ | ಸುದೀಪ್ ಕೃಷ್ಣ | | | | | | |
| ಗುರುಪ್ರಸಾದ್-ಸುಮನ | ಅನ್ವಿತಾ | | | | | | | | |
| ಪ್ರಸನ್ನ-ಭಾರ್ಗವಿ | ವೈಷ್ಣವಿ | ವೈಭವಿ | | | | | | | |
| ದಿವ್ಯ-ಪ್ರಕಾಶ್ | ಅಚಿಂತ್ಯ | | | | | | | | |

ಅಮ್ಮನ ಸಂಸಾರ

ಕೊಂಡಾಡಿ – ಕುದಿಗ್ರಾಮ – ಉಡುಪಿ

ನಾರಾಯಣ – ಕಾವೇರಿಯಮ್ಮ

| ಭೂಮಿ-ವೆಂಕಟ್ರಮಣ | ಚಂದ್ರಾವತಿ ಪಿ.ಎಲ್. ತಂತ್ರಿ | ಯಮುನ-ಪದ್ಮನಾಭ | ಕೃಷ್ಣವೇಣಿ – ರಾಮ | ರಾಮಕೃಷ್ಣ-ಲಲಿತ | ಗುರುರಾಜ-ಜಯಲಕ್ಷ್ಮೀ |
|---|---|---|---|---|---|
| | ಕೃಷ್ಣ | ಜನಾರ್ಧನ | ಸುಮತಿ | 8 ಹುಡುಗಿಯರು | ನಾರಾಯಣ |
| | ಹಯವದನ | ಇಂದಿರಾ | ಸುಲೋಚನ | 4 ಹುಡುಗರು | ವಿಷ್ಣುಮೂರ್ತಿ |
| | ಪದ್ಮ | ವಾಸುದೇವ | ಗೋಪಾಲಕೃಷ್ಣ | (ಹೆಸರು ಗೊತ್ತಿಲ್ಲ) | ರಾಮಮೂರ್ತಿ |
| | ವಾಸುದೇವ | ಸರೋಜ | ತ್ರಿವೇಣಿ | | ಅನುರಾಧಾ |
| | ಜಯ | ಲೀಲ | ನಾಗರಾಜ | | ವೀಣಾ |
| | ಸುನಂದ | ಮುರಳೀಧರ | ವಿಷ್ಣುಮೂರ್ತಿ | | ಗೀತಾ |
| | ರಾಮಮೂರ್ತಿ | ಗೀತ | ಆಶಾ | | |
| | ಮುರಳೀಧರ | ರಾಮು | | | |

ಶಿರ್ವ – ಮಾಣಿಬೆಟ್ಟು – ಮೂಡುಮಠದ ಕೃಷ್ಣವೇಣಿ – ರಾಮ ಉಪಾಧ್ಯಾಯರ ಮಗ

ಗೋಪಾಲಕೃಷ್ಣ ಉಪಾಧ್ಯಾಯ (G.R. Upadhyaya) 9480600910

ತನ್ನ 70ನೇ ವರ್ಷದಲ್ಲಿ ರಚಿಸಿ, ಇನ್ನಾ ದೇವಸ್ಥಾನದಲ್ಲಿ

ತಾ. 24–5–2017ರಂದು

ವಿತರಿಸಿದ ವಂಶಚಾರ್ಟ್

# NAMMAVARA - MOBAILE - DOORAVAANI

SUMATHI PADMANABHA BHAT RAGHAVENDRA -9945789005-USHA-9945614811-9945419505
SULOCHANA RAMACHANDRA UPADHYAYA-9443815523-AKKA-04175223293
BABU-9443096398
GOPALAKRISHNA SATHYABHAMA-9480600910-08242484016-GURU-9448622785
SUMANA-9008720120-SOWMYA-08255260032-9449385847
THRIVENI PRASANNA 9480485953-BHARGHAVI-9449770523
NAGARAJA SUMANGALA-9486261707-04175227916 DIVYA-9035026682-PRAKASH-9036026682
VISHNUMURTHI GAYATHRI-9945772373-SWATHI-7353252013-KARTHIK-8971568322
ASHA RAVI-9901535804
PUTTUR SAMPYA 9480063863 MANO 9663869221
LAXMINARAYANA-9980777494-SHREEKALA-08212522033-SHREELATHA-9945657810
UMA SHRINIVAS-9448972241-SABITHA-04027220550-HARISH-0924653593
VANITHA SHRIPATHI-9342062450-DIVYA GURU-9901949674
SOWMYA DEVI PRASAD POYYATHAYA-08255260032-9449385847 LAXMIYAKKA-9483582695
DODDATHOTA NARAYANA-08257284942-ASHA PRASAD-9481533877
SHALINI SHEKAR-8861097375-VIJAYADINESH-04994270260 DR SUMANA SUBBA RAO-9483623117
BADRIYA-9448203843 CHANDRIKA-9480237798 MALLIKA-8147473770-08212481802
RADHIKA-9448869870
VASANTHI SHREENIVAS-RAGHAVENDRA-98450074930803342696
SATHYANANDA-9686004537-HAREESH-9845190770
KRISHNA GURURAJ ACHAR-9886994321
BALAKRISHNA ACHAR-9483447246-08212445357-ANITHA VADIRAJ-9449173030
SHARADA MADAVA-08202534055
HAYAVADANA ACHAR-9880807666-08212515456-SARITHA SHIVA SHANKAR-9480230831
MADAVA ACHAR-9164354347-08202541526-PRASAD-9845444358
PRATHIBHA ASHWIN-9844048876-08242419762-08242440404
PADMAKSHI-9740060780 KMU-8970289345-HARI-8867583198 MOHANA-9611543169
MOHINI NAGARAJ-9845802232 ANASOOYA-9448155665
GURU THANTHRY-9980367807-08065597428 SUJA-9742697004 LATH-9480574262
SAVITA-08242258920-9481388733 ISARA-9880719210
PARAMESHWARI RAMACHANDRA-9986870096-08257316796-9141261250
VASANTHALAXMI-8453366425
GANAPATHI THANTRY-9480288364
VEDAVYASA THANTRY-9448627180 MAHALAXMI-9743080494-PADMAKSHI-9663771866
SHIBAROOR GOPALKRISHANA-08242270148-9448843435-USHA-9482912710-08242222380
KUTHETHOOR RATHNA-9483244363 POLLAKKA SHARADASHRINIVAS BHAT-08242481835
VASUDEVA ASHRANNA-9448902465 VENKATRAMANA-9481506730-HARI-9448480515
SRIKNT-9901928039 SHASHI-09868120840 USHA-08202528010 JAYANTHI GEETHA LATHA
PALLI VISHVA-9483909469 RAMSH-9845250471 MADU-9845396030 BALU-9845265180
INNA CHIKKI-9480531445 PADEBALI HAR-0820255464 KUNJUR-9480175264
PDUR RAMU-9632443663 HAYAVADN-9741492656 VASU-9448957004 HIRI MURALI-944821577
JANA-8242213288 GEETHA-08242478620
RAMU CHITPDY-08202527641, 9480266643 VISHNU-9483089423 ANU-9448393434
VEENA-9902461511 GEETA-05232324966
ADIGEYAVARU YERMAL-9481516626 BHASKR ACHAR-8971043016 ADVE RAMESH-9448250481
PUROHITH KUTHYRU RAMAKRISHNA THNTHRY-9481019760
INNA TEMPLE-08258268108, MUNDKUR TEMPLE-08258267967
INNA MUDDAN TEMPLE-9611649330 RAMADAS-9164297825
MAJUR RAMACHANDRA BHAT-9964474216 VENU-7411762767

# ನನ್ನ ಸಂಸಾರ


ಶ್ರೀನಿವಾಸ – ಸತ್ಯ
ಅನಂತಕೃಷ್ಣ – ಕಮಲ
ರಾಮ – ಕೃಷ್ಣವೇಣಿ
ಗೋಪಾಲಕೃಷ್ಣ – ಸತ್ಯಭಾಮ
19–5–1947 22–4–1954
ವಿವಾಹ: 12–5–1974
ಸೌಮ್ಯ(4.5.1975) ದೇವಿಪ್ರಸಾದ(27.6.1971)
ವಿವಾಹ: 24–5–1995
ಗುರುಪ್ರಸಾದ್(1.1.1979) ಸುಮನ(18.5.1988)
ವಿವಾಹ: 1–3–2012
ಶರಣ್ಯ(18.5.98)
ಸೌಜನ್ಯ(25.6.04)
ಸುದೀಪ್(25.2.09)
ಅನ್ವಿತಾ (12–12–2013)



# ನನ್ನ ಪರಿಚಯ



**ಜಿ.ಆರ್. ಉಪಾಧ್ಯಾಯ,** ಎ.ಎಂ., ಜಿ.ಡಿ. ಕಲಾವಿದ
ನಿವೃತ್ತ ಚಿತ್ರಕಲಾ ಸಹಾಯಕ ನಿರ್ದೇಶಕ
**'ಶ್ರೀ ಸತ್ಯಕಲಾ ನಿಕೇತನ'**, ಮಹಾತ್ಮ ನಗರ, ಕಾವೂರು,
ಮಂಗಳೂರು – 575 015. 0824–2484016, ಮೊ: 9480600910
ಇ–ಮೇಲ್:grupadhyayaartist@gmail.com
ವೆಬ್‌ಸೈಟ್: www.artistgurupadhyaya.weebly.com

ಚಿತ್ರಕಲೆಯನ್ನು ಭೋದಿಸಿ ಪ್ರೋತ್ಸಾಹಿಸಿದ ಗುರುಗಳು: **ಶ್ರೀ ಸಚ್ಚಿದಾನಂದ ಆಚಾರ್ಯ**
ಚಿತ್ರಕಲಾ ಅಧ್ಯಾಪಕರು, ಸೈಂಟ್‌ಮೇರೀಸ್ ಹೈಸ್ಕೂಲ್, ಶಿರ್ವ–ಮಂಚಕಲ್ಲು. ವರ್ಷ: 1960–1963

| | |
|---|---|
| ಹೆಸರು: | ಗೋಪಾಲಕೃಷ್ಣ |
| ತಂದೆ: | ಎಸ್.ಎಂ. ರಾಮ ಉಪಾಧ್ಯಾಯ |
| ತಾಯಿ: | ಕೃಷ್ಣವೇಣಿ |
| ಜನನ: | 19–05–1947 |
| ಜನನ ಸ್ಥಳ: | ಉಡುಪಿ ಜಿಲ್ಲೆಯ ಶಿರ್ವ ಗ್ರಾಮದ ಮಾಣಿಬೆಟ್ಟು ಮೂಡುಮಠ |
| ವಿದ್ಯಾಭ್ಯಾಸ: | 8ನೇ ತರಗತಿ ತನಕ: ಸೈಂಟ್ ಮೇರೀಸ್ ಹೈಸ್ಕೂಲ್, ಶಿರ್ವ, ಮಂಚಕಲ್ಲು<br>10ನೇ ತರಗತಿ ತನಕ: ಸೈಂಟ್ ಲಾರೆನ್ಸ್ ಹೈಸ್ಕೂಲ್, ಮೂಡುಬೆಳ್ಳೆ<br>(ಎಸ್‌ಎಸ್‌ಎಲ್‌ಸಿ 1964–65) |
| ಕಲಾ ಅಭ್ಯಾಸ: | 1965ರಿಂದ 1967 (ಸ್ಕೂಲ್ ಆಫ್ ಆರ್ಟ್) ಕಲಾ ಮಂದಿರ, ಧಾರವಾಡ. |
| ಹೈಯರ್ ಗ್ರೇಡ್ ಪರೀಕ್ಷೆ: | ರಾಜ್ಯದಲ್ಲಿ ದ್ವಿತೀಯ ರ್‍ಯಾಂಕ್ (ಚಿತ್ರಕಲಾ ಅಭ್ಯಾಸ ಮಾಡಿದ್ದು<br>ಧಾರವಾಡದಲ್ಲಿ ಹೊಟೇಲ್ ಸಪ್ಲಾಯರ್ ಆಗಿದ್ದುಕೊಂಡು) |
| ಆರ್ಟ್ ಮಾಸ್ಟರ್: | 1971 ರಾಜ್ಯದಲ್ಲಿ ದ್ವಿತೀಯ ರ್‍ಯಾಂಕ್. |
| ಡಿಪ್ಲೋಮ: | 1972 |
| ಚಿತ್ರಕಲೆ ಹೊಲಿಗೆ ಶಿಕ್ಷಕನಾಗಿ: | 1967ರಿಂದ 1980, ಸರಕಾರಿ ಪ್ರೌಢಶಾಲೆ, ಪಲಿಮಾರು, ಉಡುಪಿ. |
| ಚಿತ್ರಕಲಾ ಶಿಕ್ಷಕನಾಗಿ: | 1980ರಿಂದ 1983, ಸರಕಾರಿ ಪ.ಪೂ. ಕಾಲೇಜು, ಸಾಗರ, ಶಿವಮೊಗ್ಗ. |
| ಚಿತ್ರಕಲಾ ಪ್ರಶಿಕ್ಷಕನಾಗಿ: | 1983ರಿಂದ 2000 ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆ, ಬಲ್ಮಠ, ಮಂಗಳೂರು. |
| ಚಿತ್ರಕಲಾ ಉಪನ್ಯಾಸಕನಾಗಿ: | 2000–2003 ಸರಕಾರಿ ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು. |
| ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ: | 2003 ಜುಲೈ 1ರಿಂದ ಅಕ್ಟೋಬರ್ 31ರ ತನಕ, |
| ಬಳಿಕ ಸ್ವಯಂ ನಿವೃತ್ತಿ: | 31–10–2003 |

## ಸನ್ಮಾನಗಳು

* 2004ನೇ ಕೃಷ್ಣ ಜನ್ಮಾಷ್ಟಮಿ ಸಂದರ್ಭ **ಅದಮಾರು ಶ್ರೀ ಶ್ರೀ ವಿಶ್ವಪ್ರಿಯತೀರ್ಥ ಶ್ರೀಗಳಿಂದ ಸನ್ಮಾನ**
* 2008ರಲ್ಲಿ **ಪೇಜಾವರ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಗಳಿಂದ** ಕಲಾವಿದನಾಗಿ ಸನ್ಮಾನ (ಮೈಸೂರು ಕೃಷ್ಣ ಮಿತ್ರ ಮಂಡಳಿಯ ವತಿಯಿಂದ)
* 2013ರಲ್ಲಿ **ಶ್ರೀಯುತ ಉಪಾಧ್ಯಾಯ ಮೂಡುಬೆಳ್ಳೆ**ಯವರಿಂದ **'ಉಪಾಧ್ಯಾಯ ಸನ್ಮಾನ್–2013'** ಪ್ರಶಸ್ತಿ
* 2013ರಲ್ಲಿ **'ಸುಮ ಸೌರಭ'** ಪ್ರಶಸ್ತಿ

## ಚಿತ್ರಕಲಾ ಸಾಧನೆ

* 2008ರಲ್ಲಿ ಧರ್ಮಸ್ಥಳದ ಧರ್ಮಾಧಿಕಾರಿಗಳಾದ **ಡಾ.ಡಿ. ವೀರೇಂದ್ರ ಹೆಗ್ಡೆ**ಯವರಿಗೆ 61 ಕಲಾಕೃತಿಗಳ ಕೊಡುಗೆ.
* ಮಹಿಳೆಯರಿಗಾಗಿ **'ಕಸೂತಿ ಚಿತ್ರಕಲೆ'** ಪುಸ್ತಕ ರಚನೆ
* ಪ್ರಕೃತಿ ಚಿತ್ರದಲ್ಲಿ **ರೂಪ ವಿನ್ಯಾಸ**ಗೊಳಿಸುವುದು ಅಭ್ಯಾಸ
* ಪಲಿಮಾರು, ಪಡುಬಿದ್ರೆ, ಸಾಂತೂರು, ನಂದಿಕೂರು, ಇನ್ನ, ಕುಂಜಾರು, ಮಾಣಿಬೆಟ್ಟು, ಅಲೆಯೂರು, ಸಾಗರ, ಕಾವೂರು ದೇವಸ್ಥಾನದ ಗೋಡೆಗಳಲ್ಲಿ ಮತ್ತು ಇನ್ನ, ಸಾಂತೂರು, ಕಾವೂರು ಬ್ರಹ್ಮರಥಗಳಲ್ಲಿ ದೊಡ್ಡ ದೊಡ್ಡ ಗಾತ್ರದ ದೇವರ ಚಿತ್ರ ರಚನೆ.
* 8'x4' ಅಡಿ ಅಳತೆಯ **'ಕರಾವಳಿ ಜಾನಪದ' 7'x3'** ಅಳತೆಯ **'ನವ ಗೋಪಿಕಾ ಕೃಷ್ಣ'**
* 6'x3' ಅಳತೆಯ **'ಮಹಾ ನಡಾವಳಿ 2005'** ಕ್ಯಾನ್‌ವಾಸ್ ತೈಲ ಚಿತ್ರ
* ಹೊಸಬೆಟ್ಟು ಶ್ರೀ ರಾಘವೇಂದ್ರ ಮಠಕ್ಕೆ 9'x7' ಅಡಿ ಅಳತೆಯ ಅತ್ಯಧಿಕ ದೊಡ್ಡ **'ವಿಶ್ವರೂಪ ದರ್ಶನ'**
* ಹಲವಾರು **'ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ'**ಗಳು.
* **ದುಬೈಯ ಪ್ರಸಿದ್ಧ ವೀನಸ್ ಹೋಟೆಲ್**ನಲ್ಲಿ 5 ಯಕ್ಷಗಾನ ಚಿತ್ರಗಳು ಪ್ರದರ್ಶಿಸಲ್ಪಡುತ್ತಿವೆ.
* 2013ರಲ್ಲಿ ಇವರು ಬಿಡಿಸಿರುವ 250 ಚಿತ್ರಗಳ ಸುಶ್ರಾವ್ಯ ಸಂಗೀತದೊಂದಿಗೆ ಇರುವ **'ವಿಸಿಡಿ'**ಯನ್ನು ಮಾರಾಟಕ್ಕಾಗಿ ರಚಿಸಿದ್ದಾರೆ.
* ಇಂಟರ್‌ನೆಟ್ **'YOU TUBE'ನಲ್ಲಿ G.R. Upadhyaya** ಹೆಸರಿನಲ್ಲಿ ವೀಡಿಯೋ ರೆಕಾರ್ಡ್ ಆಗಿದೆ.
* **'ಆಳ್ವಾಸ್ ವಿಶ್ವ ನುಡಿಸಿರಿ'** ಸಂದರ್ಭ ಪ್ರದರ್ಶನ ಮತ್ತು ಮಾರಾಟಕ್ಕಾಗಿ ಕನ್ನಡ ಜ್ಞಾನಪೀಠ ಪುರಸ್ಕೃತರ ಭಾವಚಿತ್ರಗಳನ್ನು ಎಂಟು ಹೂಗಳಲ್ಲಿ ಬಿಡಿಸಿ **'ಕನ್ನಡ ಜ್ಞಾನಪೀಠ ಪುಷ್ಪಗಳು'** ಎಂದು ಶೀರ್ಷಿಕೆ ಕೊಟ್ಟಿರುತ್ತಾರೆ.
* ಅಡ್ಯಾರ್ ತುಳುಪರ್ಬಕ್ಕಾಗಿ **ಕಂಬ್ಳ** ತೈಲಚಿತ್ರ ಮತ್ತು ಪರ್ಯಾಯ **ಶ್ರೀ ಪೇಜಾವರ ಶ್ರೀಗಳ** ತೈಲಚಿತ್ರ.

# ಒಳಗೇನಿದೆ.......?

# ಆಕಾಶದಿಂದ 'ಮೂಡುಮಠ'ವನ್ನು ನೋಡಿದಾಗ



# ಹುಟ್ಟು ಬಾಲ್ಯ ಕಾಶೀಯಾತ್ರೆ, ಪ್ರಾಥಮಿಕ ಶಿಕ್ಷಣ

## ಹುಟ್ಟು





ಸರ್ವಜಿತು ನಾಮ ಸಂವತ್ಸರದ ವೈಶಾಖ ಕೃಷ್ಣಪಕ್ಷ ಉತ್ತರಾಯಣ ವಸಂತ ಋತುಃ ವೃಷಭ ಮಾಸ (ಬೇಶ) ದಿನಾಂಕ **19-05-1947ನೇ** ಸೋಮವಾರ **ಕೃಷ್ಣವೇಣಿ-ರಾಮ ಉಪಾಧ್ಯಾಯರ** 3ನೇ ಮಗುವಾಗಿ ಸಂಜೆ ಗಂಟೆ 5.00ಕ್ಕೆ ಗಂಡು ಮಗುವಾಗಿ ಕರ್ನಾಟಕದ ಉಡುಪಿ ತಾಲೂಕಿನ ಶಿರ್ವ ಗ್ರಾಮದ-ಮಾಣಿಬೆಟ್ಟಿನ ಮೂಡುಮಠದಲ್ಲಿ ಕತ್ತಲೆ ಕೋಣೆಯಲ್ಲಿ ನನ್ನ ಜನನ. **ಗೋಪಾಲಕೃಷ್ಣ** ಎಂದು ನಾಮಕರಣ ಮಾಡಿದರಂತೆ. ನಿತ್ಯ ನಕ್ಷತ್ರ ಭರಣೀಯಾದುದರಿಂದ **ಭರಣೀ ನಕ್ಷತ್ರ** ಮೇಷ ರಾಶಿ ನನ್ನದಾಗಿದೆ. ದೇಶದ ಪ್ರಖ್ಯಾತ ಚಿತ್ರ ಕಲಾವಿದ **ಪದ್ಮಶ್ರೀ ಕಟ್ಟಿಂಗೇರಿ ಕೃಷ್ಣ ಹೆಬ್ಬಾರರ** ಹುಟ್ಟೂರ ಒಂದು ಮೈಲು ದೂರದಲ್ಲಿ ನನ್ನ ಮನೆ ಇದೆ. ತಂದೆಯವರು ಮತ್ತು ಹೆಬ್ಬಾರರು ಆತ್ಮೀಯ ಗೆಳೆಯರಾಗಿದ್ದರಂತೆ.

## ನಾನು ಹುಟ್ಟಿದ ಮನೆ ಮೂಡುಮಠ





ಮಾಣಿಬೆಟ್ಟಿನಲ್ಲಿ ನಾನು ಜನಿಸಿದ ಸಮಯ **"ಮೂಡುಮಠ"** ಕ್ಕೆ 100 ಮುಡಿ ಅಕ್ಕಿ (ಅಕ್ಕಿ ತುಂಬಿಡಲು ನೆಲಮಾಳಿಗೆ ಇತ್ತು). 10-15 ಒಕ್ಕಲು ಮನೆಯವರಿಂದ ಗೇಣಿ ಬರುತ್ತಿತ್ತು. ಒಂದು ಜತೆ ಕೋಣಗಳು ಒಂದು ಜತೆ ಎತ್ತುಗಳು (ಎತ್ತಿನ ಗಾಡಿ) 7-8 ದನಕರುಗಳನ್ನು ಸಾಕುತ್ತಿದ್ದ ಸಮಯ, 25-30 ಜನ ದಿನಾ ಉಂಡು ಮಲಗುತ್ತಿದ್ದು - ಮುದುಕರು, ಗಂಡಸರು, ಹೆಂಗಸರು, ಮಕ್ಕಳು, ಮರಿಮಕ್ಕಳು ಒಗ್ಗಟ್ಟಿನಲ್ಲಿದ್ದು ಕೂಡಿ ಬಾಳಿ ಬೆಳಗಿದ ಮನೆ **"ಮೂಡುಮಠ"**. ಅಂದು ಈ ಮನೆಯ ಯಜಮಾನ **ಶ್ರೀಯುತ ಅನಂತ ಭಟ್** ಇವರನ್ನು ನಾನು ನೋಡಲಿಲ್ಲ. ಇವರು ನೀಡುತ್ತಿದ್ದ ಆಯುರ್ವೇದ ಮದ್ದಿಗಾಗಿ ಜ್ಯೋತಿಷ್ಯ ಪ್ರಶ್ನೆಗಾಗಿ ಹತ್ತಾರು ಮೈಲಿಗಳಿಂದ ಜನ ಬರುತ್ತಿದ್ದರಂತೆ. ಇವರ ಹೆಸರಿನಿಂದಾಗಿ ಮನೆಗೆ ಪ್ರಖ್ಯಾತಿ ಬಂದಿತ್ತು. ಮೂಡುಮಠದ ಮನೆದೇವರು **"ಶ್ರೀ ಲಕ್ಷ್ಮೀನಾರಾಯಣ"** ದಿನಾ (ಎರಡು ಪಾವು) ಅರ್ಧ ಕಿಲೋ ಅಕ್ಕಿಯ ನೈವೇಧ್ಯ ಸಮರ್ಪಿಸಿ ಪೂಜೆ ಮಾಡಬೇಕು. ನಮ್ಮ ಮನೆಯು ಮಳೆ ಬರುವ ಸಂದರ್ಭದಲ್ಲೂ 200-225 ಜನ ಊಟಕ್ಕೆ ಕುಳಿತು ಊಟ ಮಾಡುವಷ್ಟು ಸ್ಥಳಾವಕಾಶ ಹೊಂದಿದೆ. ಒಳ ಅಂಗಳದ ಮನೆ 3 ಕಡೆ ಮಾಳಿಗೆ, 3 ಬದಿ ಚೌಕಿ, ಚಾವಡಿ ಕೋಣೆ, ನಮ್ಮ ಮನೆಯಲ್ಲಿ ಹೆರಿಗೆಗಾಗಿ ಒಂದು ಕತ್ತಲೆ ಕೋಣೆ ಇತ್ತು. ಅದರ ಒಳಗಿಂದ 7-8 ಮೆಟ್ಟಲು ಕೆಳಗೆ ನೆಲಮಾಳಿಗೆ ಕೋಣೆ ಇತ್ತು. ಇದು ಬ್ರಿಟಿಷರು ಅಕ್ಕಿ ಭತ್ತ ಜಪ್ತಿಗೆ ಬಂದಾಗ ಗುಟ್ಟಾಗಿ ಅಕ್ಕಿಮುಡಿಯನ್ನು ಜೋಪಾನವಾಗಿ ಇರಿಸಲು ಬಳಸುತ್ತಿದ್ದ ಕೋಣೆಯಂತೆ. 100 ಮುಡಿ ಇದರೊಳಗೆ ತುಂಬುವಷ್ಟು ದೊಡ್ಡ ಗಾತ್ರದ್ದಾಗಿತ್ತು.

# ನನ್ನ ಅಪ್ಪನ ಸಂಸಾರ

**ಶ್ರೀ ಎಸ್.ಎಂ. ರಾಮ ಉಪಾಧ್ಯಾಯ** ಮತ್ತು **ಕೃಷ್ಣವೇಣಿಯವರಿಗೆ** 3 ಗಂಡುಮಕ್ಕಳು, 4 ಜನ ಹೆಣ್ಣುಮಕ್ಕಳು. **ಸುಮತಿ, ಸುಲೋಚನ, ಗೋಪಾಲಕೃಷ್ಣ** (ಜಿ. ಆರ್. ಉಪಾಧ್ಯಾಯ) **ತ್ರಿವೇಣಿ, ನಾಗರಾಜ, ವಿಷ್ಣುಮೂರ್ತಿ, ಆಶಾ.**

1. **ಸುಮತಿ** ಅಕ್ಕನವರ ಗಂಡ **ಮುಂಡ್ಕೂರು ಶ್ರೀ ಪದ್ಮನಾಭ ಭಟ್** ಅವರಿಗೆ **ರಾಘವೇಂದ್ರ, ನಾರಾಯಣ, ಶ್ರೀಕಲಾ, ಶ್ರೀಲತಾ** ಎಂಬ ನಾಲ್ಕು ಮಕ್ಕಳು (ಇವರು ಈಗ ಮೈಸೂರಿನಲ್ಲಿ ಇದ್ದಾರೆ).
2. **ಸುಲೋಚನ** ಅಕ್ಕನವರ ಗಂಡ **ಪಾದೂರು ಶ್ರೀ ರಾಮಚಂದ್ರ ಉಪಾಧ್ಯಾಯ, ಶಾಂತ, ಉಮಾ, ನಾರಾಯಣ, ಸಬಿತಾ, ವನಿತಾ, ಗುರುಕೃಷ್ಣ**ರೆಂಬ ಆರು ಜನ ಮಕ್ಕಳು. (ಇವರು ಈಗ ತಿರುವಣ್ಣಾಮಲೈಯಲ್ಲಿ ಉಡುಪಿ ಬೃಂದಾವನ ಹೊಟೇಲ್ ನಡೆಸುತ್ತಿದ್ದಾರೆ).
3. **ಗೋಪಾಲಕೃಷ್ಣ ರಾಮ ಉಪಾಧ್ಯಾಯ (ಜಿ.ಆರ್. ಉಪಾದ್ಯಾಯ)**ರ ಹೆಂಡತಿ **ಸತ್ಯಭಾಮ.** ಇವರಿಗೆ **ಸೌಮ್ಯ, ಗುರುಪ್ರಸಾದ್** ಎಂಬ ಎರಡು ಮಕ್ಕಳು. (ಕಾವೂರಿನಲ್ಲಿ ಕಂಪ್ಯೂಟರ್ ಜಾತಕ ಮಾಡಿಕೊಡುತ್ತಾ ಇದ್ದೇನೆ).
4. **ತ್ರಿವೇಣಿ**ಯ ಗಂಡ **ಪುನರೂರು ಗೋಪಾಲ್ ಮುಚ್ಚಿಂತಾಯ** (ನಿಧನರಾಗಿದ್ದಾರೆ) ಈಗ ಮಗನೊಂದಿಗೆ (**ಗುರುಪ್ರಸನ್ನ** ಎಂಬ ಒಬ್ಬ ಮಗ) ಇದ್ದಾರೆ.
5. **ಎಸ್.ಎಂ. ನಾಗರಾಜ ಉಪಾಧ್ಯಾಯ** ಹೆಂಡತಿ **ಸುಮಂಗಲಾ, ದಿವ್ಯ** ಮತ್ತು **ಶ್ರೀರಾಮ** ಎಂಬ ಇಬ್ಬರು ಮಕ್ಕಳು (ಇವನು ಈಗ ತಿರುವಣ್ಣಾಮಲೈಯಲ್ಲಿ ಭಾವನವರ ಹೊಟೇಲಿನಲ್ಲಿ ಮೆನೇಜರ್ ಆಗಿ ಇದ್ದಾನೆ).
6. **ವಿಷ್ಣುಮೂರ್ತಿ ಉಪಾಧ್ಯಾಯ**ನ ಹೆಂಡತಿ **ಗಾಯತ್ರಿ, ಸ್ವಾತಿ** ಮತ್ತು **ಕಾರ್ತಿಕ್** ಎಂಬ ಇಬ್ಬರು ಮಕ್ಕಳು (ಇವನು ಮಾಣಿಬೆಟ್ಟಿನ ದೇವಸ್ಥಾನದ ಅರ್ಚಕನಾಗಿ ಮೂಡುಮಠದಲ್ಲಿ ಇದ್ದಾನೆ).
7. **ಆಶಾ**ಳ ಗಂಡ ಉಡುಪಿ **ಶ್ರೀ ರವಿಕೆದ್ಲಾಯ** (ರವಿಕೆದ್ಲಾಯರು ದಿವಂಗತರಾಗಿದ್ದಾರೆ). **ಕಿರಣ್** ಮತ್ತು **ಅರುಣ್** ಎಂಬ ಇಬ್ಬರು ಮಕ್ಕಳು (ಇವಳು ಎಂ.ಜಿ.ಎಂ ಕಾಲೇಜಿನಲ್ಲಿ ಕ್ಲಾರ್ಕ್ ಆಗಿದ್ದು ಉಡುಪಿಯಲ್ಲಿ ದಿ| ವಿ.ಜಿ. ಕೆದ್ಲಾಯರ ಮಾವನ ಮನೆಯಲ್ಲಿ ಇದ್ದಾಳೆ).

## ಬಾಲ್ಯ

ಒಂದು ಗಂಡು ಮಗು ಜನನವಾಗಿ ಸ್ವಲ್ಪ ಸಮಯದ ನಂತರ ಮರಣ ಹೊಂದಿದ ಕಾರಣ ಬಳಿಕ ಎರಡು ಹೆಣ್ಣು ಮಕ್ಕಳ (ಸುಮತಿ, ಸುಲೋಚನ) ಜನನವಾದ ಕಾರಣ ತಂದೆ ತಾಯಿಯ ದೇವರ ಹರಕೆಯಿಂದ ನನ್ನ ಜನನವಾಯಿತಂತೆ. ನನಗೆ **"ಗೋಪಾಲಕೃಷ್ಣ"** ಎಂದು ನಾಮಕರಣ ಮಾಡಿದರಂತೆ. ನನ್ನ ಚಿಕ್ಕಮ್ಮ **ಪದ್ಮಾಕ್ಷಿ** – ಚಿಕ್ಕಪ್ಪ **ಶ್ರೀನಿವಾಸ** ಇವರಿಗೆ 6 ತಿಂಗಳ ಮೊದಲು ಪ್ರಥಮ ಪುತ್ರನಾಗಿ ಹುಟ್ಟಿದ ಮಗುವಿಗೆ **"ಕೃಷ್ಣಮೂರ್ತಿ"** ಎಂತಲೂ, ಒಂದು ವರ್ಷ ಮೊದಲು ತಂದೆಯ ತಂಗಿ **ಪದ್ಮಾವತಿ** ಅತ್ತೆ –



**ರಾಮರಾಯ** (ಶಿರ್ವ ಗ್ರಾಮದ ಶಾನುಭೋಗ)ರ ಪ್ರಥಮ ಪುತ್ರನಿಗೆ **"ಶ್ರೀಕಾಂತ"**ನೆಂತಲೂ – ತಂದೆಯ ಹಿರಿಯ ಅಕ್ಕ **ಜಲಜ ಅತ್ತೆ – ವಿಠಲದಾಸರ** ತೃತೀಯ ಪುತ್ರ (ಜನನ 22-6-1947)ನಿಗೆ **"ಹಯವದನ"**ನೆಂತಲೂ ನಾಮಕರಣ ಮಾಡಿದ್ದರಂತೆ. ಒಂದು ದಿನ ಮಾಣಿ ಬೆಟ್ಟಿನ ಮೂಡುಮಠದಲ್ಲಿ ಅತ್ಯಾನಂದದ ಸುದಿನ. (ಶ್ರೀಕಾಂತ, ಕೃಷ್ಣಮೂರ್ತಿ, ಗೋಪಾಲಕೃಷ್ಣ, ಹಯವದನರೆಂಬ ನಾಲ್ಕು ಮಂದಿ ಮಕ್ಕಳಾದ ನಮ್ಮನ್ನು ನಾಲ್ಕು ತೊಟ್ಟಿಲಲ್ಲಿ ಮಲಗಿಸಿಟ್ಟಿದ್ದ ದೃಶ್ಯ.) ನನ್ನ ಅಮ್ಮನ ಸವಿನೆನಪಿನಲ್ಲಿ ಮರೆಯದ ದಿನ. ಬಳಿಕ ನಾಲ್ಕು ಮಕ್ಕಳಿಗೂ ದೃಷ್ಟಿ ತಾಗಬಾರದೆಂದು ದೃಷ್ಟಿ ತೆಗೆಯಲಾಯಿತಂತೆ.

1. **ಶ್ರೀಕಾಂತ**: ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಹುದ್ದೆಯಲ್ಲಿದ್ದು ಹೆರ್ಗದಲ್ಲಿ ನಿವೃತ್ತರಾಗಿದ್ದಾರೆ.
2. **ಕೃಷ್ಣಮೂರ್ತಿ**: ಸಿಂಗಾಪುರದಲ್ಲಿ ಇಂಜಿನಿಯರ್ ಆಗಿದ್ದು ಈಗ ನಿವೃತ್ತರಾಗಿ ಪಡುಮಠದಲ್ಲಿ ಇದ್ದಾರೆ.
3. **ಗೋಪಾಲಕೃಷ್ಣ**: ರಾಜ್ಯದ ಅತ್ಯುನ್ನತ ಹುದ್ದೆ **"ಚಿತ್ರಕಲಾ ಸಹಾಯಕ ನಿರ್ದೇಶಕ"** ವೃತ್ತಿಯಲ್ಲಿ ನಿವೃತ್ತರಾಗಿ ಕಾಪೂರಿನಲ್ಲಿ ಇದ್ದಾರೆ.(ನಾನು)
4. **ಹಯವದನ:** ಮೈಸೂರಿನ ನಾಲ್ಕು ಹೊಟೇಲಿನ ಮಾಲಿಕರಾಗಿದ್ದು ಮೈಸೂರಿನ ಯಾದವಗಿರಿಯಲ್ಲಿ ವಾಸವಾಗಿದ್ದಾರೆ.

ಬಾಲ್ಯದಲ್ಲಿ ನನ್ನ ತಂದೆಯವರು ಮಣ್ಣಿನಿಂದ ದಶಾವತಾರದ ಮೂರ್ತಿಗಳನ್ನು ಮಾಡಿದ್ದರಲ್ಲಿ **ಒಂದು ಮೂರ್ತಿ** ಈಗಲೂ ನನ್ನ ಮನೆ ಮೂಡುಮಠದಲ್ಲಿ ಇದೆ. ಕಲ್ಲುಗಳನ್ನು ತೇದು ಮಾಡಿದ ಬಣ್ಣಗಳಿಂದ ಮೂರ್ತಿಗಳಿಗೆ ಬಣ್ಣ ಕೊಡುತ್ತಿದ್ದರಂತೆ ಅಂತಹ ಬಣ್ಣಗಳಲ್ಲೇ ಚಿತ್ರಗಳನ್ನೂ ಮಾಡುತ್ತಿದ್ದರೆಂದು ಅಮ್ಮ ಹೇಳುತ್ತಾರೆ. ಅವರ ಅಂದಿನ ಚಿತ್ರಕಲಾ ಪ್ರತಿಭೆಯನ್ನು ಕಂಡಾಗ ನನ್ನ ಪ್ರತಿಭೆ ಏನೂ ಸಾಲದು. ಗೋಡೆಯಲ್ಲಿ ಇರಿಸಬಹುದಾದ ಮಣ್ಣಿನ ಹಕ್ಕಿಯ ಜಿಂಕೆಯ ಮೂರ್ತಿಗಳನ್ನು ಮಾಡಿ ನೆರೆಕರೆಯವರಿಗೆ ಬಂಧುಗಳಿಗೆ ಕೊಡುತ್ತಿದ್ದರಂತೆ.

## ಕಾಶೀಯಾತ್ರೆ

ನನ್ನ ನಾಲ್ಕನೇ ವರ್ಷದಲ್ಲಿ ಹಿರಿಯರು ಕೆಲವರು ಸೇರಿ ನನ್ನ ಅಮ್ಮನ ತಮ್ಮ **ಶ್ರೀ ಗುರುರಾಜ ಭಟ್ಟ** (ಚಿಪ್ಪಾಡಿ) ಅಮ್ಮ ಅಪ್ಪ ಇದ್ದು ಕಾಶೀಯಾತ್ರೆ ಮಾಡುವುದಾಗಿ ನಿಶ್ಚಯಿಸಿದರಂತೆ. (ಅಮ್ಮ ಗರ್ಭಿಣಿಯಾಗಿದ್ದು ನಾನು 4 ವರ್ಷದ ಮಗುವಾಗಿದ್ದ ವೇಳೆ ನನ್ನ ನೆನಪಿನಲ್ಲಿ ಒಂದೆರಡು ಘಟನೆ ಹೊರತು ಪಡಿಸಿ ಯಾವುದೂ ನೆನಪಿನಲ್ಲಿ ಇಲ್ಲ). ರೈಲಿನ ಪ್ರಯಾಣದಲ್ಲಿ ಹಿರಿಯರೆಲ್ಲರನ್ನೂ **"ಮಾಮ"** ಎಂದು ಅವರು ಕೊಟ್ಟ ತಿಂಡಿಯನ್ನು ತಿನ್ನುತ್ತಾ ಓಡಾಡುತ್ತಿದ್ದ ನನ್ನನ್ನು ಅವರು ಎತ್ತಿ ಮುದ್ದಾಡುತ್ತಿದ್ದರಂತೆ. (ಓಡಾಡುತ್ತಿದ್ದ ಘಟನೆ ಸ್ವಲ್ಪ ಸ್ವಲ್ಪ ನೆನಪಿನಲ್ಲಿದೆ) ಯಾತ್ರೆ ಸಮಯ ಅವರವರ ತಿಂಡಿ ತಿನಸು ಅವರವರೇ ಮಾಡಿಕೊಳ್ಳಬೇಕಂತೆ. ಮಡಿಯಲ್ಲಿ ಸ್ನಾನ ಮಾಡಿದ ತಿಂಡಿಯನ್ನು ಹೆಂಗಸರು ಮಾಡಿ ಅವರ ಮನೆಯವರೆಲ್ಲರಿಗೆ ಬಡಿಸಿದ ಬಳಿಕ ತಾವು ತಿನ್ನುವ ಕ್ರಮ.

ಯಾತ್ರೆಯಲ್ಲಿ ಅಡುಗೆಗೆ ಬೇಕಾದ ಪಾತ್ರೆಗಳನ್ನು ಅವರವರೇ ಕೊಂಡು ಹೋಗಬೇಕಂತೆ. ಹಾಗೆ ಒಂದು ಮರದಡಿ ಅಮ್ಮ ಚಪಾತಿ ಮಾಡಿ ಮೊದಲು ಮಗುವಾದ ನನಗೆ ಎಲೆಯಲ್ಲಿ ಬಡಿಸಿದ್ದರೂ ಅದು ಬಿಸಿ ಇದ್ದ ಕಾರಣ ಸ್ವಲ್ಪ ತಡೆದು ತಿನ್ನುವುದಾಗಿ ಹೇಳಿ ಇನ್ನೊಂದು ಚಪಾತಿ ಮಾಡಲು ಅಮ್ಮ ಒಲೆ ಬಳಿ ತಿರುಗಿದಾಗ ನನ್ನ ಚಪಾತಿಯನ್ನು ಮಂಗವೊಂದು ಬಂದು ಹಿಡಿದುಕೊಂಡು ಓಡಿ ಹೋಗಿ ನಾನು ಗೋಳೋ ಎಂದು ಕೂಗಾಡಿದ ಸಂದರ್ಭ ಸ್ವಲ್ಪ ಸ್ವಲ್ಪ ನೆನಪಿನಲ್ಲಿದೆ.

ಯಾತ್ರಾರ್ಥಿಗಳಾಗಿ ಹೋದಾಗ ಹಲವಾರು ನದಿಗಳಲ್ಲಿ ತೀರ್ಥಸ್ನಾನ ಮಾಡುವುದು ಸ್ವಾಭಾವಿಕ. ಹಾಗೆ ಅಪ್ಪ ಅಮ್ಮ ಮಾವ ಒಂದು ಛತ್ರದ ಮನೆಯಲ್ಲಿ ಉಳಕೊಂಡಿದ್ದರಂತೆ. ತೀರ್ಥ ಸ್ನಾನಕ್ಕೆಂದು ನದೀ ತೀರದಲ್ಲಿ ಸೇರಿದ್ದರು. ಸಾವಿರಾರು ಜನರಲ್ಲಿ ನಾನೂ ಒಬ್ಬ ಜನ್ಮ ರೂಪದಲ್ಲಿ ನಿಂತಿ ದ್ದೆನಂತೆ. ಜನರ ಮಧ್ಯದಲ್ಲಿ ಕೈ ತಪ್ಪಿದ ನನ್ನ ಅಮ್ಮ ಅಪ್ಪನನ್ನು ಕಾಣದಾದಾಗ ಅಳಲು ಪ್ರಾರಂಭಿಸಿ ಎಲ್ಲರ ಮುಖವನ್ನೂ ನೋಡುತ್ತಾ ಅಳುತ್ತಾ ಹೊಯ್ಗೆಯಲ್ಲಿ ನಡೆದಾಡಿದ್ದು ಸ್ವಲ್ಪ ನೆನಪಾಗುತ್ತಿದೆ. ಛತ್ರದ ಮನೆಯವರು ಅಳುತ್ತಿರುವ ನನ್ನನ್ನು ಎತ್ತಿಕೊಂಡು ಹೋಗಿ ಅಮ್ಮನನ್ನು ತೋರಿಸಿದ್ದು ನೆನಪಿನಲ್ಲಿದೆ. ನನ್ನ ಅಪ್ಪ ಮಾಣಿಬೆಟ್ಟಿನ ಊರಿನ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಪೂಜೆಯ ಅರ್ಚಕರಾಗಿದ್ದರು. ಒಮ್ಮೆ ದೇವಸ್ಥಾನದ ಮೂಲೆಯಲ್ಲಿ ಮೂತ್ರ ಮಾಡಿ ಅಪ್ಪನವರಿಂದ ಬೆತ್ತದಿಂದ ಪೆಟ್ಟು ತಿಂದು ಕೂಗಿದ್ದು ನೆನಪು.

## ಪ್ರಾಥಮಿಕ ಶಿಕ್ಷಣ




ಹೊಸ ಚಡ್ಡಿ ಅಂಗಿ (ಖಾಕಿ ಚಡ್ಡಿ, ಬಿಳಿ ಅಂಗಿ) ಹಾಕಿಕೊಂಡು ಬಿಳಿ ಗಾಂಧಿ ಟೊಪ್ಪಿ ಹಾಕಿಕೊಂಡು **ಗೊರಬು** (ಈಗಿನ ಕೊಡೆಯ ಬದಲಿಗೆ) ಮಳೆಗಾಲದ ನೀರಿನ ರಕ್ಷಣೆಗಾಗಿ ಉಪಯೋಗಿಸುವ ಸಾಧನ ತಲೆಗೆ ಸಿಕ್ಕಿಸಿಕೊಂಡಾಗ ಏನೋ ಸಂತೋಷವಾಯ್ತು. ನನಗೆ **"ತತ್ರ"** ಇತ್ತು. ಸ್ವಲ್ಪ ಶ್ರೀಮಂತ ಮನೆಯ ಮಕ್ಕಳಿಗೆ ಮಳೆಯ ರಕ್ಷಣೆಗಾಗಿ ಕೊಡೆಯ ಬದಲಿಗೆ ತತ್ರ ಕೊಡುತ್ತಿದ್ದರು. ನನ್ನನ್ನು ಅಮ್ಮ ಕರಕೊಂಡು ಹೋದದ್ದು ಒಂದು ಮನೆಗೆ. ನಮ್ಮ ಮನೆಯ ಮುಂದೆ ದೊಡ್ಡದಾದ ಬಯಲು ಗದ್ದೆಗಳಿವೆ. ಗದ್ದೆಯ ಹುಣಿಯಲ್ಲಿ ಒಂದು ಮನೆಗೆ ಹೋದೆವು. ಅಲ್ಲಿ ಹಲವು ಮಕ್ಕಳಿದ್ದರು. ಅವರು ಆಟ ಆಡಲು ನನ್ನನ್ನು ಸೇರಿಸಿಕೊಂಡರು. ನನಗೆ ಅಮ್ಮನನ್ನು ಬಿಟ್ಟು ಬಿಡಲು ಕಷ್ಟವಾದರೂ ಆಡಲು ತೊಡಗಿದೆ. ಅದು **"ಶಂಕರ ಮಾಸ್ಟ್ರ"** ಮನೆ. ನನ್ನ ತಂದೆಯವರೂ, ಅತ್ತೆಯವರೆಲ್ಲರೂ, ಅಕ್ಕನವರೂ ಕೂಡ ಇದೇ ಶಂಕರ ಮಾಸ್ಟ್ರ ಮನೆಗೆ ಹೋಗಿ ಶಾಲೆಗೆ ಹೋಗುತ್ತಿದ್ದರಂತೆ. ಊರಿನ ಪ್ರಾಥಮಿಕ ತರಗತಿಯ ಮಕ್ಕಳೆಲ್ಲಾ ಶಂಕರ ಮಾಸ್ಟ್ರ ಮನೆಯಲ್ಲಿ ಸೇರಬೇಕು. ಶಾಲೆ ಶುರುವಾಗಲಿಕ್ಕೆ ಒಂದು ಗಂಟೆಗೆ ಮುಂಚೆ ಕಚ್ಚೆ ಹಾಕಿಕೊಂಡು ಅಂಗಿ ಹಾಕಿಕೊಂಡು ಕೂದಲು ಕಟ್ಟಿ–ಕೊಂಡು ಬಿಳಿ ಕೊಡೆ ಕೈಗೆ ಸಿಕ್ಕಿಸಿಕೊಂಡು **"ಹಾಂ ... ಹೋಗುವ"** ಎಂದರೆ ಸಾಕು, ಅಲ್ಲಲ್ಲಿ ಅವರ ಮನೆ ಸುತ್ತು ಗೋಳಿ ಮರದ ಬೀಳಲಿಲ್ಲ ಜೋತಾಡುತ್ತಿದ್ದವರು, ಕಲ್ಲು ಬಂಡೆಯಲ್ಲಿ ಜಾರುತ್ತಿದ್ದವರು, ಟೊಂಕ ಆಡುವವರು, ಜಿಬುಲಿ ಆಟದವರು ಎಲ್ಲಾ ತಮ್ಮ ತಮ್ಮ ಕೈಚೀಲ, ಗೊರಬು, ತತ್ರ ಹಿಡಿದುಕೊಂಡು ಸಾಲಾಗಿ ನಿಂತುಕೊಂಡು ಮಾಸ್ಟ್ರು

## ತಂದೆ ತಾಯಿ ಗುರು ಹಿರಿಯರ ಮನಸ್ಸು ನೋಯಿಸಿ ಮರಣದ ನಂತರ ಮಾಡವ ಶ್ರಾದ್ಧಕ್ಕೆ ಫಲವಿಲ್ಲ

ಅಂಗಳಕೆ ಕಾಲಿಟ್ಟ ಕೂಡಲೇ ಒಂದೇ ಸಾಲಿನಲ್ಲಿ ದೊಡ್ಡ ಮಕ್ಕಳು ಎದುರು ಸಣ್ಣ ಮಕ್ಕಳು ಹಿಂದೆ ಇದ್ದು 1 $^1/_2$ ಮೈಲಿ (ಈಗಿನ 3 ಕಿ.ಮಿ.) ನಡಕೊಂಡು ಹೋಗುತ್ತಿದ್ದುದು ಈಗಲೂ ಮರೆಯಲಾರದ ಘಟನೆಗಳಲ್ಲಿ ಒಂದಾಗಿದೆ. ಶಾಲೆಯ ಪಾಠ ಪ್ರವಚನಗಳಿಗಿಂತಲೂ ನಮಗೆ ಅಂದು ಹೊಳೆಯ ಬದಿಗೆ ಮಾಸ್ಟ್ರು ನಮನ್ನೆಲ್ಲಾ ಕರಕೊಂಡು ಹೋಗಿ ಅಲ್ಲಿಂದ ನಮ್ಮಿಂದದಾಗುವಷ್ಟು ದೊಡ್ಡ ಆವೆಮಣ್ಣನ್ನು ತಂದು ಶಾಲೆಯಲ್ಲಿ ವಿವಿಧ ರೀತಿಯಲ್ಲಿ ತರಕಾರಿಗಳನ್ನು, ಹಣ್ಣುಗಳನ್ನು, ಮೃಗಪಕ್ಷಿಗಳನ್ನು ಮಾಡಿದ್ದು ಈಗಲೂ ನೆನಪಾಗುತ್ತಿದೆ. ನಾನು ಮಾಡಿದ ಗಣಪತಿ ದೇವರ ಮೂರ್ತಿಯನ್ನು ಶಂಕರ ಮಾಸ್ಟ್ರು ಕಬಾಟಿನಲ್ಲಿ ಇರಿಸಿದ್ದರು. ನಮಗೆ 1ನೇ ತರಗತಿಯಿಂದ 5ನೇ ತರಗತಿ ತನಕ ಕಲಿಸಿದ ಗುರುಗಳು 1ನೇ ತರಗತಿ **ಅಲ್ಲಿ ಟೀಚರ್** 2,3 **ಎಚ್ಚು ಮಾಸ್ಟ್ರು** 4 ಮತ್ತು 5ನೇ ತರಗತಿಗೆ **ಶಂಕರ ಮಾಸ್ಟ್ರು**. ಶಂಕರ ಮಾಸ್ಟ್ರ ಸೂಚನೆಯಂತೆ ನಾವು ಮನೆಯಲ್ಲಿ ಒಂದು ತೆಂಗಿನಕ್ಕಾ ಸಿಪ್ಪೆಯನ್ನು 1 ತಿಂಗಳು ನೀರಿನಲ್ಲಿ ನೆನೆ ಹಾಕಿ ಅದನ್ನು ಗುದ್ದಿ ಬಡಿಯಲು ಮರದ ಸಾಧನ ಶಾಲೆಗೆ ಕೊಂಡುಹೋಗಿ ವೃತ್ತಿ ಅವಧಿಯಲ್ಲಿ ಅದನ್ನು ಗುದ್ದಿ ಬಡಿದು ನಾರು ತೆಗೆದು ಹಗ್ಗ ತಯಾರಿಸಲು ಕಲಿಸಿ ಕೊಡುತ್ತಿದ್ದರು. ಯಾವ ಮಕ್ಕಳು ಸಪೂರ ಹಗ್ಗ ರಚಿಸುತ್ತಾರೋ ಅವರಿಗೆ ಹೆಚ್ಚು ಮಾರ್ಕು ಸಿಗುತ್ತಿತ್ತು. ಮಧ್ಯಾಹ್ನದ ನಂತರದ ಸಮಯದಲ್ಲಿ ಆಟ ವೃತ್ತಿ ಇದ್ದುದರಿಂದ ಬೆಳಿಗ್ಗೆ ಶಾಲೆಗೆ ಹೋಗಲಾಗದಿದ್ದರೂ ಸಂಜೆ ಪಾಠ ತಪ್ಪಿ ಹೋದರೆ ತುಂಬಾ ಬೇಸರವಾಗುತ್ತಿತ್ತು. ಹುಲ್ಲಿನ ಮಾಡಿನ ಶಾಲೆ, ಮಣ್ಣಿನ ನೆಲ, ಕುಳಿತುಕೊಳ್ಳುತ್ತಿದ್ದ ಹರಕು ಮುರುಕು ಬೆಂಚು, ಶಾಲೆಯಲ್ಲಿ ಮೂಲೆಗಳಲ್ಲಿ ಗೆದ್ದಲು ಹುಳದ ಹುತ್ತ, ಮಳೆಗಾಲದಲ್ಲಿ ಅಲ್ಲಲ್ಲಿ ತರಗತಿಯ ಮಧ್ಯದಲ್ಲಿ ತೊಟ್ಟುತ್ತಿದ್ದ ಮಳೆಯ ಹನಿಗಳು ಎಂದೆಂದೂ ಮರೆಯಲಾರದ ಘಟನೆಗಳು. ಒಂದು ದಿನ ನಮ್ಮ ಮನೆಯಲ್ಲಿ ಸಂಭ್ರಮದ ವಾತಾವರಣವಿತ್ತು. ಅಡುಗೆ ಭಟ್ಟರು ಮುಂಚಿನ ದಿನ ಬಂದು ಸಿಹಿತಿಂಡಿ ತಯಾರಿಸಿಟ್ಟದ್ದು, ಮಾವನವರು ಅಜ್ಜನವರು ಬಂದು ಚಪ್ಪರ ಹಾಕುತ್ತಿದ್ದುದು, ಮರುದಿನ ಬೆಳಿಗ್ಗೆ ಎದ್ದು ಬಂದಿರುವ ಅತಿಥಿಗಳ ಮಕ್ಕಳೊಡನೆ ಆಡಲು ತೊಡಗಿದ ನನ್ನನ್ನು ಶಾಲೆಗೆ ಹೊರಡಿಸಿದಾಗ 'ಹೋಗುವುದೇ ಇಲ್ಲ' ಎಂದು ಹಠ ಹಿಡಿದ ಕಾರಣ ಅಪ್ಪ ಬೆತ್ತ ಹಿಡಿದುಕೊಂಡು ನನ್ನನ್ನು ದರದರನೆ ಎಳೆದುಕೊಂಡು ಹೋಗಿ ಶಂಕರ ಮಾಸ್ಟ್ರ ಮಕ್ಕಳ ಸಾಲಿಗೆ ನನ್ನನ್ನು ಸೇರಿಸಿದ್ದು ಈಗಲೂ ನೆನಪಿದೆ.

ನನ್ನ ಉಪನಯದ ಸಮಯ ಉಂಡಾರಿನ ನಮ್ಮ ಸಂಬಂಧಿಕರಲ್ಲಿಗೆ ನನ್ನನ್ನು ಅಮ್ಮ ಕರಕೊಂಡು ಹೋದರು. ಆವಾಗ ನನಗೆ 9ವರ್ಷ. 4ನೇ ತರಗತಿ ನಾನು ಮುಂದೆ ಓಡಿ ಕೇಪುಳ ಹಣ್ಣು, ಕರಂಡೆ ಹಣ್ಣು ಹೆಕ್ಕಿ ಹೆಕ್ಕಿ ತಿನ್ನುತ್ತಿದ್ದೆ. ಹೋಗುತ್ತಿದ್ದಾಗ ನನ್ನ ಕೈಯ ಬಲ ತಪ್ಪಿ ನನ್ನ ಬಲಕೈಯನ್ನು ನೆಟ್ಟಗೆ ಮಾಡಲಾಗಲಿಲ್ಲ. ಬಳಿಕ ಏನಾಗಿದೆ ಎಂದು ನನಗೆ ಗೊತ್ತಿಲ್ಲ. ಗೊತ್ತಾದಾಗ ನನ್ನ ಅಪ್ಪನ ಅಕ್ಕನ ಗಂಡ ಮಾವನ (ಜಲಜಕ್ಕನ ಗಂಡ) **ವಿಠಲದಾಸಾಚಾರ್ಯರ** ಹೆಗಲ ಮೇಲೆ ಇದ್ದೆ. ಅವರು ನನ್ನನ್ನು ಹೆಗಲಿಲ್ಲ ಹೊತ್ತುಕೊಂಡು ಉಂಡಾರಿನಿಂದ ಮಾಣಿಬೆಟ್ಟಿಗೆ ಬರುತ್ತಿರುವುದನ್ನು ನೋಡಿ **"ಮಾಮ ಏನ್ ನಡತೊಂತು ಪೋಪೆ"** ಎಂದು ಹೇಳಿದ್ದು ನೆನಪಾಗುತ್ತಿದೆ. ನನ್ನ ಉಪನಯನದ ಸಂದರ್ಭ ನಮ್ಮ ಮನೆಯ ಚಾವಡಿಯಲ್ಲಿ ಅಕ್ಕಿಮುಡಿಯ ಮೇಲೆ ಕುಳಿತು ತುಂಬಾ ಜನರಿಂದ ಕವರ್ ತೆಗೆದುಕೊಂಡದ್ದು ಮಾತ್ರ ನೆನಪು.



ಗಣಪತಿಯ ಏಳು ಹೆಸರುಗಳನ್ನು
ಕಂಡು ಹುಡುಕ ಬಲ್ಲಿರಾ ?

ARTIST: G. R. UPADHYAYA, KAVOOR

Find out ...?

# ಶಿರ್ವ ಸೈಂಟ್ ಮೇರೀಸ್ ಹೈಸ್ಕೂಲಿನಲ್ಲಿ ಪ್ರೌಢಶಿಕ್ಷಣ

ಪ್ರಾಥಮಿಕ 5ನೇ ತರಗತಿ ತನಕ ಪಂಜಿಮಾರು ಶಾಲೆಯಲ್ಲಿ ಮುಗಿಸಿದ ನನ್ನನ್ನು **ಶಿರ್ವ ಮಂಚಕಲ್ ಸೈಂಟ್ ಮೇರೀಸ್ ಹೈಸ್ಕೂಲ್‌ನಲ್ಲಿ ಪ್ರೌಢಶಿಕ್ಷಣಕ್ಕಾಗಿ** ಸೇರಿಸಿದರು. ಹೊಸ ನೀಲಿ ಚಡ್ಡಿ, ಬಿಳಿ ಅಂಗಿ ಶಾಲೆಯ ದುಂಡಗಿನ ಬ್ಯಾಜ್ ಈಗಲೂ ನೆನಪು. ಶಂಕರ ಮಾಸ್ತ್ರ ಮಕ್ಕಳು ಉಮೇಶ, ಚಂದ, ಮೀನಾಕ್ಷಿ, ಸರೋಜ ಹಾಗೂ ನಾನು ಎಲ್ಲ ಸೇರಿ ಮಂಚಕಲ್ಲಿನ ಶಾಲೆಗೆ ನಡಕೊಂಡು ಹೋಗಬೇಕಾಗಿತ್ತು. ನಾವು 3 ಮೈಲಿ (ಈಗಿನ 6ಕಿ.ಮಿ) ದೂರ ಎಲ್ಲರೊಂದಿಗೆ ಹೋಗುವಾಗ ನಡೆದ ಆಯಾಸವೇ ಇಲ್ಲವಾಗಿತ್ತು. ನಾನು ಶಿರ್ವ ಸೈಂಟ್ ಮೇರೀಸ್ ಹೈಸ್ಕೂಲಿಗೆ **ಪಸ್ಟ್ ಫಾರ್ಮ್** ತರಗತಿಗೆ ಸೇರಿದ್ದೆ. ನಮಗೆ ಪಾಠದೊಂದಿಗೆ ಪಠ್ಯೇತರ ಪಾಠಗಳು ಇದ್ದವು. ಅದರಲ್ಲಿ ಇದ್ದ ಆಸಕ್ತಿ ನನಗೆ ಪಾಠದಲ್ಲಿ ಇರಲಿಲ್ಲ. ವೃತ್ತಿಯಲ್ಲಿ ನಮಗೆ ಮೂರು ವಿಷಯಗಳಲ್ಲಿ ಒಂದನ್ನು ಆಯ್ಕೆ ಮಾಡಬಹುದಾಗಿತ್ತು. ಕೈಮಗ್ಗ, ತೋಟಗಾರಿಕೆ, ಹೊಲಿಗೆ ಈ ಮೂರರಲ್ಲಿ ನನ್ನನ್ನು ಕೈಮಗ್ಗದ ವಿಭಾಗಕ್ಕೆ ಸೇರಿಸಿದರು. ಕೈಮಗ್ಗದ ತರಗತಿಯಲ್ಲಿ ನಾನು ಅತೀ ಚಿಕ್ಕ ಹುಡುಗನಾಗಿದ್ದೆ. ಕೈಮಗ್ಗದ ಯಂತ್ರದಲ್ಲಿ ನೇಯುವಾಗ ಕಾಲು ಎಟುಕದ ಕಾರಣ 3–4 ತಿಂಗಳ ಬಳಿಕ ನನ್ನನ್ನು ತೋಟಗಾರಿಕಾ ವೃತ್ತಿ ವಿಭಾಗಕ್ಕೆ ಹಾಕಿದರು. ಆ ವಿಭಾಗದಲ್ಲಿ ತೋಟಗಳಿಗೆ ನೀರುಹಾಕುವುದು ಮಣ್ಣು ಹಾಕುವ ಕೆಲಸ ಗಿಡ ನೆಡುವ ಕೆಲಸ ಕೊಡುತ್ತಿದ್ದರು. ನನ್ನ ಅತೀ ಮೆಚ್ಚಿನ ಚಿತ್ರಕಲಾ ಶಿಕ್ಷಕರಾದ **ಶ್ರೀ ಸಚ್ಚಿದಾನಂದ ಆಚಾರ್ಯರು** ತೋಟಗಾರಿಕಾ ವಿಭಾಗಕ್ಕೂ ನಮಗೆ ಅಧ್ಯಾಪಕರಾಗಿದ್ದರು. ನಮಗೆ ಆಗಾಗ ತೋಟದ ಗಿಡಗಳಿಗೆ ನೀರು ಹಾಕುವ ಕೆಲಸ, ಮಣ್ಣು ಹಾಕುವ ಕೆಲಸ ಕೊಡುತ್ತಿದ್ದರು. ಆವಾಗ ಮಣ್ಣು ಹೊರುವಾಗ ನನ್ನ ಕೈಯಲ್ಲಿ ಬೊಕ್ಕೆ ಬಂದ ಕಾರಣ ನನ್ನನ್ನು 3 ತಿಂಗಳಲ್ಲಿ ಹೊಲಿಗೆ ಕಲಿಸುವ ವಿಭಾಗಕ್ಕೆ ಹಾಕಿದರು. ಆ ವಿಭಾಗವನ್ನು **"ಶ್ರೀ ಗಿಲ್ಬರ್ಟ್ ಮಾಸ್ತ್ರು"** ನೋಡಿ ಕೊಳ್ಳುತ್ತಿದ್ದರು. ಅವರೆಂದರೆ ನನಗೆ ಬಹಳ ಹೆದರಿಕೆ. ಅವರು (ಪಿ.ಟಿ.) ಆಟದ ಮಾಸ್ತ್ರು ಆಗಿದ್ದರು. ಅವರಿಂದ ನಾನು ಹೊಲಿಗೆ ವಿಷಯ ಕಲಿಯಲು ಪ್ರಾರಂಭಿಸಿದೆ. ಹೊಲಿಗೆ ಕಲಿಯಬೇಕಾದರೆ ಸೂಜಿ ನೂಲು ಬಟ್ಟೆ ಅತ್ಯಗತ್ಯ. ಕತ್ತರಿ ಬೇಕು, ಟೇಪು ಬೇಕು, ಬಟ್ಟೆ ಬೇಕು ಎಂದು ಆಗಾಗ ನಾನು ಅಪ್ಪನವರನ್ನು ದುಡ್ಡಿಗಾಗಿ ಬೇಡಿಕೊಂಡಾಗ ಹೊಲಿಗೆ ಕಲಿಯಲಿಕ್ಕೆ "ನೀನೇನು ಹುಡುಗಿಯಾ" ? ಎಂದು ಕೇಳಿದ್ದು ಈಗಲೂ ಬೈದ ಹಾಗೆ ಅನಿಸುತ್ತಿದೆ.

ನಾವು ದಿನಾ ಮನೆಯಿಂದ ಮೂರು ಮೈಲಿ ಶಾಲೆಗೆ ಹೋಗುವಾಗ ದಾರಿ ಮಧ್ಯದಲ್ಲಿ ಅಟ್ಟಿಂಜ ಎಂಬಲ್ಲಿ ಒಂದು ಹೊಳೆಯನ್ನು ದಾಟಬೇಕಾಗಿತ್ತು. ಮಳೆಗಾಲದಲ್ಲಿ ನೆರೆ ಬಂದು ನದಿ ತುಂಬಿ ಹರಿಯುವಾಗ ದೋಣಿಯಲ್ಲಿ ಕುಳಿತಾಗ ನಾನು ಹೆದರುತ್ತಿದ್ದೆ. ಕೆಂಪು ನೀರಿನ ಹೊಳೆಯ ಮಧ್ಯದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಗಾಳಿಗೆ ಅಲ್ಲಾಡುತ್ತಾ ಹೋಗುವ ದೋಣಿ, ಹೆದರುತ್ತಿದ್ದ ನಾನು ಇದೆಲ್ಲಾ ನಡೆದ ಕನಸುಗಳಂತೆ ಇವೆ. ಒಮ್ಮೆ ದಾಟಿದ್ದರೆ ಸಾಕು ಅನಿಸುತ್ತಿತ್ತು. ನನ್ನ ಗೆಳತಿ **ಮೀನಾಕ್ಷಿ** (ಶಂಕರ ಮಾಸ್ತ್ರ ಮಗಳು) ನನ್ನನ್ನು ನೋಡಿ ನಗುತ್ತಿದ್ದುದು ಈಗಲೂ ನೆನಪಾಗುತ್ತದೆ. ಶಾಲೆ ಬಿಟ್ಟ ನಂತ್ರ ಸೈಂಟ್ ಮೇರೀಸ್ ಶಾಲೆಯ ಎದುರಿನ ಗೇಟಿನ ಹತ್ತಿರ ಒಟ್ಟಾಗಿ ಮಾಣಿಬೆಟ್ಟಿಗೆ ಬರುತ್ತಿದ್ದೆವು (ಶಂಕರ ಮಾಸ್ತ್ರ ಮಕ್ಕಳು ನಾನೂ) ಆದಿತ್ಯವಾರ ರಜಾದಿನಗಳಲ್ಲಿ ನನ್ನನ್ನು ಅಮ್ಮ ಉಪನಯನ, ಮದುವೆ, ಶ್ರಾದ್ಧದ ಊಟಕ್ಕೆ ಕರಕೊಂಡು ಹೋಗುತ್ತಿದ್ದರು. ಆವಾಗ ನನಗೆ 2 ಪಾವಣೆ, 1 ಪಾವಣೆ, 1 ಆಣೆ ದಕ್ಷಿಣೆ ಸಿಗುತ್ತಿತ್ತು. (16 ಆಣೆ = 1 ರೂ.). ಈ ಹಣವನ್ನು ಶಾಲೆ ಬಿಟ್ಟು ಬರುವಾಗ (ಎಲ್ಲರೊಂದಿಗೆ ಹಂಚಿ ತಿನ್ನಲೆಂದು) ಗಟ್ಟಿಬಜೆ, ಗೋಳಿಬಜೆ ಹೊಟೇಲ್ ತಿಂಡಿ ತೆಗೆದುಕೊಳ್ಳಲು ಉಪಯೋಗಿಸುತ್ತಿದ್ದೆ. ಶಂಕರ ಮಾಸ್ತ್ರ ಮಕ್ಕಳೂ ನನಗೆ ತಿಂಡಿ–

ಕೊಡುತ್ತಿದ್ದುದು ನೆನಪಿನಲ್ಲಿದೆ. ನನಗೆ ಇಂಗ್ಲೀಷ್ ವಿಷಯ ಅತೀ ಕಷ್ಟವಾಗಿತ್ತು. ಅದನ್ನು ನನಗೆ ಬೋಧಿಸುತ್ತಿದ್ದವರು **ಶ್ರೀ ಗಣಪತಿ ಪ್ರಭುಗಳು** ಇವರನ್ನು ಕಂಡರೆ ನನಗೆ ಎಲ್ಲಿಲ್ಲದ ಭಯ. ನಾನು ಗಾತ್ರದಲ್ಲಿ ಚಿಕ್ಕವನಾದ ಕಾರಣ ಪ್ರಥಮ ಬೆಂಚು ನನ್ನ ಪಾಲಿಗೆ ಖಾಯಂ ಆಗಿತ್ತು. ದಿನಾಲೂ ಇಂಗ್ಲೀಷ್ ಪಾಠಕ್ಕೆ ನನಗೆ ಒಂದು ಪ್ರಶ್ನೆಯಾದರೂ ಇರುತ್ತಿತ್ತು. ಆ ಪ್ರಶ್ನೆಗೆ ಉತ್ತರ ನನ್ನ ಬಾಯಿಂದ ಬರುತ್ತಿರಲಿಲ್ಲ. ಸುರೋಳಿ ಬೆತ್ತದಿಂದ ಕೈಗೆ ಬೆನ್ನಿಗೆ ಪೆಟ್ಟು ತಿನ್ನುತ್ತಿದ್ದ ನನಗೆ ಗಣಪತಿ ಪ್ರಭುಗಳೆಂದರೆ ಕೈಕಾಲು ನಡುಗುತ್ತಿತ್ತು. ಎಷ್ಟು ಪ್ರಯತ್ನ ಪಟ್ಟರೂ, ಎಷ್ಟು ಬಾಯಿ ಪಾಠ ಮಾಡಿ ಉತ್ತರಿಸಲು ಪ್ರಯತ್ನಿಸಿದರೂ ಪ್ರಭು ಮಾಸ್ಟ್ರನ್ನು ಕಂಡಾಗ ಎಲ್ಲಾ ಮರೆತು ಹೋಗುತ್ತಿತ್ತು. ಹಾಗಾಗಿ 8ನೇ ತರಗತಿಯಲ್ಲಿ ಇಂಗ್ಲೀಷ್ ವಿಷಯದಿಂದಲಾಗಿ ಎರಡು ವರ್ಷ ಕಳೆಯಬೇಕಾಯ್ತು. ಗಣಪತಿ ಪ್ರಭುಗಳ ಪೆಟ್ಟಿನ ಹೆದರಿಕೆ ಇಲ್ಲದೇ ಇರುತ್ತಿದ್ದರೆ ಅವರು ನನಗೆ ಪ್ರೀತಿಯಿಂದ ಪೆಟ್ಟು ಕೊಡದೆ ಬೋಧಿಸುತ್ತಿದ್ದರೆ ನಾನೂ ಪಾಸಾಗುತ್ತಿದ್ದೆನೇನೋ ಎಂದೆನಿಸುತ್ತಿದೆ.

ನನ್ನ ತಂದೆಯವರಿಗೆ ಮಂಚಕಲ್ಲಿನ ಕುತ್ಯಾರು ರಸ್ತೆಯಲ್ಲಿ ಒಂದು ರೈಸ್‌ಮಿಲ್ ಇತ್ತು. ನಾನು 8ನೇ ತರಗತಿ ಫೈಲಾದ ಕಾರಣ ನನಗೆ ಶ್ರೀನಿವಾಸ ಚಿಕ್ಕಪ್ಪನವರ ಮಗ ಪ್ರಥಮ ಪುತ್ರ **ಕೃಷ್ಣಮೂರ್ತಿ** ಅಣ್ಣನವರೂ ನಮ್ಮ ಶಾಲೆಯಲ್ಲಿ 10ನೇ ತರಗತಿ ವ್ಯಾಸಂಗ ಮಾಡುತ್ತಿದ್ದವರನ್ನು ನಮ್ಮ ಮಂಚಕಲ್ಲಿನ ರೈಸ್‌ಮಿಲ್ಲಿನ ಹತ್ತಿರ ನಮ್ಮ ಬಿಡಾರದಲ್ಲಿ ರಾತ್ರಿ ಕುಳ್ಳಿರಿಸಿ ನನಗೆ ಇಂಗ್ಲೀಷ್ ಕಲಿಸಲು ಹೇಳಿದರು. ನನ್ನ ಕೃಷ್ಣಮೂರ್ತಿ ಅಣ್ಣ ಇಡೀ ಶಾಲೆಗೆ ಪ್ರಥಮ. ಅತೀ ಬುದ್ಧಿವಂತ ಅತೀ ಚುರುಕಾಗಿದ್ದರು. **ನನಗೆ ಇಂಗ್ಲೀಷ್ ವಿಷಯ ಕಲಿಸಿ 8ನೇ ತರಗತಿಯಲ್ಲಿ ಪಾಸಾಗುವಂತೆ ಮಾಡಿದವರಲ್ಲಿ ನನ್ನ ಅಣ್ಣನ ಪಾತ್ರ ಅತೀ ಮುಖ್ಯ. ಸುರೋಳಿ ಬೆತ್ತದ ಬಗ್ಗೆ** ಹೇಳುವುದಾದರೆ ಮುಂಚಿನ ನಮ್ಮ ಶಿಕ್ಷಕರು ಬೆತ್ತವನ್ನು ಹಿಡಿದುಕೊಳ್ಳದೆ ತರಗತಿ ಪ್ರವೇಶ ಮಾಡುತ್ತಿರಲಿಲ್ಲ. ಒಂದು ಜಾತಿಯ ಬಿದಿರು ಹುಲ್ಲು. ಇದರಲ್ಲಿ ಗಂಟು ಗಂಟು ಇರುತ್ತದೆ ಸಪುರವಾದ ಈ ಬೆತ್ತವನ್ನು ಉಡುಪಿಯಿಂದ ದಿನಾ ಬರುತ್ತಿದ್ದ **ಭೀಮರಾಯರಿಂದ** ತರಿಸುತ್ತಿದ್ದರು. ನೆಟ್ಟಗೆ ಇರುವ ಈ ಹುಲ್ಲಿನ ಕಡ್ಡಿಯನ್ನು ಬೆತ್ತವಾಗಿ ಬಳಸುತ್ತಿದ್ದರು. ಇದನ್ನು ಎತ್ತು ಕೋಣಗಳಿಗೆ ಹೊಡೆಯಲೂ ಬಳಸುತ್ತಿದ್ದರು. ಈ ಬೆತ್ತವನ್ನು ಅಧ್ಯಾಪಕರು ವಿದ್ಯಾರ್ಥಿಗಳಿಗೂ ಹೊಡೆಯಲು ಬಳಸುತ್ತಿದ್ದರು. ಸುರೋಳಿ ಬೆತ್ತದ ಪೆಟ್ಟಿನ ರುಚಿಯನ್ನು ನಾನು ದಿನಾಲೂ ತಿನ್ನುತ್ತಿದ್ದೆ. ಅದೊಂದು ದಿನ ನನ್ನ ಒಟ್ಟಿಗೆ ಕುಳಿತ್ತಿದ್ದ ಸಿರಿಲ್ ಎಂಬ ವಿದ್ಯಾರ್ಥಿ ಗಣಪತಿ ಪ್ರಭುಗಳ ಪೆಟ್ಟಿಗೆ ಪ್ರತೀಕಾರವಾಗಿ ಅವರು ತರಗತಿಗೆ ಬರುವ ಸ್ವಲ್ಪ ಮೊದಲು ತನ್ನ ಪೆನ್ನಿನ ಶಾಯಿಯನ್ನು ತಲೆಗೆ ಸುರಿದುಕೊಂಡು ಕುಳಿತ. ಪ್ರಭುಗಳು ನಿತ್ಯದಂತೆ ಪಾಠಕ್ಕೆ ಬಂದು ಸಿರಿಲ್‌ನನ್ನು ಪ್ರಶ್ನಿಸಿದಾಗ ಉತ್ತರ ತಿಳಿಯದೆ ಸಿರಿಲ್ ಸುಮ್ಮನೆ ಕೈಕಟ್ಟಿ ನಿಂತ ಅವನ ಕೂದಲನ್ನು ಎಡ ಕೈಯಲ್ಲಿ ಹಿಡಿದು ಬಲಕೈಯಲ್ಲಿ ನಾಲ್ಕು ಚಡಿ ಏಟು ಕೊಟ್ಟರು. ಬಳಿಕ ಎಡ ಕೈ ಬಿಡಿಸಿ ನೋಡಿದಾಗ ಕೈ ತುಂಬಾ ಶಾಯಿ ಇತ್ತು. ಇದನ್ನು ನೋಡಿದ ಪ್ರಭುಗಳು ಪುನಃ ನಾಲ್ಕು ಬಿಗಿದರು. ಕುರ್ಕಾಲು **ಅನಂತರಾಮ ಭಟ್ಟರು** ನಮ್ಮ ಸಾಮಾಜಿಕ ಅಧ್ಯಯನ ಪಾಠ ಬೋಧಿಸುತ್ತಿದ್ದರು. ಅವರ ಒಂದು ಕಾಲು ಗಿಡ್ಡವಾಗಿದ್ದು ನಡೆಯುವಾಗ ಕುಂಟುತ್ತಾ ನಡಿಯುತ್ತಿದ್ದರು. ಬಹಳ ಪಾಪದ ಅಧ್ಯಾಪಕರಾಗಿದ್ದರೂ ಸಿಟ್ಟು ಬಂದರೆ ವಿಶ್ವಾಮಿತ್ರರಂತೆ ಗುಡುಗುತ್ತಿದ್ದರು, ಹೊಡೆಯುತ್ತಿದ್ದರು. ಒಂದು ದಿನ ಸಮಾಜ ಅಧ್ಯಯನದ ವೇಳೆಯಲ್ಲಿ ಪಾಠ ಮಾಡುತ್ತಾ ಭಾರತ ದೇಶದಲ್ಲಿ ಜನ ಸಂಖ್ಯೆ ಹೆಚ್ಚಾಗುತ್ತಾ ಇದೆ. ಮಕ್ಕಳ ಸಂಖ್ಯೆ ಕಡಿಮೆ ಇರಬೇಕು ಎಂದರು. ಆವಾಗ ನನಗೊಂದು ಪ್ರಶ್ನೆ ಕೇಳಬೇಕೆಂದು ಎಣಿಸಿ ಸಾರ್... ನಿಮಗೆಷ್ಟು ಮಕ್ಕಳು? ಎಂದು ಧೈರ್ಯ ಮಾಡಿ

ಕೇಳಿಯೇ ಬಿಟ್ಟೆ. ಮಂಗ – ಪಟಿಂಗ ಎಂದು ಕಾಲು ಕುಂಟುತ್ತಾ ನಾನು ಕುಳಿತ್ತಿದ್ದ 3ನೇ ಬೆಂಚಿನ ಬಳಿ ಬಂದಾಗ ಬೆಂಚಿನ ಎಡ ತುದಿಯಿಂದ ಬೆಂಚಿನ ಬಲ ತುದಿಗೆ ಹೋಗಿಬಿಟ್ಟೆ ಹಾಗೆ 2 ಬಾರಿ ಸತಾಯಿಸಿದ ಬಳಿಕ ನನ್ನ ವಿಷಯ ಬಿಟ್ಟು ಪಾಠ ಪ್ರಾರಂಭಿಸಿದರು. ಅವರಿಗೆ ನಾನು ವಿದ್ಯಾರ್ಥಿಯಾಗಿ ಕೀಟಲೆ ಕೊಟ್ಟ ಕಾರಣ ಗುರು ಶಾಪದಿಂದಾಗಿ ನಾನು ಜೀವನ ಪರ್ಯಂತ ಅಧ್ಯಾಪಕನಾಗಿ ಜೀವನ ಕಳೆಯುವಂತಾಯ್ತು ಎಂದೆನಿಸುತ್ತಿದೆ.

# ಶ್ರೀ ಸಚ್ಚಿದಾನಂದ ಆಚಾರ್ಯ

## ಶಿರ್ವ ಸೈಂಟ್ ಮೆರೀಸ್ ಹೈಸ್ಕೂಲಿನ ಚಿತ್ರಕಲಾ ಮೂಲಗುರುಗಳು



**ನನ್ನ ಅತೀ ಪ್ರೀತಿಯ ಮೆಚ್ಚಿನ ಅಧ್ಯಾಪಕರ ವಿಷಯ ಹೇಳಲೇ ಬೇಕು. ಶ್ರೀಯುತ ಸಚ್ಚಿದಾನಂದ ಆಚಾರ್ಯರೆಂದರೆ ನನಗೆ ಬಹಳ ಇಷ್ಟ. ಯಾಕೆಂದರೆ ನನಗೆ ಚಿತ್ರಕಲೆ ತುಂಬಾ ಇಷ್ಟವಾದ ವಿಷಯ. ಅದನ್ನು ಪ್ರೋತ್ಸಾಹಿಸಿ ಬೋಧಿಸಿದ ಅಧ್ಯಾಪಕರು ಅವರು. ಕೆಳಗಿನ ತರಗತಿಯಲ್ಲಿ ಪ್ರಾರಂಭದಿಂದ ನನ್ನ ಎಲ್ಲಾ ಚಿತ್ರಗಳಿಗೂ "ಗುಡ್" ಎಂದು ಬರೆದು ಅಂಕ ನೀಡುತ್ತಿದ್ದರು. ಇದೇ ನನ್ನ ಚಿತ್ರಕಲಾಸಕ್ತಿಗೆ ಕಾರಣವಾಯ್ತು. ನಾನು ಬಿಡಿಸಿಕೊಡುತ್ತಿದ್ದ ಚಿತ್ರಗಳನ್ನು ಶಾಲೆಯ ಚಿತ್ರಕಲಾ ತೂಗು ಪತ್ತಳಿಕೆಯಲ್ಲಿ ಹಾಕುತ್ತಿದ್ದರು. ಹಾಗಾಗಿ ನಾನು ತುಂಬಾ ಚಿತ್ರ ಬಿಡಿಸಬೇಕು ನನ್ನ ಚಿತ್ರಗಳನ್ನು ಎಲ್ಲಾ ವಿದ್ಯಾರ್ಥಿಗಳು ನೋಡಬೇಕು. ಇದೆಲ್ಲಾ ನನ್ನ ಅನಿಸಿಕೆಯಾಗಿತ್ತು. ಶಾಲೆಯ ಹೆಚ್ಚಿನ ವಿದ್ಯಾರ್ಥಿಗಳು, ಅಧ್ಯಾಪಕರುಗಳು ಮೆಚ್ಚಿಗೆ ವ್ಯಕ್ತಪಡಿಸಿ ನನ್ನನ್ನು ಪ್ರೋತ್ಸಾಹಿಸಿದ ಕಾರಣ ನನಗೆ ತುಂಬಾ ಸಂತೋಷವಾಗುತ್ತಿತ್ತು. ಚಿತ್ರಕಲಾ ಅಧ್ಯಾಪಕರು ನನ್ನನ್ನು ಶಿಕ್ಷಕರ ಕೊಠಡಿಗೆ ಕರೆಸಿ ಬಣ್ಣ ಪೆನ್ಸಿಲ್ ಕೊಟ್ಟು ಕೆಲವು ಚಿತ್ರಗಳನ್ನು ಕೊಟ್ಟು ಬಿಡಿಸಲು ಹೇಳಿದ್ದು, ಶಿಕ್ಷಕರ ಕೊಠಡಿಯಲ್ಲೇ ನಾನು ಬಿಡಿಸುತ್ತಿದುದ್ದು ನಾನೆಂದಿಗೂ ಮರೆಯಲಾರೆ. ಹಸ್ತ ಪತ್ರಿಕೆಗಳಲ್ಲಿ ನನ್ನ ಹೆಚ್ಚಿನ ಚಿತ್ರಗಳನ್ನು ಹಾಕುತ್ತಿದ್ದರು. ಪ್ರತೀ ವರ್ಷ ವಾರ್ಷಿಕೋತ್ಸವದ ಸಂದರ್ಭ ನನಗೆ ಚಿತ್ರಕಲೆಯಲ್ಲಿ ಪ್ರಥಮ ಬಹುಮಾನ ಕಟ್ಟಿಟ್ಟ ಬುತ್ತಿಯಾಗಿತ್ತು ಎನ್ನುವುದಕ್ಕೆ ಖುಷಿಯಾಗುತ್ತದೆ. ಒಂದು ವರ್ಷದ ವಾರ್ಷಿಕೋತ್ಸವದ ಸಂದರ್ಭ ಪ್ರಥಮ ಬಹುಮಾನವಾಗಿ ಚಿತ್ರಕಲಾ ಅಧ್ಯಾಪಕರು ತಾವೇ ಸ್ವಂತ ಸ್ಟಂಪಿಂಗ್ ಪೌಡರಿನಲ್ಲಿ ಬಿಡಿಸಿ ತಯಾರಿಸಿದ ಶ್ರೀ ರವೀಂದ್ರನಾಥ ಟಾಗೋರರ ಚಿತ್ರವನ್ನು ನನಗೆ ನೀಡಿದ್ದರು. ಅದನ್ನು ಹಲವಾರು ವರ್ಷ ನಮ್ಮ ಮನೆಯಲ್ಲಿ ಕಾಯ್ದಿರಿಸಿದ್ದೆ. ನನ್ನ ಬಾಲ್ಯದಲ್ಲಿ ಚಿತ್ರಕಲೆಯನ್ನು ಪ್ರೋತ್ಸಾಹಿಸಿ ರಾಜ್ಯದಲ್ಲೇ ಅತ್ಯುನ್ನತ ಚಿತ್ರಕಲಾ ಸಹಾಯಕ ನಿರ್ದೇಶಕ ಹುದ್ದೆಗೇರುವಂತೆ ಮಾಡಿದ ಗುರುಗಳಿಗೆ ಸಾಷ್ಟಾಂಗ ಪ್ರಣಾಮಗಳು.**

ಶಿರ್ವ ಸೈಂಟ್ ಮೆರೀಸ್ ಹೈಸ್ಕೂಲಿನಲ್ಲಿ ನನಗೆ ಡ್ರಾಯಿಂಗ್‌ಗೆ ಶ್ರೀ ಸಚ್ಚಿದಾನಂದ ಆಚಾರ್, ವೃತ್ತಿಗೆ ಗಿಲ್ಬರ್ಟ್, ಇಂಗ್ಲೀಷ್‌ಗೆ ಟಾವ್ರೋ ಮತ್ತು ಗಣಪತಿ ಪ್ರಭು, ಕನ್ನಡಕ್ಕೆ ಅನಂತರಾಮ ರಾಮ ಭಟ್, ಲೆಕ್ಕಕ್ಕೆ ಮೆಂಡೊನ್ಸಾ ಹಿಂದಿಗೆ ಶ್ರೀನಿವಾಸ ತಂತ್ರಿ ಕನ್ನಡಕ್ಕೆ, ಕೆ.ಎಂ. ಹೊಳ್ಳರಿದ್ದರು. ಶಿರ್ವ ಸೈಂಟ್ ಮೆರೀಸ್ ಹೈಸ್ಕೂಲ್‌ನ ಬಗ್ಗೆ ಹೇಳುವಾಗ ನಮ್ಮ ಹೆಡ್‌ಮಾಸ್ತ್ರ ಬಗ್ಗೆ ಹೇಳಲೇಬೇಕಾದ ಕೆಲವು ವಿಷಯಗಳಿವೆ. ನಾನು ಕಲಿಯುತ್ತಿದ್ದಾಗ **ಶ್ರೀ ಎಲ್. ಮೆಂಡೋನ್ಸಾ** ಎನ್ನುವವರು ಮುಖ್ಯೋಪಾಧ್ಯಾಯರಾಗಿದ್ದರು. ಅವರ ಪೂರ್ಣ ಹೆಸರು **ಲೂಯಿಸ್ ಮೆಂಡೋನ್ಸಾ** ಇವರ ಶಿಸ್ತುಬದ್ಧವಾದ ವರ್ತನೆಗಳು ಇವರ ನಡೆ, ಇವರ ಉಡುಪು, ಇವರ ಸೂಟ್ ಬೂಟುಗಳ ಸುಂದರ ರೂಪ ನನ್ನ ಕಣ್ಣ ಮುಂದೆ ಈಗಲೂ ಇದೆ. ಸೈಂಟ್ ಮೆರೀಸ್ ಸಂಸ್ಥೆಯು ಮರೆಯಲಾರದಂತಹ ಮುಖ್ಯೋಪಾಧ್ಯಾಯರು

ಇವರಾಗಿದ್ದರು ಎಂಬುವುದರಲ್ಲಿ ಸಂಶಯವಿಲ್ಲ. ಇವರನ್ನು ನೋಡಿದರೆ ಯಾರಾದರೂ ಒಮ್ಮೆ ಗೌರವ ಕೊಟ್ಟು ತಲೆಬಾಗಲೇ ಬೇಕಾದಂತಹ ವ್ಯಕ್ತಿತ್ವ. ಸೈಂಟ್ ಮೆರೀಸ್ ಶಾಲೆಯಲ್ಲಿ ನಾನು ಓದುತ್ತಿದ್ದಾಗ ಎಂದರೆ (1959ರಿಂದ 1963ರ ತನಕ) ಮಹಡಿಯಲ್ಲಿ ಮುಖ್ಯೋಪಾಧ್ಯಾಯರ ಕೊಠಡಿ ಪ್ರಾರಂಭದಲ್ಲಿ ಇತ್ತು. ಬಳಿಕದ ಕೊಠಡಿಯಲ್ಲಿ ಅಧ್ಯಾಪಕರ ಕೊಠಡಿ ತರಗತಿಗಳು ಇದ್ದುವು. ಸ್ಟಡಿ ಬೆಲ್ ಹೊಡೆದ ಕೂಡಲೇ ಶಾಲೆ ಇಡೀ ನಿಶ್ಯಬ್ಧವಾಗುತ್ತಿತ್ತು. ಆ ಸಮಯದಲ್ಲಿ ಮುಖ್ಯೋಪಾಧ್ಯಾಯರು ಅವರ ಕೊಠಡಿಯಿಂದ ಹೊರಬಂದರೆಂದರೆ ಇಡೀ ಶಾಲೆಗೆ ಕೇಳಿಸುತ್ತಿತ್ತು. ಶೂಗಳ ಹೆಜ್ಜೆಯ ಶಬ್ಧ ಡಬ್..ಡಬ್. ಶಬ್ದದಿಂದ ನಮ್ಮೆಲ್ಲರ ಹೃದಯದಲ್ಲೂ ಡಬ್..ಡಬ್.. ಆಗುತ್ತಿತ್ತು. ಇವರು ಕೂಡ ಸುರೋಳಿ ಬೆತ್ತ ಉಪಯೋಗಿಸುತ್ತಿದ್ದರು. ಅವರ ಸ್ವರ ಭಾರವೂ ತೀಕ್ಷ್ಣ ಕಠೋರವಾಗಿತ್ತು. ಇಂಗ್ಲೀಷ್ ವಿಷಯ ಕಲಿಸುತ್ತಿದ್ದ ಗಣಪತಿ ಪ್ರಭುಗಳ ಹೊಡೆತ ತಿಂದು ತಿಂದು ಅಂತೂ 8ನೇ ತರಗತಿ ಪಾಸಾದ ಫಲಿತಾಂಶ ಬಂದ ಕೂಡಲೇ ಪ್ರಭುಗಳ ಪೆಟ್ಟಿಗೆ ಹೆದರಿದ್ದ ನಾನು ಬೇರೆ ಶಾಲೆಗೆ ಹೋಗುತ್ತೇನೆಂದು ಹಟ ಹಿಡಿದು ತಂದೆಯವರು ನನ್ನ ಒತ್ತಾಯಕ್ಕೆ ಮೂಡುಬೆಳ್ಳೆಯ ಸೈಂಟ್ ಲಾರೆನ್ಸ್ ಹೈಸ್ಕೂಲಿಗೆ 9ನೇ ತರಗತಿಗೆ 1963ರಲ್ಲಿ ಸೇರಿಸಿದರು. ಸೈಂಟ್ ಮೆರೀಸ್ ಶಾಲೆಯಿಂದ (ಟಿ.ಸಿ.) ಟಿ.ಸಿ. ತೆಗೆದುಕೊಳ್ಳಲು ನಾನೇ ಮುಖ್ಯೋಪಾಧ್ಯಾಯರ ಕೊಠಡಿಗೆ ಹೋಗಬೇಕಾಗಿತ್ತು. ನನ್ನ ಕಾಲು ನಡುಗುತ್ತಿದ್ದುದು ಮುಖ್ಯೋಪಾಧ್ಯಾಯರ ಗಮನಕ್ಕೆ ಬಂದು ಹೆದರಬೇಡ "ನಿನಗೇನು ಬೇಕು" ಕೇಳಿದಾಗ ಅವರ ಹೃದಯ ಎಷ್ಟು ಮೃದುವಾಗಿತ್ತು ಎಂದು ಈಗ ಅನಿಸುತ್ತಿದೆ. ಕೊನೆಗೆ ನನ್ನ ಕೈಯಲ್ಲಿ ವರ್ಗಾವಣಾ ಪತ್ರ ನೀಡಿ ಮೆಂಡೋನ್ಸಾರು **"ಪೆಟ್ಟಿಗೆ ಹೆದರಿ ನೀನು ಶಾಲೆ ಬಿಟ್ಟು ಹೋಗುವುದು ಸರಿಯಲ್ಲ ಪೆಟ್ಟಿನಿಂದಾಗಿ ಈಗ ನೀನು ಪಾಸಾಗಿದ್ದೀ, ಚೆನ್ನಾಗಿ ಕಲಿ"** ಎಂದರು.



Find out ...? (KRISHNA & COW)

# ಮೂಡುಬೆಳ್ಳೆ ಸೈಂಟ್ ಲಾರೆನ್ಸ್ ಹೈಸ್ಕೂಲಿನಲ್ಲಿ (ಎಸ್ಎಸ್ಎಲ್ಸಿ) ಶಿಕ್ಷಣ

## (ಜೂನ್ 1963ರಿಂದ 1965 ಎಪ್ರಿಲ್ ತನಕ)

1963ರಿಂದ 1965ರ ತನಕ 9ನೇ ತರಗತಿ ಮತ್ತು 10ನೇ ತರಗತಿಯಲ್ಲಿ ವ್ಯಾಸಂಗ ಮಾಡಿದ್ದು ನಾನು ಮೂಡುಬೆಳ್ಳೆಯ ಸೈಂಟ್ ಲಾರೆನ್ಸ್ ಹೈಸ್ಕೂಲಿನಲ್ಲಿ. ನಾನು 9ನೇ ತರಗತಿಗೆ ಸೇರಿದಾಗ ನಮಗೆ ಅಲ್ಲಿಯ ಮುಖ್ಯೋಪಾಧ್ಯಾಯರೆಂದರೆ ಬಲು ಇಷ್ಟ. ಅವರ ನಾಮದೇಯ **"ದೇಜು ಉಚ್ಚಿಲ್"**. ಇವರು ನಮಗೆ ಗಣಿತ ಪಾಠಕ್ಕೆ ಇದ್ದರು. ಅತೀ ಕಷ್ಟವಾದ ಲೆಕ್ಕ ವಿಷಯ ಅತೀ ಸರಳವಾಗಿ ತಮಾಷೆ ಮಾಡುತ್ತಾ ಕಲಿಸುತ್ತಿದ್ದರು. ಇವರ ಅತೀ ಸುಂದರವಾದ ಕೈ ಬರಹ ಎಂತಹ ಕಲಾಕಾರನನ್ನೂ ನಾಚಿಸುವಂತಿತ್ತು. ಇವರ ಕೈ ಬರಹಕ್ಕಾಗಿ ನಾನು ಇವರಿಗೆ ರಜಾ ಸಮಯದಲ್ಲಿ ಪತ್ರ ಬರೆದು ಉತ್ತರ ತರಿಸಿಕೊಂಡದ್ದುಂಟು. ಪೋಸ್ಟ್ ಕಾರ್ಡ್‌ನಲ್ಲಿ ಮುತ್ತಿನಂತಹ ಅಕ್ಷರದಿಂದ ಉತ್ತರ ಬರೆಯುತ್ತಿದ್ದರು. ಅದನ್ನು ಜೋಪಾನಮಾಡಿ ಇಡುತ್ತಿದ್ದೆ. ನನಗೆ ಹೊಸ ಶಾಲೆಗೆ ಬಂದಾಗ ಹೊಸ ವಾತಾವರಣ. ಆದರೆ ನನ್ನ ಅಪ್ಪನ ಅಣ್ಣ ಜಲಜ ಮಾಮಿಯವರ ಮಗ **ಹಯವದನ** ಗೆಳೆಯನಾಗಿ ಸಿಕ್ಕಿದ್ದು ನನ್ನ ಅದೃಷ್ಟ ಎಂದೇ ಎನಿಸಿದ್ದೆ. ನಮಗೆ ವಿಜ್ಞಾನ ವಿಷಯಕ್ಕೆ **ನಿರಂಜನ ಆಚಾರ್ಯರು** ಇದ್ದರು. ಅವರಿಗಿಂತ ಮೊದಲು ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಉಪಕುಲಪತಿಗಳಾಗಿ ನಿವೃತ್ತಿ ಹೊಂದಿದ **ಶ್ರೀಯುತ ಸುಭಾಸ್ ಚಂದ್ರ ಹೆಗ್ಡೆ**ಯವರು ನಮಗೆ 3 ತಿಂಗಳಿನ ಅವಧಿಗೆ ಕಲಿಸಿದ ಪಾಠ ವಿಜ್ಞಾನ ಅತೀ ಉತ್ತಮವಾಗಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿ ಅವರು ಶಾಲೆ ಬಿಟ್ಟು ತೆರಳುವ ಸಂದರ್ಭ ನಮ್ಮ ಕರಿಹಲಿಗೆಯಲ್ಲಿ ಒಂದು ವಾಕ್ಯ ಬರೆದದ್ದು **"Try to forget me, That is the way of how to remember me"**. ಅವರು ಉಪ ಕುಲಪತಿಗಳಾಗಿ ನೇಮಕಗೊಂಡ ಕೂಡಲೇ ಅವರ ಭಾವಚಿತ್ರದೊಂದಿಗೆ ಅವರಿಗೊಂದು ಅಭಿನಂದನಾ ಪತ್ರವನ್ನು ಬರೆದಿದ್ದೆ. ಅವರಿಂದಲೂ ಅದಕ್ಕೆ ಉತ್ತರ ಕೃತಜ್ಞತಾ ಪತ್ರ ಬಂದಿತ್ತು.

ಅಲೆವೂರು ನೆಹರೂ ಹೈಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯರಾಗಿ ನಿವೃತ್ತಿ ಹೊಂದಿದ **ವಾಮನ ಭಟ್ಟರೂ** ನಮಗೆ ಗಣಿತ ಕಲಿಸುತ್ತಿದ್ದರು. ಕನ್ನಡಕ್ಕೆ **ಮುಕುಂದ ಪುರಾಣಿಕರು,** ಹಿಂದಿ ಕಲಿಸುತ್ತಿದ್ದ ಅತೀ ಪಾಪದ **ಗೋವಿಂದ ನಾಯ್ಕ**ರಿಗೆ ನಾವು ತುಂಬಾ ಕೀಟಲೆ ಕೊಡುತ್ತಿದ್ದೆವು. ನನ್ನ ಅತೀ ಕಷ್ಟವಾದ ವಿಷಯ ಇಂಗ್ಲೀಷ್. ಇದನ್ನು 9ನೇ ತರಗತಿಯಲ್ಲಿ **ವಾಸುದೇವ ಭಟ್ ಮರ್ಣೆ** ಇವರು ಕಲಿಸುತ್ತಿದ್ದರು. ನನ್ನ ಒಂದೇ ಒಂದು ಬೇಸರವೆಂದರೆ ಈ ಶಾಲೆಯಲ್ಲಿ ಚಿತ್ರ ಕಲಿಸಲು ಯಾರೂ ಇರಲಿಲ್ಲ. ಆದುದರಿಂದ ಎಲ್ಲಾ ಶಾಲಾ ಚಿತ್ರಕಲಾ ಚಟುವಟಿಕೆಯಲ್ಲಿ ಚಿತ್ರಗಳಲ್ಲಿ ನನ್ನ ಪಾತ್ರವಿತ್ತು. ಹಸ್ತ ಪತ್ರಿಕೆಯ 80% ಚಿತ್ರಗಳು ನನ್ನದಾಗಿತ್ತು. ನನ್ನ ಬೆಂಚಿನ ಗೆಳೆಯರೆಂದರೆ ಅಪ್ಪಿ ಕಾಮತ್, ಸೀತಾರಾಮ ನಾಯಕ್, ಕೇಶವ ನಾಯಕ್, ಹಯವದನ ಮತ್ತು ನಾನು ಬಹಳ ಆತ್ಮೀಯರಾಗಿ ಅನ್ಯೋನ್ಯತೆಯಿಂದ ಇದ್ದೆವು. ಅಪ್ಪಿ ಕಾಮತ್ ಕಲಿಯುವುದರಲ್ಲಿ ಯಾವಾಗಲೂ ತರಗತಿಗೆ ಪ್ರಥಮ ಸ್ಥಾನ ಪಡೆಯುತ್ತಿದ್ದ. ಸೀತಾರಾಮ ನಾಯಕ್ ಹಿಂದಿಯಲ್ಲಿ ಯಾವಾಗಲೂ ಪ್ರಥಮ ಅಲ್ಲದೆ ಇಂಗ್ಲೀಷ್ ವಿಷಯದಲ್ಲೂ ಜಾಣನಾಗಿದ್ದ.

ಕೇಶವ ನಾಯಕ್ ಅಂತೂ ಮಾತಿನ ಮಲ್ಲ ಚರ್ಚಿಸುವುದರಲ್ಲಿ ಮಾತುಗಾರಿಕೆಯಲ್ಲಿ ಅತೀ ಬುದ್ಧಿವಂತ. ಹಯವದನ ಅಭಿನಯದಲ್ಲಿ ಹಾಗೂ ಹಿಂದಿಯಲ್ಲಿ ಉತ್ತಮ ಅಂಕ ಪಡೆಯುತ್ತಿದ್ದ. 10ನೇ ತರಗತಿಯಲ್ಲಿ ನಾವೆಲ್ಲಾ ಒಂದೇ ಬೆಂಚಿನಲ್ಲಿ ಕುಳಿತು ಒಗ್ಗಟ್ಟಾಗಿ ಅಭ್ಯಾಸ ಮಾಡುತ್ತಿದ್ದೆವು. ಮಧ್ಯಾಹ್ನ ಶಾಲೆ ಬಿಟ್ಟ ಕೂಡಲೇ ಶಾಲೆಯ ಮುಂಭಾಗದಲ್ಲಿದ್ದ ಮರ ಹತ್ತಿ ನಮ್ಮ ಊಟ ಮುಗಿಸುತ್ತಿದ್ದೆವು. ಬಳಿಕ ಹತ್ತಿರ ಹರಿಯುತ್ತಿದ್ದ ನೀರಿನ ತೋಡಿನಲ್ಲಿ ಕೈ ಬುತ್ತಿ ತೊಳೆದು ನಮ್ಮ ಅಭ್ಯಾಸ. ಒಬ್ಬರಿಂದೊಬ್ಬರು ಪಾಠದ ಪ್ರಶ್ನೋತ್ತರಗಳನ್ನು ಕೇಳಿ ಸಮಯ ಕಳೆಯುತ್ತಿದ್ದೆವು.

**ಮರೆಯಲಾಗದ ಘಟನೆಗಳು:** 9ನೇ ತರಗತಿಯಲ್ಲಿ ನಾನಿರುವಾಗ ಬೇಲೂರು, ಹಳೇಬೀಡು ಮೈಸೂರು, ಶ್ರವಣಬೆಳಗೊಳಕ್ಕೆ ನಮಗೆಲ್ಲಾ ಪ್ರವಾಸಕ್ಕೆ ಕರಕೊಂಡು ಹೋದ ನೆನಪು. ನಮ್ಮನ್ನು ಶ್ರೀಯುತ **"ಡೇಸಾ"** ಮಾಸ್ಟ್ರು ಮತ್ತು **ವಾಸುದೇವ ಭಟ್ಟರು** ಕರಕೊಂಡು ಹೋಗಿದ್ದರು. ಒಂದು ರಾತ್ರಿ ಮೈಸೂರು ಸೈಂಟ್ ಫಿಲೋಮಿನಾ ಚರ್ಚಿನ ಬಳಿ ಇದ್ದ ಕಟ್ಟಡದಲ್ಲಿ ತಂಗಿದ್ದೆವು. ಅಂದಿನ ಚಳಿ ಈಗಲೂ ಮೈ ನಡುಕ ಹುಟ್ಟಿಸುತ್ತಿದೆ. ಆದರೂ ಪ್ರವಾಸದ ಸ್ಫೂರ್ತಿಯಲ್ಲಿ ನಾನು ಮತ್ತು ಹಯವದನ (ಬಾಲ್ಯದ ಹೆಸರು **"ಕಂದು"** ನನ್ನ ಹೆಸರು **"ಗೋಪು"**) ಐದು ಗಂಟೆಗೆ ಎದ್ದು ನಡು ನಡುಗುತ್ತಾ ಐಸ್‌ನಂತಿರುವ ತಣ್ಣೀರನ್ನು ಕಟ್ಟಡದ ಹೊರಗೆ ಇದ್ದ ನಳ್ಳಿಯ ನೀರಿನಲ್ಲಿ ತಲೆಗೆ ಹೊಯ್ದುಕೊಂಡು ಸ್ನಾನ ಮಾಡಿದ್ದು ನೆನಪು.



ಅಲ್ಲಲ್ಲಿ ಡೇಸಾ ಮಾಸ್ಟ್ರು ನಮ್ಮೆಲ್ಲರ ಫೋಟೋ ತೆಗೆದಿದ್ದರು. ಪ್ರವಾಸ ಮುಗಿದು ಕೆಲವು ದಿನವಾಗಿತ್ತು ಅಂದೊಂದು ದಿನ ಆಟದ ಪಿರೇಡಿಗೆ ಲೈನಾಗಿ ನಮ್ಮನ್ನು ಡ್ರಿಲ್ ಮಾಸ್ಟ್ರು ಕರೆಕೊಂಡು ಮೈದಾನಕ್ಕೆ ಹೋದರು. ನಮ್ಮಿಂದ ಕೆಲವು ಸಾಮೂಹಿಕವಾಗಿ ಡ್ರಿಲ್ ಮಾಡಿಸಿದರು. ಬಳಿಕ ನಮ್ಮನ್ನೆಲ್ಲಾ ಆಟವಾಡಿ ಎಂದರು. ನನಗೆ ಆಟದಲ್ಲಿ ಸ್ವಲ್ಪವೂ ಆಸಕ್ತಿ ಇರಲಿಲ್ಲ. ಹಾಗಾಗಿ ಡ್ರಿಲ್ ಮಾಸ್ಟ್ರಲ್ಲಿ ಒಪ್ಪಿಗೆ ಪಡೆದು ತರಗತಿಗೆ ಹೋದೆ. ಕುಳಿತು ಪುಸ್ತಕ ತೆರೆದಾಗ ಪ್ರವಾಸದ ಸಂದರ್ಭ ವಾಸುದೇವ ಭಟ್ಟರು ಹಾಗೂ ಡೇಸಾ ಮಾಸ್ಟ್ರು ಜೊತೆಯಾಗಿ ತೆಗೆಸಿದ ಅರ್ಧ ಫೋಟೋ ಸಿಕ್ಕಿತು. ನನ್ನ ಪ್ರೀತಿಯ ಮಾಸ್ಟ್ರು **"ಡೇಸಾ"**ರ ನೆನಪಿಗಾಗಿ ತೆಗೆದುಕೊಂಡಿದ್ದೆ. ಇದನ್ನು ಬಿಡಿಸಿ ನೋಡುವ ಆಸಕ್ತಿಯಲ್ಲಿ ಕರಿಹಲಗೆಯ ಬಳಿ ಹೋಗಿ ಒಂದು ತುಂಡು ಚೋಕನ್ನು (ಸೀಮೆ ಸುಣ್ಣ) ಉಪಯೋಗಿಸಿ ಶ್ರೀಯುತ ವಾಸುದೇವ ಭಟ್ಟರ ಚಿತ್ರ ಬಿಡಿಸಲು ತೊಡಗಿದೆ. ಭಟ್ರ ಫೋಟೋ ಬಿಡಿಸಲು ಸುಲಭವಾದೀತು ಎಂದು ನನಗನಿಸಿತು. ನಮ್ಮ ತರಗತಿಯ ಬೋರ್ಡಿನಲ್ಲಿ ದೊಡ್ಡದಾಗಿ ದಪ್ಪವಾಗಿ ಭಟ್ರ ಚಿತ್ರ ಬಿಡಿಸಿ ಮುಗಿಸಿದಾಗ ಪಿರೇಡ್ ಮುಗಿಸಿ ನನ್ನ ಗೆಳೆಯರು ತರಗತಿಗೆ ಬರಲಾರಂಭಿಸಿದರು. ಬಂದ ಎಲ್ಲಾ ಮಕ್ಕಳು ವಾಸುದೇವ ಭಟ್ಟರ ಚಿತ್ರವನ್ನು ನೋಡಿ ತುಂಬ ಖುಷಿಪಟ್ಟರು. ಎಲ್ಲರೂ ಕಂಡಾಗ ನನಗೂ ತುಂಬಾ ಸಂತೋಷವಾಯ್ತು. ನನ್ನ ಬಗ್ಗೆ ಎಲ್ಲರೂ ಮೆಚ್ಚುಗೆ ವ್ಯಕ್ತಪಡಿಸಿದರು. ನಾನು ಕರಿ ಹಲಗೆ ಚಿತ್ರ ಅಳಿಸಲು ಹೋದಾಗ ಎಲ್ಲರೂ ಒಕ್ಕೊರಳಿನಿಂದ "ಬೇಡ

– ಅಳಿಸುವುದು ಬೇಡ" ಎಂದರು. ನಮ್ಮ ತರಗತಿ ಲೀಡರ್ ಸೀತಾರಾಮ ನಾಯಕ್ ಕರಿ ಹಲಗೆಯನ್ನು ತಿರುಗಿಸಿ ಸ್ಕೇಲ್ ಬೋರ್ಡ್ ಎದುರು ಬರುವ ಹಾಗೆ ಇರಿಸಿದ. ನಮ್ಮ ಮುಂದಿನ ಪಿರೇಡ್ ಸಾಯನ್ಸ್. ಆವಾಗ ನಮಗೆ ಬರಬೇಕಾಗಿದ್ದ ಶಿಕ್ಷಕಿ **ರಮಾ ಶೆಟ್ಟಿ**ಯವರು. ನನಗೆ ತುಂಬಾ ಹೆದರಿಕೆಯಾಗಿತ್ತು. ರಮಾ ಟೀಚರ್ ತರಗತಿ ಪ್ರಾರಂಭಿಸಿ ಸ್ವಲ್ಪ ಸಮಯದಲ್ಲಿ ಅವರಿಗೆ ಕರಿಹಲಗೆಯಲ್ಲಿ ಚಿತ್ರ ಬಿಡಿಸಬೇಕಾಗಿತ್ತು. ಲೀಡರನ್ನು ಕರೆದು ಬೋರ್ಡ್ ತಿರುಗಿಸಲು ಸೂಚಿಸಿದರು. ಸೀತಾರಾಮ ನಮ್ಮ ಬೆಂಚಿನಲ್ಲೇ ಇದ್ದ ಕಾರಣ ತಲೆ ತಗ್ಗಿಸಿಕೊಂಡು ಮೆಲ್ಲ ಹೇಳಿದೆ **"ಕರಿ ಹಲಗೆ ಮೊದಲು ಅಳಿಸು ಆ ಮೇಲೆ ತಿರುಗಿಸು"** ಎಂದು. ಅವನು ಹಾಗೆ ಮಾಡದೆ ಸೀದಾ ತಿರುಗಿಸಿ ಬಿಟ್ಟ ಎಲ್ಲರೂ ಜೋರಾಗಿ ಭಟ್ಟರ ಚಿತ್ರ ನೋಡಿ ನಕ್ಕರು. ರಮಾ ಟೀಚರ್‌ರವರಿಗೆ ಗೊತ್ತು. ನಾನಲ್ಲದೆ ಬೇರೆ ಯಾರೂ ಚಿತ್ರ ಬಿಡಿಸಲಾರರು ಎಂದು. ಕೂಡಲೇ ನನ್ನನ್ನು ನಿಲ್ಲಿಸಿ ಬೆತ್ತದಿಂದ ಜೋರಾಗಿ ನಾಲ್ಕು ಬಿಗಿದರು. ಚಡಿ ಏಟು ನೋವು ಸಹಿಸಲಾರದೆ ಅತ್ತೆ. 'ಇನ್ನು ಮುಂದೆ ಬೋರ್ಡ್ ಮುಟ್ಟಿದರೆ ಜಾಗ್ರತೆ' ಎಂದರು. ಮನಸ್ಸಿನೊಳಗೆ ಸಿಟ್ಟು, ನೋವಿನ ಅಳು ಎರಡೂ ಇತ್ತು.

ಮಧ್ಯಾಹ್ನ ಊಟದ ಸಮಯ ನನ್ನ ಆತ್ಮೀಯರೆಲ್ಲಾ ನನ್ನನ್ನು ಸಮಾಧಾನ ಪಡಿಸುತ್ತಾ ನೀನು ಇನ್ನು ಬೋರ್ಡ್ ಮುಟ್ಟಬಾರದಾಗಿ ಹೇಳಿದ್ದಾರಲ್ಲಾ, ಹಾಗಾಗಿ 'ನೀನು ದಿನಾ ವಾರ್ತೆ ಬೋರ್ಡಿನಲ್ಲಿ ಬರೆಯುವುದನ್ನು ನಿಲ್ಲಿಸು' ಎಂದರು. ಸಿಟ್ಟಿನ, ನೋವಿನ ದುಃಖದಲ್ಲಿ ಒಪ್ಪಿಕೊಂಡೆ. ವಾರ್ತಾ ಮಂತ್ರಿಯಾಗಿದ್ದೆ, ದಿನಾ ವಾರ್ತೆ ನಾನು ಬರೆಯುತ್ತಿದ್ದೆ, ಮತ್ತೆ ವಾರ್ತೆ ಬರೆಯಲಿಲ್ಲ. ದಿನದ ವಾರ್ತೆಯನ್ನು ವಿದ್ಯಾರ್ಥಿಗಳು ಪುಸ್ತಕದಲ್ಲಿ ಬರೆಯಬೇಕಾಗಿತ್ತು. 2,3 ದಿನ ವಾರ್ತೆ ಬರೆಯದ ಕಾರಣ ಸಮಾಜ ಅಭ್ಯಾಸ ಕಲಿಸುವ ಅಧ್ಯಾಪಕರಲ್ಲಿ ಬೇರೆ ಮಕ್ಕಳು ವಾರ್ತೆ ಬದಲಾವಣೆ ಆಗದ್ದಕ್ಕೆ ದೂರು ಕೊಟ್ಟರು. ಹಾಗಾಗಿ 3ನೇ ದಿನ ಟೀಚರ್ಸ್ ರೂಮಿಗೆ ನನ್ನನ್ನು ಕರೆದು ವಾಸುದೇವ ಭಟ್ಟರು ವಿಚಾರಿಸಿದಾಗ ಪಕ್ಕದಲ್ಲಿದ್ದ ರಮಾ ಟೀಚರ್‌ನ್ನು ನೋಡಿ ಮೆಲ್ಲ ದನಿಯಲ್ಲಿ ಹೇಳಿದೆ "ಟೀಚರ್ ಬೋರ್ಡ್ ಮುಟ್ಟಬಾರದೆಂದು ಹೇಳಿದ್ದಾರೆ. ಹಾಗಾಗಿ ವಾರ್ತೆ ಬರಿಯಲಿಲ್ಲ" ಎಂದೆ. ಆವಾಗ ರಮಾ ಟೀಚರ್ ನನ್ನನ್ನು ಬಳಿ ಕರೆದು 'ನೀನು ಇನ್ನು ಅಂತಹ ತಪ್ಪು ಮಾಡಬಾರದೆಂದು ಹಾಗೆ ಹೇಳಿದ್ದೆ ಅಷ್ಟೆ. ಇನ್ನು ಮುಂದೆ ವಾರ್ತೆ ಬರೆಯಬೇಕು' ಎಂದರು. ಬಳಿಕ ವಾರ್ತೆ ಬರೆಯಲು ಪ್ರಾರಂಭಿಸಿದೆ.

**ಸೈಂಟ್ ಲಾರೆನ್ಸ್ ಹೈಸ್ಕೂಲಿನಲ್ಲಿ ನಮಗೆ ಕಲಿಸಿದ ಗುರುಗಳು ಲೆಕ್ಕ: ಶ್ರೀ ದೇಜು ಉಚ್ಚಿಲ್, ಇಂಗ್ಲೀಷ್ – ಶ್ರೀ ವಾಸುದೇವ ಭಟ್ ಮತ್ತು ಶ್ರೀ ಅನಂತ ಕೃಷ್ಣ ಸಾಮುಗ, ಕನ್ನಡ – ಮುಕುಂದ ಪುರಾಣಿಕ, ವಿಜ್ಞಾನ – ಶ್ರೀ ನಿರಂಜನ ಆಚಾರ್ಯ ಮತ್ತು ಶ್ರೀ ರಮಾ ಶೆಟ್ಟಿ ನಿಂಜೂರ್, ಸುಭಾಸ್ ಚಂದ್ರ ಹೆಗ್ಡೆ, ಲೆಕ್ಕ – ಶ್ರೀ ಅಲೆಯೂರು ವಾಮನ ಭಟ್**. 9ನೇ ತರಗತಿಯಲ್ಲಿ ನಮ್ಮ ಆತ್ಮೀಯ ಅಜ್ಜನವರಂತಿದ್ದ ಶ್ರೀಯುತ ದೇಜು ಉಚ್ಚಿಲ್‌ರವರು (ಮುಖ್ಯೋಪಾಧ್ಯಾಯರು) ಬಿಟ್ಟು ಹೋದ ಬಳಿಕ ನಮಗೆ ತುಂಬಾ ದುಃಖವಾಗಿತ್ತು. ಅವರ ಮುತ್ತಿನಂತ ಅಕ್ಷರ ಈಗಲೂ ಅವರನ್ನು ನೆನಪಿಸುತ್ತದೆ. ಬಳಿಕ ಅವರ ಸ್ಥಾನವನ್ನು ತುಂಬಲು ಬಂದವರು ಉಡುಪಿ ಬೋರ್ಡ್ ಹೈಸ್ಕೂಲಿನ

ಮುಖ್ಯೋಪಾಧ್ಯಾಯರಾಗಿದ್ದು ನಿವೃತ್ತಿ ಹೊಂದಿದ **ಶ್ರೀಯುತ ಅನಂತಕೃಷ್ಣ ಸಾಮುಗರು** ಇವರ ಹೆಸರು ಹೇಳಲೂ ವಿದ್ಯಾರ್ಥಿಗಳು ಹೆದರುತ್ತಿದ್ದರು. ಅಷ್ಟು ಗಂಭೀರ ವ್ಯಕ್ತಿತ್ವ, ಬಿಳಿ ಕಚ್ಚೆ, ಬಿಳಿ ಶರ್ಟ್, ಶರ್ಟಿನ ಮೇಲೆ ಕೋಟು ಧರಿಸುವ ಇವರು ಉಡುಪಿ ಬೋರ್ಡ್ ಹೈಸ್ಕೂಲಿನಲ್ಲಿದ್ದ ಕಿಲಾಡಿಗಳನ್ನು ಬಗ್ಗುಬಡಿದು ಹೆಸರು ಗಳಿಸಿದ್ದರು. ಅಂತವರು ನಮ್ಮ ಸಂಸ್ಥೆಯ ಮುಖ್ಯೋಪಾಧ್ಯಾಯರಾಗಿ ಬಂದ ಸಮಯದ ಒಂದು ಘಟನೆ ನನ್ನ ನೆನಪಿನಿಂದ ಮಾಸಲಿಲ್ಲ.

ಘಟನೆ: ಸೈಂಟ್ ಲಾರೆನ್ಸ್ ಹೈಸ್ಕೂಲ್ ಮೂಡುಬೆಳ್ಳೆಯಲ್ಲಿರುವಾಗ 1965ನೇ ಎಸ್.ಎಸ್.ಎಲ್.ಸಿ. ಪರೀಕ್ಷೆ ನಮ್ಮ ಶಾಲೆಯಲ್ಲಿ ನಡೆಯಲಿಲ್ಲ. ಉಡುಪಿ ಬೋರ್ಡ್ ಹೈಸ್ಕೂಲಿನಲ್ಲಿ ನಡೆಯಿತು. ಇಂಗ್ಲೀಷ್ ವಿಷಯದಲ್ಲಿ ದಡ್ಡನಾಗಿದ್ದ ನಾನು ಪಾಸಾಗುವುದೇ ಕಷ್ಟವಾಗಿತ್ತು. ಹಾಗಾಗಿ ಮುಖ್ಯೋಪಾಧ್ಯಾಯರಾಗಿದ್ದ ಶ್ರೀಯುತ ಅನಂತಕೃಷ್ಣ ಸಾಮುಗರು ನನಗೆ ಮುಖ್ಯವಾದ ಕೆಲವು ಇಂಗ್ಲೀಷ್ ಪ್ರಶ್ನೋತ್ತರಗಳನ್ನು, ಸಮ್ಮರೀ, ಎಸ್ಸೇಗಳನ್ನು ಕಲಿಸಿಕೊಟ್ಟಿದ್ದರು. ನಾವು ನಾಲ್ಕು ಗೆಳೆಯರು – ನಾನು, ಹಯವದನ, ವೆಂಕಟ್ರಮಣ, ರಾಘವೇಂದ್ರ ಒಟ್ಟಾಗಿ ಉಡುಪಿ ಫಲಿಮಾರು ಮಠದ ಒಂದು ಕೋಣೆಯಲ್ಲಿ ಪರೀಕ್ಷಾ ಅವಧಿಯಲ್ಲಿ ತಂಗುವುದಾಗಿ ನಿಶ್ಚಯಿಸಿದ್ದೆವು. ನಾಲ್ಕು ಮಂದಿ ಸೇರಿ ಪರೀಕ್ಷೆಯ ನಾಲ್ಕು ದಿನ ಮೊದಲೇ ಮಠದ ಕೋಣೆ ಸೇರಿಕೊಂಡೆವು. ಅದೇ ಸಮಯ ಉಡುಪಿ ಕೃಷ್ಣ ದೇವರ ಸಪ್ತ ಮಹೋತ್ಸವ ನಡೆಯುತ್ತಿತ್ತು. ನಾವು ನಾಲ್ಕು ಜನ 12 ಗಂಟೆ ರಾತ್ರಿ ತನಕ ಜಾತ್ರೆ ನೋಡಿ ಬಳಿಕ ಮಲಗಿಕೊಳ್ಳುತ್ತಿದ್ದೆವು. ಬೆಳಿಗ್ಗೆ ಏಳುವಾಗ ಬಹಳ ಕಷ್ಟವಾಗುತ್ತಿತ್ತು. ಬೆಳಿಗ್ಗೆ 5.00ಕ್ಕೆ ಎದ್ದು ಕಷ್ಟಪಟ್ಟು ಕಣ್ಣರಳಿಸಿ ಓದುತ್ತಿದ್ದೆ.

ಪ್ರಾರಂಭದ ದಿನ ಪಬ್ಲಿಕ್ ಪರೀಕ್ಷೆಗೆ ಶಾಲೆಗೆ ಹೋಗುವಾಗ ಎದೆ ಡವಡವ ಎನ್ನುತ್ತಿತ್ತು. ಪ್ರಾರಂಭದಲ್ಲಿ ಇಂಗ್ಲೀಷ್ ಪರೀಕ್ಷೆ ಪ್ರಶ್ನೆಪತ್ರಿಕೆ ಕೈ ಸಿಕ್ಕ ಕೂಡಲೇ ನನಗೆ ಕೈಕಾಲು ನಡುಕ ಪ್ರಾರಂಭವಾಯ್ತು. ಪ್ರಥಮ ಪ್ರಶ್ನೆಗೆ ಉತ್ತರದ ಮೊದಲ ಶಬ್ಧವೇ ನೆನಪಾಗಲೇ ಇಲ್ಲ. ಏನು ಮಾಡುವುದೆಂದೇ ತಿಳಿಯಲಿಲ್ಲ. ಎಲ್ಲಾ ಗೆಳೆಯರು ಆಗಲೇ ಉತ್ತರ ಬರೆಯಲು ಪ್ರಾರಂಭಿಸಿದ್ದರು. 5–10 ನಿಮಿಷದ ಬಳಿಕ ಧೈರ್ಯದಿಂದ ಎದ್ದು ನಿಂತು ಕೊಠಡಿ ವೀಕ್ಷಕರ ಬಳಿ ವಿನಂತಿಸಿಕೊಂಡೆ. 'ದಯಮಾಡಿ ಮೊದಲ ಪ್ರಶ್ನೆಗೆ ಬೇಕಾದ ಉತ್ತರದ ಮೊದಲ ಶಬ್ಧ ನನಗೆ ನೆನಪಾಗ್ತ ಇಲ್ಲ. ಆದ್ದರಿಂದ ನನ್ನ ಗೆಳೆಯ ಎದುರು ಇದ್ದಾನೆ, ಅವನಲ್ಲಿ ಕೇಳುತ್ತೇನೆ' ಎಂದೆ. ಆಪದ್ಬಾಂಧವರಂತೆ ಅವರು ನನ್ನ ವಿನಂತಿಗೆ ಒಪ್ಪಿಗೆ ಕೊಟ್ಟರು. ಬಳಿಕ ನನ್ನ ಗೆಳೆಯನಲ್ಲಿ ಒಂದು ವಾಕ್ಯ ನೆನಪಿಸಿಕೊಂಡೆ. ಬಳಿಕ ಧೈರ್ಯ ಮಾಡಿ ಉತ್ತರಗೊತ್ತಿರುವ ಪ್ರಶ್ನೆಗಳನ್ನು ಉತ್ತರಿಸಿ ಹೊರಬಂದೆ.

**1965** ಇಸವಿ, ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೂಡುಬೆಳ್ಳೆ ಸೈಂಟ್ ಲಾರೆನ್ಸ್ ಹೈಸ್ಕೂಲಿಗೆ ಕುಳಿತ **45 ಮಂದಿ ವಿದ್ಯಾರ್ಥಿಗಳೆಲ್ಲಾ ಪಾಸಾಗಿ 100% ಫಲಿತಾಂಶ**ದಲ್ಲಿ ಪಾಸಾದುದು ಬಹಳ ಸಂತೋಷ ತಂದಿತ್ತು. ಇಂಗ್ಲೀಷ್ ವಿಷಯದಲ್ಲಿ ದಡ್ಡನಾಗಿದ್ದ ನಾನು ಪಾಸಾದುದು ತುಂಬಾ ಆಶ್ಚರ್ಯ. ಪಾಸಾದ ಬಳಿಕ ನನ್ನ ಜೀವನದಲ್ಲಿ ಬದಲಾವಣೆಯಾಗಲು ಪ್ರಾರಂಭವಾಯ್ತು.

## "ನನ್ನ ಕಣ್ಣನ್ನು ನಾನು ದಾನ ಮಾಡಿರುತ್ತೇನೆ" (ಎಸ್.ಡಿ.ಎಮ್. ಮಂಗಳೂರು)

**ಮರೆಯಲಾರದ ಘಟನೆ:** ಪ್ರಾಥಮಿಕ ಶಾಲೆ (ಸೈಂಟ್ ಲಾರೆನ್ಸ್ ಪ್ರಾ. ಶಾಲೆ)ಯಲ್ಲಿ ಕಲಿಸುತ್ತಿದ್ದ ಒಬ್ಬ ಶಿಕ್ಷಕಿಯವರಿಗೆ ಹಾಗೂ ಅಲ್ಲೇ ಕಲಿಸುತ್ತಿದ್ದ ಮುಖ್ಯೋಪಾಧ್ಯಾಯರಿಗೆ ವಿವಾಹದ ದಿನ. ನಾನು ಪ್ರಾಥಮಿಕ ವಿದ್ಯಾಭ್ಯಾಸ ಮಾಡಿದ್ದು ಬೇರೆ ಕಡೆಯಾಗಿದ್ದರೂ ನನ್ನ ಗೆಳೆಯ ಗೆಳತಿಯರು ಹೆಚ್ಚಾಗಿ ಅದೇ ಪ್ರಾಥಮಿಕ ಸಂಸ್ಥೆಯಲ್ಲಿ ಕಲಿತು ಇಲ್ಲಿಗೆ ಬಂದವರು. ಮೂಡುಬೆಳ್ಳೆ ಚರ್ಚ್‌ನಲ್ಲಿ ವಿವಾಹ. ವಿವಾಹ ಮುಗಿಸಿ ಮದುಮಗನ ಮನೆಗೆ ಬ್ಯಾಂಡ್ ವಾಲಗದೊಂದಿಗೆ ದಿಬ್ಬಣ ಹೋಗುವ ಸಮಯ ನಮಗೆ 3ನೇ ಪಿರೇಡ್ ಎಂದೆನಿಸುತ್ತದೆ. ಪಿರೇಡಿಗೆ ಬರುವ ಅಧ್ಯಾಪಕರು ಗೈರು ಆಗಿದ್ದರು. ತರಗತಿಯಲ್ಲಿ ಯಾವ ಅಧ್ಯಾಪಕರೂ ಇರಲಿಲ್ಲ. ತಮಗೆ ಕಲಿಸಿದ ಟೀಚರ್ ಹಾಗೂ ಮುಖ್ಯೋಪಾಧ್ಯಾಯರ ದಿಬ್ಬಣದ ಗದ್ದಲ ಕೇಳುವಾಗ ನಮ್ಮ ಮಕ್ಕಳೆಲ್ಲರಿಗೂ ಆಸಕ್ತಿ ತಳೆಯಲಾರದೆ ತರಗತಿಯಿಂದ ಹೊರಗೆ ವರೇಂಡಾದಲ್ಲಿ ಹೋಗಿ ಒಬ್ಬೊಬ್ಬರೇ ಹೋಗಿ ನಿಲ್ಲಲಾರಂಭಿಸಿದರು. ಎಲ್ಲಾ ಗೆಳೆಯರ ಜೊತೆಗೆ ನಾನೂ ಹೊರಗೆ ಹೋಗಿ ಪೀಟರ್ ಎಂಬ ನನ್ನ ಗೆಳೆಯನ ಹೆಗಲಿನ ಮೇಲೆ ಕೈ ಹಾಕಿ ನಾನು ದಿಬ್ಬಣವನ್ನು ನೋಡುತ್ತಿದ್ದೆ.

ನಮ್ಮ ಸಂಸ್ಥೆ ಪೂರ್ವ ದಿಕ್ಕಿನಲ್ಲಿ ದೊಡ್ಡದಾದ ಗುಡ್ಡ ರಸ್ತೆಗೆ ಅಡ್ಡವಾಗಿತ್ತು. ಹಾಗಾಗಿ ನಮಗೆ ಪ್ರಾರಂಭದಲ್ಲಿ ಕಂಡ ದಿಬ್ಬಣದ ಜನರು ಗುಡ್ಡದಿಂದಲಾಗಿ ಅಡ್ಡವಾದರು. ನಮ್ಮ ತರಗತಿಯ ಕೆಲವು ಹುಡುಗಿಯರಿಗೆ ಅವರು ಕಲಿಸಿದ ಶಿಕ್ಷಕಿ ಮದುಮಗಳಾಗಿ ಹೇಗೆ ಕಾಣಿಸುತ್ತಾರೆಂಬುದನ್ನು ನೋಡುವ ಆಸಕ್ತಿ ಹೆಚ್ಚಾಗಿ ಶಾಲೆಯ ಎದುರಿಗಿದ್ದ ಮೈದಾನದಲ್ಲಿ ಓಡಿ ಗುಡ್ಡದ ಆ ಬದಿಯಲ್ಲಿ ಹತ್ತಿರದಿಂದ ನೋಡಲು ಒಬ್ಬಳು ಹುಡುಗಿ ಓಡಿದಳು. ಅವಳ ಹಿಂದೆ ಇಬ್ಬರು ಹುಡುಗಿಯರು ಓಡಿದರು. ಇನ್ನೊಬ್ಬಳು ಓಡಿದಾಗ ನನ್ನ ಗೆಳೆಯ ಪೀಟರ್ ಓಟಕ್ಕೆ ಹುರಿ ತುಂಬಿಸಲು ಗಟ್ಟಿಯಾಗಿ "ಅಪ್ಪ್".. 'ಅಪ್ಪ್'.. ಎಂದ. ನಾನು ಅವನ ಹೆಗಲಿಗೆ ಕೈ ಹಾಕಿ ನಿಂತಿದ್ದೆ. ಆವಾಗ ಇನ್ನೊಬ್ಬಳು ಓಡಿದಳು, ಆಗ ನಾನೇನು ಕಡಿಮೆ ಇಲ್ಲವೆಂಬಂತೆ ನಾನೂ ಗಟ್ಟಿಯಾಗಿ ಅಪ್ಪ್.. ಅಪ್ಪ್.. ಅಪ್ಪ್ ಎಂದೆ. ಮೊದಲನೇ ಬಾರಿ ಸಿರಿಲ್ ಹೇಳಿದ ಅಪ್ಪ್... ಅಪ್ಪ್... ಎನ್ನುವ ಶಬ್ದ ಕೇಳಿ ಬಳಿಯ ಕೊಠಡಿಯಲ್ಲಿ ಹೊಸದಾಗಿ ಬಂದಿದ್ದ ನಾವೆಲ್ಲಾ ಹೆದರಿದ್ದ ಮುಖ್ಯೋಪಾಧ್ಯಾಯರು ಶ್ರೀಯುತ ಅನಂತಕೃಷ್ಣ ಸಾಮುಗರು ಬಾಗಿಲ ಹತ್ತಿರ ಬಂದು ನಮ್ಮನ್ನೆಲ್ಲಾ ಹಿಂದುಗಡೆ ನಿಂತು ನೋಡುತ್ತಿದ್ದರು. ಹಿಂದಿನಿಂದ ಇದ್ದ ಕಾರಣ ನಮ್ಮ ಯಾರ ಗಮನಕ್ಕೂ ಅವರು ನಿಂತಿದ್ದು ತಿಳಿಯಲಿಲ್ಲ. ಪೀಟರ್ ಹೇಳಿದ ಸ್ವಲ್ಪ ಸಮಯದಲ್ಲಿ ನಾನು ಅಪ್ಪ್.. ಅಪ್ಪ್.. ಎಂದು ಹಿಂದೆ ನೋಡಿದಾಗ ಮುಖ್ಯೋಪಾಧ್ಯಾಯರು ಸಿಟ್ಟಿನಲ್ಲೇ ನನ್ನನ್ನು ದೃಷ್ಟಿಸಿ ನೋಡುವುದನ್ನು ಕಂಡು ಕೈಕಾಲು ನಡುಕ ಶುರುವಾಗಿ ತರಗತಿಗೆ ಓಡಿ ಹೋಗಿ ಹೆದರಿಕೆಯಿಂದ ಕೂಗಲಾರಂಭಿಸಿದೆ. ಮುಖ್ಯೋಪಾಧ್ಯಾಯರು ಎಷ್ಟು ಶಿಸ್ತುಬದ್ಧರೆಂದರೆ ಅನ್ಯಾಯ ಮಾಡಿದ ವಿದ್ಯಾರ್ಥಿಗಳನ್ನು ಬೆಳಿಗ್ಗೆ ಶಾಲಾ ಅಸೆಂಬ್ಲಿಯಲ್ಲಿ ಅವರನ್ನು ವೇದಿಕೆಗೆ ಕರೆದು ಅಪಮಾನ ಮಾಡುತ್ತಿದ್ದರು. ಇದು ತಿಳಿದಿದ್ದ ನನ್ನನ್ನು ನಾಳೆ ಅಸೆಂಬ್ಲಿಯಲ್ಲಿ ವೇದಿಕೆಗೆ ಖಂಡಿತ ಕರೆಯುತ್ತಾರೆ. ನನ್ನನ್ನು ಅವಮಾನ ಮಾಡಿ ಬೈಯುತ್ತಾರೆ ಎಂದು ತಿಳಿದಿತ್ತು. ಹಾಗಾಗಿ ಪೀಟರ್‌ನನ್ನು ತುಂಬಾ ಬೇಡಿಕೊಂಡೆ. ಈಗಾಲೇ ಹೋಗಿ ಮುಖ್ಯೋಪಾಧ್ಯಾಯರಲ್ಲಿ ನಾವು ಮಾಡಿದ ತಪ್ಪಿಗೆ ಕ್ಷಮಿಸಬೇಕೆಂದು ಬೇಡಿಕೊಂಡರೆ ನಾಳೆ ಆಗುವ ಅಪಮಾನ ಹೋಗುತ್ತದೆ ಎಂದು 'ಪೀಟರ್'ನನ್ನು ಒತಾಯಿಸಿದರೂ ನನ್ನ

ಮಾತಿಗೆ ಒಪ್ಪಲೇ ಇಲ್ಲ. ಯಾಕೆಂದರೆ ಅವನು ಅಪ್ ಎಂದದನ್ನು ಅವರು ನೋಡಲಿಲ್ಲ ಎಂಬುದು ಅವನಿಗೆ ತಿಳಿದಿತ್ತು. ಆದರೂ ಧೈರ್ಯ ಮಾಡಿಕೊಂಡು ಮಧ್ಯಾಹ್ನ ಊಟದ ವೇಳೆ ಅವರು ಪೇಪರ್ ಓದುತ್ತಿದ್ದಾಗ ಮೆಲ್ಲ ಒಪ್ಪಿಗೆ ಪಡೆದು ಮುಖ್ಯೋಪಾಧ್ಯಾಯರ ಕೊಠಡಿಗೆ ನಾನೊಬ್ಬನೇ ಹೋಗಿ 'ಸಾರ್ ನಾನು ತಪ್ಪು ಮಾಡಿದ್ದೇನೆ ಕ್ಷಮಿಸಬೇಕು' ಎಂದು ಬೇಡುತ್ತಾ ಅಳಲಾರಂಭಿಸಿದೆ. ಮುಖ್ಯೋಪಾಧ್ಯಾಯ ಸಾಮುಗರು ಗಂಭೀರವಾಗಿ ಹೇಳಿದರು 'ನೀನು ಮಾಡಿದ ತಪ್ಪು ಗೊತ್ತಾಯ್ತಲ್ಲಾ. ಇನ್ನು ಮುಂದೆ ಜಾಗ್ರತೆ' ಎಂದು ನನ್ನನ್ನು ಕಳುಹಿಸಿದರು. ಮರುದಿನದ ಅಸೆಂಬ್ಲಿಯಲ್ಲಿ ಎಲ್ಲ ಮಕ್ಕಳ ಎದುರಿನಲ್ಲಿ ನನ್ನ ಹೆಸರನ್ನು ಹೇಳದೆ ನಿನ್ನೆ ನಡೆದ ನಮ್ಮ 10ನೇ ತರಗತಿ ಮಕ್ಕಳು ನಡೆಸಿದ ನಾಚಿಕೆಗೇಡಿನ ವರ್ತನೆಯನ್ನೆಲ್ಲಾ ವಿವರಿಸಿದರು. ಇನ್ನು ಮುಂದೆ ಇಂತಹ ಘಟನೆಗಳಿಗೆ ನಮ್ಮ ಸಂಸ್ಥೆಯಲ್ಲಿ ಅವಕಾಶವಿಲ್ಲ ಎಂದರು.

1965ರಲ್ಲಿ ಎಸ್‌ಎಸ್‌ಎಲ್‌ಸಿ ತರಗತಿಯಲ್ಲಿ ನಾವು ನಲ್ವತ್ತೈದು ವಿದ್ಯಾರ್ಥಿಗಳಿದ್ದೆವು. ನಾವೆಲ್ಲಾ ಬಹಳ ಒಗ್ಗಟ್ಟಾಗಿದ್ದೆವು. 1963 ಮತ್ತು 1964ನೇ ಇಸವಿಯಲ್ಲಿ 2 ವರ್ಷವೂ ಎಸ್.ಎಸ್.ಎಲ್.ಸಿ. ಶೇಕಡಾ 100 ಫಲಿತಾಂಶ ಪಾಸಾಗಿದ್ದ ನಮ್ಮ ಸಂಸ್ಥೆಯ ಹೆಸರು ಪೇಪರಿನಲ್ಲಿ ಬಂದಿತ್ತು. 1965ನೇ ಎಸ್‌ಎಸ್‌ಎಲ್‌ಸಿ ವಿದ್ಯಾರ್ಥಿಗಳಲ್ಲಿ ಇಂಗ್ಲೀಷ್ ವಿಷಯದಲ್ಲಿ ಹಿಂದೆ ಇದ್ದ ನಾನು ಪಾಸಾಗುವುದು ಕಷ್ಟವೆಂದು ಮುಖ್ಯೋಪಾಧ್ಯಾಯರು ತಿಳಿದು ನನಗಾಗಿ ಕೆಲವು ಇಂಗ್ಲೀಷ್ ಸಮ್ಮರಿ, ಪೊಯಂಗಳನ್ನು ಕಡ್ಡಾಯವಾಗಿ ಕಲಿತುಕೋ ಎಂದಿದ್ದರು. ನಾನು ಕೆಲವನ್ನು ಬಾಯಿ ಪಾಠ ಮಾಡಿದ್ದೆ. 56% ಸರಾಸರಿ ಪಾಸಾದೆ. 1965ನೇ ವರ್ಷದಲ್ಲಿ 100% ಫಲಿತಾಂಶ ಬಂದಿತ್ತು.

ನಮ್ಮ ಬೆಂಚಿನಲ್ಲಿ ನಾವು ಐದು ಜನ ಬಹಳ ಒಗ್ಗಟ್ಟಾಗಿ ಇದ್ದೆವು. ಊಟ, ಓದು, ಆಟ ಎಲ್ಲಾ ಒಟ್ಟಾಗಿ ಆಗುತ್ತಿತ್ತು. ಐವರಲ್ಲಿ ಕಲಿಯುವುದರಲ್ಲಿ ನಾನೇ ಸ್ವಲ್ಪ ದಡ್ಡ. **'ಅಪ್ಪಿ ಕಾಮತ್'** ಸಾಧು ಸ್ವಭಾವ ತರಗತಿಯ ಎಲ್ಲಾ ವಿಷಯದಲ್ಲಿ ಪ್ರಥಮ, ದ್ವಿತೀಯ ಸ್ಥಾನ ಪಡೆಯುತ್ತಿದ್ದ. (1965ರ ನಂತರ ಭೇಟಿ ಇಲ್ಲ) **'ಕೇಶವ ನಾಯಕ್'** ತುಂಬಾ ಮಾತುಗಾರ, ಭಾಷಣ ಸ್ಪರ್ಧೆಯಲ್ಲಿ ಇವನೇ ಪ್ರಥಮ ಸ್ಥಾನ ಪಡೆಯುತ್ತಿದ್ದ. ಇವನು ಉಡುಪಿ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಪ್ರ.–ಶಿಕ್ಷಕನಾಗಿದ್ದು ಈಗ ನಿವೃತ್ತಿ ಹೊಂದಿದ್ದಾನೆ. ಮಧ್ಯದಲ್ಲಿ **ಗೋಪಾಲಕೃಷ್ಣ** ಎಂದರೆ ನಾನು, ಕೂತಿದ್ದೆ. ಆಟ ಪಾಠದಲ್ಲಿ ಹಿಂದೆ ಇದ್ದರೂ ಚಿತ್ರಕಲೆಯ ಸ್ಪರ್ಧೆಯಲ್ಲಿ ಬಹುಮಾನ ನನಗೆ ಕಟ್ಟಿಟ್ಟ ಬುತ್ತಿ. ನನ್ನ ಬಳಿಯಲ್ಲಿ **'ಹಯವದನ'** ಇದ್ದ. ಈಗ ಇವನು ಮೈಸೂರಲ್ಲಿ ನಾಲ್ಕೈದು ಹೊಟೇಲಿನ ಒಡೆಯನಾಗಿ ಕೋಟ್ಯಾಧಿಪತಿ ಎಂದರೂ ತಪ್ಪಾಗದು. ಹರ್ಷ ರೋಡಿನಲ್ಲಿರುವ ಹೊಟೇಲ್ 'ಗೋವರ್ಧನ', 'ಮುರಳೀ ಕೆಫೆ', 'ಚಾವಡಿ' ಇನ್ನೆರಡು ವಸತಿ ಗೃಹಗಳಿವೆ. ಅಭಿನಯದಲ್ಲಿ ಎತ್ತಿದ ಕೈ. ಹಿಂದಿ ಭಾಷೆಯಲ್ಲಿ ಹೆಚ್ಚಿನ ಅಂಕ ಸಿಗುತ್ತಿತ್ತು. ಇವನಿಗೆ ಯಾವುದೇ ಬಹುಮಾನ ಬರುವುದಿಲ್ಲ ಎಂದು ಗೊತ್ತಾಗಿ ಹಿಂದಿ ಪ್ರಬಂಧ ಸ್ಪರ್ಧೆಗೆ ಬಳಿಯಲ್ಲಿದ್ದ ಸೀತಾರಾಮ ನಾಯಕ್ ತಾನು ಒಂದು ಸ್ಪರ್ಧೆಯನ್ನು ಬಿಟ್ಟುಕೊಟ್ಟು ಹಯವದನನಿಗೆ ಹಿಂದಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬರುವ ಹಾಗೆ ಮಾಡಿದ್ದ. ಕೊನೆಯ ಬದಿಯಲ್ಲಿ ಕುಳಿತಿದ್ದ ಆ ವರ್ಷದ ಲೀಡರ್ **'ಸೀತಾರಾಮ ನಾಯಕ್'** ಬಹಳ ಬರಹಗಾರ. ಹಿಂದಿ, ಕನ್ನಡ

ಪ್ರಬಂಧ ಸ್ಪರ್ಧೆಯಲ್ಲಿ ಇವನೇ ಪ್ರಥಮ. ಎಲ್ಲರಿಗೂ ಗೊತ್ತು, ನಾವು ಐದು ಜನರಲ್ಲಿ ಒಗ್ಗಟ್ಟಿನ ಸಂಕೇತವಾಗಿ ಎಲ್ಲರೂ ಯಜ್ಞೋಪವೀತದಾರಿಗಳಾಗಿದ್ದೆವು. ಅಪ್ಪಿ ಕಾಮತ್ ಕಲಿಯುವುದರಲ್ಲಿ ಪ್ರಥಮ ಬಹುಮಾನ, ಕೇಶವನಾಯಕ್ ಭಾಷಣ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ, ನನಗೆ ಚಿತ್ರ ಕಲೆಯಲ್ಲಿ ಪ್ರಥಮ ಬಹಮಾನ, ಹಯವದನನಿಗೆ ಹಿಂದಿ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದರೆ ಸೀತಾರಾಮ ನಾಯಕ್ ಕನ್ನಡ ಪ್ರಬಂಧ ಸ್ಪರ್ಧೆಯಲ್ಲಿ, ನಾವು ಐವರೂ ವಾರ್ಷಿಕೋತ್ಸವ ಸಂದರ್ಭ ಅತಿಥಿಗಳಿಂದ ಬಹಮಾನ ಪಡೆದಿದ್ದೆವು. ತರಗತಿಯಲ್ಲಿ ಪ್ರಥಮ ಸ್ಥಾನ ಪಡೆಯುತ್ತಿದ್ದ **ಜಯರಾಮ ಶೆಟ್ಟಿ** ಈಗ ಬಜ್ಪೆಯಲ್ಲಿ **'ಮಕ್ಕಳ ತಜ್ಞ' ವೈದ್ಯರಾಗಿ** ಇದ್ದಾರೆ.



1965ನೇ ವರ್ಷದ ಸೈಂಟ್ ಲಾರೆನ್ಸ್ ಹೈಸ್ಕೂಲಿನ ವಿದ್ಯಾರ್ಥಿಗಳ ಹಸ್ತಪತ್ರಿಕೆಯಲ್ಲಿ 90 ಪಾಲು ಚಿತ್ರಗಳನ್ನು ನಾನೇ ಬಿಡಿಸಿದ್ದೆ. ವಾರ್ಷಿಕೋತ್ಸವಕ್ಕೆ ಒಂದು ವಾರ ಇರುವಾಗ ಹಸ್ತಪತ್ರಿಕೆಯ ಕೆಲವು ಹಾಳೆ ಕಾಲಿ ಇರುವುದನ್ನು ಕಂಡ ಮುಖ್ಯೋಪಾಧ್ಯಾಯರಾದ **ಶ್ರೀ ಅನಂತಕೃಷ್ಣ ಸಾಮುಗರು** ರಾತ್ರಿ **ಗ್ಯಾಸ್‌ಲೈಟ್** ಒದಗಿಸಿಕೊಟ್ಟು ನಮ್ಮನ್ನು, ಕೆಲವು ವಿದ್ಯಾರ್ಥಿಗಳನ್ನು ಶಾಲೆಯಲ್ಲಿ ಕುಳಿತುಕೊಳ್ಳಲು ಹೇಳಿ ಹೆಚ್ಚಿನ ಪುಟವನ್ನು ಚಿತ್ರದಿಂದಲೇ ತುಂಬಿಸಲು ಹೇಳಿದ್ದರು.



ಇನ್ನು ನನ್ನ 10ನೇ ತರಗತಿಯ ಗೆಳೆಯರಲ್ಲಿ ಕಟ್ಟಿಂಗೇರಿ ಪಠೇಲರ ಅಳಿಯನಾಗಿದ್ದ ರಾಘವೇಂದ್ರ ರಾವ್. ಇವನನ್ನು **ರಾಘು** ಎಂದೇ ಕರೆಯುತ್ತಿದ್ದೆವು. ನಾನು ಮಾಣಿಬೆಟ್ಟಿನಿಂದ ಕಟ್ಟಿಂಗೇರಿ ಗ್ರಾಮ ದಾಟಿ ಮೂಡುಬೆಳ್ಳೆಗೆ ಹೋಗಬೇಕಾಗಿತ್ತು. ಹಾಗಾಗಿ ಕಟ್ಟಿಂಗೇರಿ ಪಟೇಲರ ಮನೆ ದಾರಿ ಮಧ್ಯದಲ್ಲಿ ಸಿಗುತ್ತಿದ್ದುದರಿಂದ ರಾಘವೇಂದ್ರನೊಂದಿಗೆ ಶಾಲೆಗೆ ಹೋಗುತ್ತಿದ್ದೆ. ರಾಘು ಬಹಳ ಸರಳ ಸ್ವಭಾವದವನು. ಮಂಗಳೂರಿನ ಎಂ.ಸಿ.ಎಫ್. ಗೊಬ್ಬರ ಕಾರ್ಖಾನೆಯಲ್ಲಿ ಸಿವಿಲ್ ಇಂಜಿನಿಯರ್ ಆಗಿದ್ದು ದೊಡ್ಡ ಹುದ್ದೆಗೇರಿ ನಿವೃತ್ತಿ ಹೊಂದಿದ್ದಾನೆ. ಅವನು ಮತ್ತು ನಾನು ಆಗಾಗ ಭೇಟಿಯಾಗುತ್ತಿರುತ್ತೇವೆ. ಅವನ ಪತ್ನಿ 'ಇನ್ನ'ದ **ಸತ್ಯಭಾಮ** ಎನ್ನುವವಳು. ನಾನು ಫಲಿಮಾರಿನಲ್ಲಿ ಹೊಲಿಗೆ ಅಧ್ಯಾಪಕನಾಗಿದ್ದಾಗ ಅವಳು ನನ್ನ ವಿದ್ಯಾರ್ಥಿನಿಯಾಗಿದ್ದಳು.

ಕನರಾಡಿಯ ಶ್ರೀಯುತ ರಂಗಣ್ಣ ಸರಳಾಯರನ್ನು ತಿಳಿಯದವರಿಲ್ಲ. ಅವರ ಅಡುಗೆ ರುಚಿಯನ್ನು ಸವಿಯದವರು ಆಸುಪಾಸಿನಲ್ಲಿ ಯಾರೂ ಇರಲಿಕ್ಕಿಲ್ಲ. ಅವರ ಮಗ **ವೆಂಕಟ್ರಮಣ ಸರಳಾಯ**. ಇವನು ಸ್ವಲ್ಪ ಗಿಡ್ಡವಾಗಿದ್ದರಿಂದ ಎದುರು ಬೆಂಚಿನಲ್ಲಿ ಕುಳಿತ್ತಿದ್ದ. ಇವನ ಅಮ್ಮ ಮತ್ತು ನನ್ನ ಅಮ್ಮ ಬಹಳ ಆತ್ಮೀಯರಾಗಿದ್ದುದರಿಂದ ಇವನ ಗೆಳೆತನ ಬೆಳೆಯಿತು. ನಮ್ಮ ಮನೆಯ ಸಮಾರಂಭಗಳಿಗೆ ಅವನು ಬರುತ್ತಿದ್ದ ಹಾಗೆಯೇ ಅವನ ಮನೆಯ ಎಲ್ಲಾ ಸಮಾರಂಭಕ್ಕೆ ನಾನು ಹೋಗುತ್ತಾ ನಮ್ಮ ಗೆಳೆತನ ಆತ್ಮೀಯವಾಗಿ ಬೆಳೆಯಿತು. ವೆಂಕಟ್ರಮಣನನ್ನು ಎಲ್ಲರೂ ಪ್ರೀತಿಯಿಂದ **'ಗುಂಡ'** ಎಂದೇ ಕರೆಯುತ್ತಿದ್ದರು.

## ಜಿ.ಆರ್. ಉಪಾಧ್ಯಾಯರ (ವಿ)ಚಿತ್ರ ಜೀವನ

**ಘಟನೆ:** 1965ರ ವಾರ್ಷಿಕೋತ್ಸವಕ್ಕೆ ನಮ್ಮ ಸಂಸ್ಥೆಗೆ 500 ಬೂಂದಿ ಲಾಡು ಮಾಡುವ ಜವಾಬ್ದಾರಿ ರಂಗಣ್ಣ ಸರಳಾಯರಿಗೆ ಕೊಟ್ಟರು. ಅದರ ಮುಂಚಿನ ದಿನ ನಾನು ಅವರ ಮನೆಯಲ್ಲಿ ಇದ್ದು ರಾತ್ರಿ ಇಡೀ ಲಾಡು ಕಟ್ಟಿದ್ದು, ಕಟ್ಟಿದ ಲಾಡನ್ನು ಮರುದಿನ ಸೈಂಟ್ ಲಾರೆನ್ಸ್ ಹೈಸ್ಕೂಲಿಗೆ ಬುಟ್ಟಿಯಲ್ಲಿ ಕೈಕೈ ಹಿಡಿದುಕೊಂಡು ಬಂದುದು ಈಗಲೂ ನೆನಪಿರುವ ವಿಷಯ. ಅಂದಿನ ಗುಂಡ ಈಗ ಬೆಂಗಳೂರಿನ ಮಿಲ್ಕ್ ಡೈರಿಯಲ್ಲಿ **ಮ್ಯಾನೇಜಿಂಗ್ ಡೈರಕ್ಟರ್** ಆಗಿ ನಿವೃತ್ತಿಯಾಗಿದ್ದಾನೆ. ಇವನ ಮದುವೆ ಸಮಯದಲ್ಲಿ ನನ್ನ ಚಿಕ್ಕಪ್ಪ ಪಳ್ಳಿ **ಶ್ರೀ ನಾರಾಯಣ ಉಪಾಧ್ಯಾಯರ** ಮಗಳು **ಶಶಿಕಲಾಳ** ಜಾತಕ ಗುಂಡನ ಜಾತಕಕ್ಕೆ ಕೂಡಿ ಬಂದ ಕಾರಣ ಚಿಕ್ಕಿ ಚಿಕ್ಕಪ್ಪರವನ್ನು ಒಪ್ಪಿಸುವ ಸಂದರ್ಭ ನನಗೆ ಒದಗಿತ್ತು. ಋಣಾನುಸಂಬಂಧವಿತ್ತು. ನನ್ನ ಚಿಕ್ಕಪ್ಪನವರ ಮಗಳು ಶಶಿಕಲಾಳೊಂದಿಗೆ ಗುಂಡನ ಮದುವೆಯಾಯ್ತು. ಹಾಗಾಗಿ ಇವನ ಸಂಪರ್ಕ ನನಗೆ ಜೀವನದಲ್ಲಿ ಆಗಾಗ ಆಗುತ್ತಿತ್ತು.

ನನ್ನ ತರಗತಿಯ ವಿದ್ಯಾರ್ಥಿನಿಯರಲ್ಲಿ **ವಸುಧಾ ಹೆಬ್ಬಾರ್** ಮಾತ್ರ ನೆನಪು. ಯಾಕೆಂದ್ರೆ ನಮ್ಮ ಮಾಣಿಬೆಟ್ಟು ಮನೆಯ ಹತ್ತಿರ **"ಪೊಡಿಕಂಬ್ಳ"** ಎಂಬಲ್ಲಿಂದ ವಸುಧಾ ತರಗತಿಗೆ ಬರುತ್ತಿದ್ದಳು. ಅವಳ ತಂದೆ ಶ್ರೀಯುತ ಮುದ್ದಣ್ಣ ಹೆಬ್ಬಾರ್ ತಾಯಿ, ಲಲಿತಾ ಹೆಬ್ಬಾರ್. ಶಾಲೆಗೆ ಹೋಗುವಾಗ ಬರುವಾಗ ಕೆಲವೊಮ್ಮೆ ಸಿಗುತ್ತಿದ್ದಳು. **ಶ್ರೀಯುತ ಬಿ.ಆರ್. ವಿಷ್ಣುಮೂರ್ತಿ** ಎಂಬವರ ಧರ್ಮಪತ್ನಿಯಾಗಿ ಬಸ್ರಿಕಟ್ಟೆಯ ದೊಡ್ಡ ಎಸ್ಟೇಟ್ ಮಾಲಕರೊಂದಿಗೆ ಜೀವಿಸುತ್ತಿದ್ದಾರೆ. ಅವರ ಗೃಹಪ್ರವೇಶಕ್ಕೆ ನಾನು ಹೋಗಿದ್ದೆ. ಈಗಲೂ ಕೆಲವೊಮ್ಮೆ ಸಿಗುತ್ತಾರೆ.

**ಮರೆಯಲಾಗದ ಘಟನೆ:** ನಮ್ಮ ಎಸ್.ಎಸ್.ಎಲ್.ಸಿ. ಫೋಟೋ ಕಾರ್ಯಕ್ರಮ. ಅಂದು ಎಲ್ಲರೂ ಶುಭ್ರ ಬಟ್ಟೆಯಲ್ಲಿ (ಉಡುಪುಗಳಿಗೆ ಇಸ್ತ್ರಿ ಹಾಕಿ) ಬರುವುದು ಸ್ವಾಭಾವಿಕ. ನಾನೂ ಬಟ್ಟಲಲ್ಲಿ ಬೆಂಕಿಯ ಗೆಂಡ ಹಾಕಿ ಬಿಸಿ ಬಟ್ಟಲಲ್ಲಿ ಇಸ್ತ್ರಿ ಮಾಡಿದ ಉಡುಪು ಧರಿಸಿದ್ದ ನೆನಪು. ನಾನು ಫೋಟೋದಲ್ಲಿ ಚಂದ ಕಾಣಬೇಕೆಂದು ಅಪ್ಪನ ಬಂಗಾರದ ಬಣ್ಣದ ಪ್ರೇಮಿನ ಕನ್ನಡಕ ಕದ್ದುಕೊಂಡು ಹೋಗಿದ್ದೆ. ಫೋಟೋ ತೆಗೆಯುವಾಗ ಇಟ್ಟುಕೊಂಡೆ. ಬಳಿಕ ಕನ್ನಡಕ ನೋಡೋಣ ಎಂದು ಕೆಲವು ಗೆಳೆಯರು ಕಿತ್ತು ಕೊಂಡರು. ಆ ರಭಸಕ್ಕೆ ಕನ್ನಡಕ ತುಂಡಾಯ್ತು. ತಂದೆಯವರಿಗೆ ತಿಳಿದರೆ ಬೈಯುವುದಲ್ಲದೆ ಹೊಡೆಯುತ್ತಾರೆಂದು ತಿಳಿದಿದ್ದ ನಾನು ಮನೆಯ ಬಳಿಯ ಒಂದು ತೂತಿನೊಳಗೆ ಇಟ್ಟು ಕನ್ನಡಕದ ಬಗ್ಗೆ ಏನೂ ತಿಳಿಯದವನಂತಿದ್ದೆ. ಅಪ್ಪನವರಿಗೆ ಓದಲು ಕನ್ನಡಕದ ಅವಶ್ಯಕತೆ ಇತ್ತು. ಓದುವ ಸಲುವಾಗಿ ಕನ್ನಡಕ ಹುಡುಕಿದರೂ ಸಿಗದ ಕಾರಣ ಮನೆಯಲ್ಲಿ ಎಲ್ಲರನ್ನೂ ವಿಚಾರಿಸಿದರು. ನಾನು ಸುಮ್ಮನಿದ್ದೆ. ಒಂದು ವಾರದಲ್ಲಿ ನಮ್ಮ ಎಸ್.ಎಸ್.ಎಲ್.ಸಿ. ಗ್ರೂಪ್ ಫೋಟೋ ಬಂತು. ನಾನೂ ಒಂದು ಪ್ರತಿ ತೆಗೆದುಕೊಂಡು ಬರಬೇಕಾಗಿತ್ತು. ತಂದೆಯವರು ಹಣಕೊಟ್ಟರು. ನಾನು ಫೋಟೋ ನೋಡಿದಾಗ ಕನ್ನಡಕ ಎದ್ದು ಕಾಣುತ್ತಿತ್ತು. ಈ ಫೋ-ಟೋ ಮನೆಯವರಿಗೆ ತೋರಿಸಿದರೆ ಕನ್ನಡಕ ನಾನೇ ಕದ್ದ ವಿಷಯ ತಿಳಿಯುತ್ತದೆ. ಎಂದು ಗುಟ್ಟಾಗಿ ತಂದು ನನ್ನ ಕೋಣೆಯಲ್ಲಿ ಇರಿಸಿದೆ. ತಂದೆಯವರು ಯಾವುದೋ ಕಾರಣಕ್ಕೆ ನನ್ನ ಕೋಣೆಗೆ ಬಂದಾಗ ನನ್ನ ಗ್ರೂಪ್ ಫೋಟೋ ನೋಡಿದರು. ಆವಾಗ ತಿಳಿಯಿತು ನಾನು ಕನ್ನಡಕ ಧರಿಸಿದ್ದು – ಕನ್ನಡಕ ಕದದ್ದಕ್ಕೆ ನನ್ನನ್ನು ಕರೆದು ಗದರಿಸಿ ನಾಲ್ಕು ಬೆತ್ತದಲ್ಲಿ ಬಿಗಿದದ್ದು ಈಗಲೂ ನೆನಪಿದೆ.

## ದೇವರ ಭಯವೇ ಜ್ಞಾನದ ಆರಂಭ

**ಮರೆಯಲಾರದ ಘಟನೆ :** ನನ್ನ ತಮ್ಮ ನಾಗರಾಜನ ಉಪನಯದ ಸಂದರ್ಭ ಮನೆಯಲ್ಲಿಯೇ ಬ್ರಹ್ಮೋಪದೇಶವಾದ್ದರಿಂದ ಚಪ್ಪರ ಹಾಕುವ ಕೆಲಸ, ನೆಲಕ್ಕೆ ಸೆಗಣಿ ಸಾರಿಸುವ ಕೆಲಸ ಎಲ್ಲಾ ಒಕ್ಕಲಿನವರಿಂದ, ಕೂಲಿಯವರಿಂದ ನಡೆಯುತ್ತಿತ್ತು. ಮುಂಚಿನ ದಿನ ಗೆಳೆಯರಾದ ನಾವೆಲ್ಲಾ ನಮ್ಮ ಮನೆ ಮೂಡುಮಠದಲ್ಲಿ ಸೇರಿದ್ದೆವು. ಆವಾಗ ನಾನು 10ನೇ ತರಗತಿ. ನನ್ನ ಆತ್ಮೀಯ ಗೆಳೆಯರಾದ ಗುಂಡ, ಕಂದು, ರಾಘು ನಾಲ್ಕು ಮಂದಿ ಸೇರಿ ಬಾವಿಯಿಂದ ನೀರು ಸೇದಿ ಪಾತ್ರೆಗಳಿಗೆ ತುಂಬಿಸಿದೆವು. ಚಪ್ಪರ ಸಿಂಗರಿಸುವ ಕೆಲಸವೂ ನಮ್ಮದಾಗಿತ್ತು. ಫಲ ಪುಷ್ಪಗಳಿಂದ ಸಿಂಗರಿಸಿದೆವು, ಸೀಯಾಳ ಗೊಂಚಲು, ಅಡಿಕೆ ಗೊಂಚಲು, ಬಾಳೆ ಗೊನೆಗಳಿಂದ ಬಣ್ಣ ಕಾಗದದಿಂದ ಒಳ ಅಂಗಳ ಹಾಗೂ ಹೊರ ಅಂಗಳದ ಚಪ್ಪರ ಶೃಂಗರಿಸಿದಾಗ ರಾತ್ರಿ 12.00 ಗಂಟೆಯಾಗಿತ್ತು. ಮಲಗಲು ಚಾಪೆ ಹಾಕಿ ಹೊದಿಕೆ ಹಾಕಿ ಮಲಗಲು ಒಂದೇ ಜಾಗ ನಿರ್ಧರಿಸಿದೆವು. ಎಲ್ಲರೂ ಮಲಗಿದ್ದರು. ಅಡುಗೆ ಕೋಣೆಯಲ್ಲಿ ಸಿಹಿತಿಂಡಿ ತಯಾರು ಮಾಡುತ್ತಾ ಇದ್ದರು. ಅಡುಗೆ ಮನೆಯಲ್ಲಿ ಮಾತ್ರ ಗ್ಯಾಸ್‌ಲೈಟ್ ಬೆಳಕು ಇತ್ತು. ಉಳಿದ ಕಡೆಗಳಲ್ಲಿ **ಕಾಲು ದೀಪದ** ಮತ್ತು **ಲಾಟಾನ್** ಹಾಗೂ **ಸೀಮೆ ಎಣ್ಣೆ ದೀಪದ ಬೆಳಕು** ಇತ್ತು. ಗ್ಯಾಸ್‌ಲೈಟ್, ಕಾಲುದೀಪ, ಲಾಟಾನ್, ಸೀಮೆಎಣ್ಣೆ ಅಲ್ಪ ಸ್ವಲ್ಪ ಈ ಬೆಳಕಿನಲ್ಲಿ ನಾವು ನಾಲ್ಕು ಜನ ಒಂದು ಜಾಗದಲ್ಲಿ ಮಲಗಿದ್ದು ಯಾರಿಗೂ ಕಾಣಿಸುತ್ತಿರಲಿಲ್ಲ, ಕಂಡರೂ ಎಲ್ಲರೂ ಮುಸುಕಿನೊಳಗಿದ್ದೆವು. ನಾವು ಮಲಗಿದ ಮುಂಭಾಗದಲ್ಲಿ ಒಳ ಅಂಗಳದ ಚಪ್ಪರದ ಅಲಂಕಾರಕ್ಕೆ ಜೋಡಿಸಿದ (ನಾವೇ ಕಟ್ಟಿದ್ದ) ಬಾಳೆಗೊನೆಯೊಂದು ನಮ್ಮ ನಾಲ್ವರ ಕಣ್ಣಿಗೆ ಬಿತ್ತು. ತುಂಬಾ ಹಸಿವೆಯಾಗುತ್ತಿತ್ತು. ಒಬ್ಬ ಹೋಗಿ 4 ಬಾಳೆಹಣ್ಣು ಮೆಲ್ಲ ಕಿತ್ತು ತಂದು ನಾಲ್ವರಿಗೂ ಕೊಟ್ಟು ಮುಸುಕು ಹಾಕಿ ತಿಂದೆವು. ಇನ್ನು ನಾಲ್ಕು ಬಾಳೆಹಣ್ಣು ಕಿತ್ತು ನಮ್ಮೆಲ್ಲರಿಗೂ ಇನ್ನೊಬ್ಬ ಕೊಟ್ಟ. ಅದೇ ರೀತಿ ನಾಲ್ಕು ಜನರ ಸರದಿಯಲ್ಲಿ ಎಲ್ಲಾ ಬಾಳೆಹಣ್ಣು ನಮ್ಮ ಹೊಟ್ಟೆ ಸೇರಿತು. ಸ್ವಲ್ಪ ಹೊತ್ತಿನಲ್ಲಿ ಸಣ್ಣ ಗೊನೆಯೊಂದು ಕಾಲಿಯಾಗಿತ್ತು. ಕಾಲಿ ಗೊನೆಯ ಅವಶೇಷ ಬೇಡವೆಂದು ನಾನೇ ಹಗ್ಗ ಬಿಚ್ಚಿ ಗೊನೆ ಉಳಿದ ಭಾಗ ಹೊರಗೆ ಬಿಸಾಡಿದೆ. ಎಲ್ಲರೂ ಏಳುವ ಮೊದಲೇ ಎದ್ದು ಸ್ನಾನ ಮುಗಿಸಿ ನೀರು ತುಂಬಿಸಬೇಕಾದ ಪಾತ್ರೆಗಳಲ್ಲಿ ನೀರು ತುಂಬಿಸಿದೆವು. ಅಡುಗೆಗೆ ಬೇಕಾದ ತೆಂಗಿನ ಕ್ಯಾ ತುರಿದುಕೊಟ್ಟೆವು. ನಮ್ಮ ಕೆಲಸವನ್ನು ಎಲ್ಲರೂ ಮೆಚ್ಚಿದ್ದರು. ಆಗಾಗ ನೆಂಟರು ಬರುತ್ತಿದ್ದಾಗ ಬಾಳೆಗೊನೆ ಎಲ್ಲಿ ಹೋಯ್ತು ಎಂದು ತಂದೆಯವರು ಹುಡುಕಾಡುತ್ತಿದ್ದರು. ನಾವು ಏನೂ ತಿಳಿಯದವರಂತೆ ಆ ವಿಷಯ ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಇಂದಿಗೂ ಬಾಳೆಗೊನೆ ನೋಡುವಾಗ ಘಟನೆ ನೆನಪಿಗೆ ಬರುತ್ತದೆ.

**ಮರೆಯಲಾರದ ಘಟನೆ:** ಉಪನಯನ ಊಟಕ್ಕೆ ನಾವು ನಾಲ್ಕು ಮಂದಿಯ ಜೊತೆಗೆ ನಮಗೆ ಇನ್ನೊಬ್ಬರು ನಮ್ಮ ಪ್ರಾಯದವರೇ ಆದ ಕಳತ್ತೂರು **ರಾಮಚಂದ್ರ ತಂತ್ರಿಗಳು** ಸಿಕ್ಕಿದರು. ಇವರು ಕಲಿಯುತ್ತಾ ಇದ್ದವರು ಕಲಿಯುವುದನ್ನು ಬಿಟ್ಟು ಕಟ್ಟಿಂಗೇರಿ ದೇವಸ್ಥಾನದಲ್ಲಿ ಪೂಜೆ ಮಾಡಲು ಪ್ರಾರಂಭಿಸಿದ್ದರು. ನಮ್ಮ ಪ್ರಾಯದವರೇ ಆದುದರಿಂದ ನಮ್ಮೊಂದಿಗೆ ಬಡಿಸಲು ನಿಂತರು. ಊಟಕ್ಕೆ ಎಲೆ ಹಾಕಿ 200–225 ಜನ ಊಟಕ್ಕೆ ಕೂತವರಿಗೆ ಬಡಿಸಿದೆವು. 2ನೇ ಪಂಕ್ತಿಗೆ ಬಡಿಸಲು ಸಹಾಯ ಮಾಡಿದವರ ಸರದಿ. ನಾವು ಐದು ಜನರಾದ ನಾನು, ಕಂದು, ಗುಂಡ, ರಾಘು, ರಾಮಚಂದ್ರ ತಂತ್ರಿ ಊಟಕ್ಕೆ ಕುಳಿತೆವು. ಸಾಮಾನ್ಯವಾಗಿ ಮದುವೆ, ಉಪನಯನ, ಶ್ರಾದ್ಧದ ಊಟಕ್ಕೆಲ್ಲಾ ದಕ್ಷಿಣೆ

ಸಿಗುತ್ತದೆ. ತಂದೆಯವರು ನನ್ನ ಹೊರತು ಪಡಿಸಿ ಉಳಿದ ನಾಲ್ವರಿಗೂ 4 ಆಣೆ ದಕ್ಷಿಣೆ ಕೊಟ್ಟಿದ್ದರು. ಊಟದ ಬಳಿಕ ಕಚ್ಚೆ ಬಿಸಾಡಿ, ಚಡ್ಡಿ ಅಂಗಿ ಸಿಕ್ಕಿಸಿ ಹೊರ ಸಂಚಾರಕ್ಕೆ ಹೋದೆವು. ಮುಕ್ಕಾಲು ಮೈಲು ದೂರದ ಹೊಳೆ ಬದಿಗೆ ಹೋದೆವು. ಅಲ್ಲಿಗೆ **"ಅಟ್ಟಿಂಜ"** ಎನ್ನುತ್ತಾರೆ. ಅಟ್ಟಿಂಜದ ಹೊಳೆ ದಾಟಿದರೆ ಹೊಳೆ ಬದಿಯಲ್ಲಿ ಒಂದು ಗೂಡಂಗಡಿ ಇತ್ತು. ಇಲ್ಲಿಗೆ ಕರಕೊಂಡು ಬರಲು ಮಾರ್ಗದರ್ಶಕ ರಾಮಚಂದ್ರ ತಂತ್ರಿ. ನಮ್ಮೆಲ್ಲರಿಗಿಂತ ಸ್ವಲ್ಪ ಹಿರಿಯವನಾಗಿದ್ದ. ಅವನಿಗೆ ಬೀಡಿ, ಸಿಗರೇಟು ಎಳೆಯುವ ಚಟವಿತ್ತು. ಸಿಕ್ಕಿದ ದಕ್ಷಿಣೆ ಹಣದಲ್ಲಿ ಒಂದು ಪ್ಯಾಕೇಟ್ ಸಿಗರೇಟು ತೆಗೆದುಕೊಂಡು ಹೇಳಿದ **'ನಾನು ಸಿಗರೇಟು ಸೇದುತ್ತೇನೆ, ನೀವೂ ಸೇದುತ್ತೀರಾ?'** ಎಂದು. ನಮಗೂ ಮನಸ್ಸಾಯಿತು. ನಾವು ನಾಲ್ಕು ಜನರೂ ಅಭ್ಯಾಸ ಇಲ್ಲದೆ ಕೆಲವೊಮ್ಮೆ ಹೊಗೆ ತಿಂದೆವು. ಕೆಲವೊಮ್ಮೆ ಹೊಗೆ ಬಿಟ್ಟೆವು. ಕೆಮ್ಮು ಆಗಾಗ ಬರುತ್ತಿತ್ತು. ವಾಪಾಸ್ ಮನೆಗೆ ಬಂದೆವು. ನನ್ನ ಗೆಳೆಯರು ಅವರವರ ಮನೆಗೆ ಹೋದರು. 6,7 ಗಂಟೆ ಸಂಜೆ ಹೊತ್ತಿಗೆ ನನಗೆ ವಾಂತಿ ಪ್ರಾರಂಭವಾಯ್ತು. ಎಡೆಬಿಡದೆ ವಾಂತಿ ಬಂದುದರಿಂದ ತಂದೆಯವರಿಗೆ ಸಂಶಯವಾಗಿ ವಿಚಾರಿಸಿದರು. ಬಾಯಿ ಬಿಡಲೇಬೇಕಾದ ಪ್ರಸಂಗ. ಸಿಗರೇಟು ಸೇದಿದ ಬಗ್ಗೆ ತಿಳಿದ ಅಪ್ಪನವರಿಂದ ಬೆತ್ತದೇಟು ತಿಂದು **"ಇನ್ನು ಸಿಗರೇಟು ಸೇದಲಾರೆನೆಂದು"** ಮಾತು ಕೊಟ್ಟೆ. ಆ ಬಳಿಕ ಸಿಗರೇಟಿನ ರುಚಿ ನೋಡಲೇ ಇಲ್ಲ. ಸಿಗರೇಟು ನೋಡಿದಾಗ ಪೆಟ್ಟಿನ ನೆನಪಾಗುತ್ತದೆ.



Find out ...? (ABHAYA GANAPA)

## ನಾನು ಅಂದು ಕಂಡದ್ದು – ಇಂದು ಕಾಣದ್ದು
### (ಅಂದಿನ ನಮ್ಮ ಆಟಗಳು)

ನಾವು ಸಣ್ಣವರಿರುವಾಗ ಶಾಲೆಗೆ ಹಾಕಿಕೊಳ್ಳುವ 2 ಜೊತೆ ಅಂಗಿ ಚಡ್ಡಿ ಹೊರತುಪಡಿಸಿ ನಮಗೆ ಮಾನ ಮುಚ್ಚಿಕೊಳ್ಳಲು ಇದ್ದುದು ಲಂಗೋಟಿ ಮಾತ್ರ. ಹೆಚ್ಚಿನ ಸಮಯ ಲಂಗೋಟಿಯಲ್ಲೇ ಕಳೆಯಬೇಕು. ಶಾಲೆಯ ಉಡುಪು ಮೈಲಿಗೆ. ಅದನ್ನು ಹೊರಗಡೆ ಇಡಬೇಕು. ಯಾರಿಗೂ ಮುಟ್ಟಿಸಬಾರದು. ಬಳಿಕ ರೇಷ್ಮೆಯ ತುಂಡು ಬಟ್ಟೆಯ ಲಂಗೋಟಿ ಕಟ್ಟಿಕೊಂಡು ಆಟ ಊಟ ಇತ್ಯಾದಿ. ನಮ್ಮ ಸಣ್ಣ ಪ್ರಾಯದಲ್ಲಿ ಮನೆಯ ಒಳಗಡೆ ಇರುವುದಕ್ಕಿಂತ ಹೆಚ್ಚಾಗಿ ಮಣ್ಣಿನಲ್ಲೇ ಆಡುತ್ತಿದ್ದೆವು. ಅಡುಗೆ ಮಾಡುವುದು, ಊಟ ಮಾಡುವುದು, ಮನೆ ಕಟ್ಟುವುದು ನಮ್ಮ ಅಂಗಳದ ಆಟವಾಗಿತ್ತು. ನಮ್ಮ ಅಕ್ಕನವರು ಕಲ್ಲಿನ ಒಲೆ ಮಾಡಿ ಗೆರಟೆ ಪಾತ್ರೆಯಲ್ಲಿ ಮಣ್ಣು ಮರಳು, ಹೊಯ್ಗೆ, ಸೊಪ್ಪು ಹಾಕಿ ಅನ್ನ ಪದಾರ್ಥ ಮಾಡುವುದು. ಗಾತ್ರದಲ್ಲಿ ದೊಡ್ಡ ಎಲೆಯಲ್ಲಿ ನಮಗೆ ಉಣ ಬಡಿಸುವುದು. ಎಲೆಗೆ ಹಾಕಿದ ಹೊಯ್ಗೆ, ಮಣ್ಣು ಪದಾರ್ಥಗಳನ್ನು ನಾವು ಉಂಡ ಹಾಗೆ ಮಾಡುವುದು, ಕೈ ತೊಳೆದ ಹಾಗೆ ಮಾಡುವುದು ನಮ್ಮ ಅಂದಿನ ಮುಖ್ಯ ಆಟ. ಗೆರಟೆಯಲ್ಲಿ ಹೊಯ್ಗೆ ಹಾಕಿ ನೀರು ಹಾಕಿ ತರಗೆಲೆಯಲ್ಲಿ ಬೆಂಕಿ ಮಾಡಿ ಎಷ್ಟು ಬಾರಿ ಗೆರಟೆ ಸುಟ್ಟು ಹೋದುದುಂಟು. ಸಣ್ಣ ಸಣ್ಣ ಗೆರಟೆಯಲ್ಲಿ ಹೊಯ್ಗೆಯನ್ನು ಒತ್ತಿ ಇಟ್ಟು ಕವಚಿ ಹಾಕಿದರೆ ಇಡ್ಲಿ ಆಗುತ್ತದೆ. ಇಂತಹ ಹೊಯ್ಗೆ ಇಡ್ಲಿಯನ್ನು ಎಲೆಗೆ ಹಾಕಿ ಉಂಡ ಹಾಗೆ ಆಟವಾಡುವುದು ಸಾಮಾನ್ಯ. ನೆಲದ ಮೇಲೆ ಕೋಲಿನಲ್ಲಿ ಕೋಣೆಗಳನ್ನು ಹಾಕಿ ಜಿಬಿಲಿ ಆಟ, ಕಲ್ಲಿನ ಪಲ್ಲೆಗಳನ್ನು ಕೋಣೆಗಳಿಗೆ ಎತ್ತಿ ಬಿಸಾಡಿ ಟೊಂಕದಲ್ಲಿ ಆಟ ಆಡುತ್ತಿದ್ದೆವು.



**ಲಗೋರಿ ಆಟ** : ಚಪ್ಪಟೆ ಕಲ್ಲನ್ನು ಮೇಲಿಂದ ಮೇಲೆ ಇಟ್ಟು ಚೆಂಡು ದೂರದಲ್ಲಿ ಅದಕ್ಕೆ ತಾಗುವಂತೆ ಬಿಸಾಡುವುದು, ಅದು ಎಲ್ಲಿಯಾದರೂ ಅಡ್ಡ ಬಿದ್ದರೆ ಉಳಿದವರು ಮೇಲಿಂದ ಮೇಲೆ ಜೋಡಿಸಲು ಪ್ರಯತ್ನಿಸುವುದು, ಇನ್ನೊಂದು ಪಂಗಡ ಜೋಡಿಸುವವರಿಗೆ ಚೆಂಡಿನಲ್ಲಿ ತಾಗುವಂತೆ ಬೀಸಾಡಿದರೆ ಔಟ್. 7 ಚಪ್ಪಟೆ ಕಲ್ಲುಗಳನ್ನು ಜೋಡಿಸಿ ಬಿಟ್ಟರೆ **'ಲಗೋರಿ'** ಎಂದು ಜೋರಾಗಿ ಹೇಳುತ್ತಾ ಕುಣಿಯುತ್ತಿದ್ದ ಸಂದರ್ಭ ಈಗಿನ ಮಕ್ಕಳಿಗೆ ಕನಸಿನ ಮಾತು.



**ಕುಟ್ಟಿ ದೊಣ್ಣೆ** : ಆಟದಲ್ಲಿ ಒಂದು ಹೊಂಡ, ಅದಕ್ಕೆ ಅಡ್ಡ ಕುಟ್ಟಿ ಇಟ್ಟು ಒಂದು ಪಂಗಡದವರು ದೊಣ್ಣೆಯನ್ನು ಹೊಂಡದ ಮೂಲಕ ಕುಟ್ಟಿಯನ್ನು ಎದುರು ಪಂಗಡದವರ ಭಾಗಕ್ಕೆ ಹೊಡೆಯಬೇಕು. ಕುಟ್ಟಿ ಯಾರು ಹಿಡಿದರೂ ಔಟ್. ನೆಲಕ್ಕೆ ಬಿದ್ದರೆ ನೆಲಕ್ಕೆ ಬಿದ್ದ ಕುಟ್ಟಿಯನ್ನು ದೊಣ್ಣೆ ಹಿಡಿದಾತನಿಗೆ ಬಿಸಾಡಬೇಕು. ಅವನು ಅದಕ್ಕೆ ದೊಣ್ಣೆಯಲ್ಲಿ ದೂರಕ್ಕೆ ಹೊಡೆಯಬೇಕು, ಹೊಡೆದಾಗ ಎಷ್ಟು ದೂರ ಬಿತ್ತೆಂದು ದೊಣ್ಣೆಯಲ್ಲಿ ಅಳೆಯುವುದು. ಹಾಗೆ ಇಡೀ ಪಂಗಡದವರ ಮೊತ್ತ ದೊಣ್ಣೆಯ ಲೆಕ್ಕದಲ್ಲಿ ಎಷ್ಟೆಂದು ನೋಡಿ ಹೆಚ್ಚಾದವರು ಗೆದ್ದ ಹಾಗೆ.

**ಕಣ್ಣು ಮುಚ್ಚಾಲೆ** : ದೊಡ್ಡವರು ಒಬ್ಬರ 2 ಕಣ್ಣನ್ನು ಮುಚ್ಚಿ ಹಿಡಿದು **ಕಣ್ಣಾ ಮುಚ್ಚೆ ಕಾಡೇ ಕೂಡೇ ಉದ್ದಿನ ಮೂಟೆ ಉರ್ಲೇ ಹೋಯ್ತು. ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ ನಿಮ್ಮಯ ಹಕ್ಕಿ ಅಡಗಿಕೊಳ್ಳಿ, "ಕೂ"** ಎಂದು ಗಟ್ಟಿಯಾಗಿ ಹೇಳಿ ಕೈ ಬಿಡುತ್ತಿದ್ದರು. ಆವಾಗ ಕಣ್ಣು ಮುಚ್ಚಿಸಿಕೊಂಡವರ ಹೊರತಾಗಿ ಉಳಿದವರೆಲ್ಲಾ ಬೇರೆ ಬೇರೆ ಜಾಗದಲ್ಲಿ ಯಾರಿಗೂ ಗೊತ್ತಾಗದ ಜಾಗದಲ್ಲಿ ಅಡಗಿ ಕುಳಿತುಕೊಳ್ಳಬೇಕು. ಕಣ್ಣು ಬಿಟ್ಟಕೂಡಲೇ ಅಡಗಿ ಕುಳಿತವರನ್ನು ಹುಡುಕುತ್ತಾ ಹೋಗುವಾಗ ಯಾರಾದರೂ ಒಬ್ಬರನ್ನು ಮುಟ್ಟಿದರೆ ಔಟ್. ಅಡಗಿ ಕುಳಿತುಕೊಂಡವರಲ್ಲಿ ಯಾರಾದರೊಬ್ಬರು ಕಣ್ಣು ಮುಚ್ಚಲು ಕುಳಿತವರನ್ನು ಓಡಿ ಬಂದು ಮುಟ್ಟಿದರೆ ಔಟ್.



**ಬುಗರಿ ಆಟ** : ಬುಗರಿ ಆಟಕ್ಕೆ ಮನೆಗೆ ಬಂದ ಆಚಾರಿಗಳಲ್ಲಿ ಒತ್ತಾಯ ಮಾಡಿ ಬುಗರಿ ಮಾಡಿಸಿಕೊಳ್ಳುತ್ತಿದ್ದೆವು. ಬಿಡುವಿನ ಸಮಯದಲ್ಲಿ ಅವರು ಮಾಡಿಕೊಡುತ್ತಿದ್ದರು. ಅದಕ್ಕೆ ಸುತ್ತುವ ದಾರ ಒಂದಿತ್ತು. ಆ ದಾರವನ್ನು ಮರದ ಬುಗರಿಗೆ ಸುತ್ತಿ ಬೀಸಿ ನೆಲಕ್ಕೆ ಎಸೆದರೆ ಅದು ಜೋರಾಗಿ ನೆಲದಲ್ಲಿ ತಿರುಗುತ್ತಿತ್ತು. ಇದನ್ನು ನೋಡುವುದು ಮತ್ತು ಆಡುವುದು ಎಂದರೆ ಎಲ್ಲಿಲ್ಲದ ಸಂತೋಷ. ಬುಗರಿ ಆಟದಲ್ಲಿ ಸ್ಪರ್ಧೆ ಇದೆ. ನೆಲದಲ್ಲಿ ಒಂದು ವೃತ್ತ. ಆವೃತ್ತದೊಳಗೆ ಒಬ್ಬ ಒಂದು ಬುಗರಿ ಇಡಬೇಕು. ಇನ್ನೊಬ್ಬ ದಾರ ಸುತ್ತಿ ಅದಕ್ಕೆ ತಾಗುವಂತೆ ಹೊಡೆಯಬೇಕು. ಅದು ವೃತ್ತದಿಂದ ಹೊರಗೆ ಎಸೆಯಲ್ಪಟ್ಟರೆ ಔಟ್ ಎಂದು ತಿಳಿಯುವುದು.

**ಪೊಕ್ಕು ಆಟ** : ಇದನ್ನು ಹೆಚ್ಚಾಗಿ ಹುಡುಗಿಯರು ಆಡುವುದು ಸಾಮಾನ್ಯ. 7–8 ಕಲ್ಲು(ಹುಣಸೆ ಬೀಜದ ಗ್ರಾತ್ರದ್ದು)ಗಳಲ್ಲಿ ಆಡುವುದು. ಒಂದು ಕಲ್ಲನ್ನು ಹಿಡಿದುಕೊಂಡು ನೆಲದಲ್ಲಿದ್ದ ಒಂದೊಂದೇ ಕಲ್ಲನ್ನು ಹೆಕ್ಕುವುದು 2–2 ಕಲ್ಲು ಹೆಕ್ಕುವುದು 3–3 ಕಲ್ಲು ಹೆಕ್ಕುವುದು. ಈ ಆಟದಲ್ಲಿ 2–3 ರೀತಿಯ ಆಟಗಳಿವೆ. ಮಳೆ ಬರುತ್ತಿರುವಾಗ ಮನೆಯೊಳಗೆ ಆಟವಾಡುತ್ತಿದ್ದೆವು.



**ಚೆನ್ನಮಣೆ ಆಟ** : ಚೆನ್ನ ಮಣೆಯಲ್ಲಿ 14 ಹೊಂಡವಿದ್ದು 7 ಒಂದು ಬದಿಯಲ್ಲಿ ಇನ್ನೊಂದು ಬದಿಯಲ್ಲಿ 7 ಹೊಂಡವಿರುತ್ತದೆ. ಇದಕ್ಕೆ ಹುಣಸೆಬೀಜ, ಗುರುಗುಂಜಿ, ಪೊಂಗಾರು ಕ್ಯಾ, ಮಂಜೆಟ್ಟಿ ಮುಂತಾದ ಕಾಯಿಗಳನ್ನು ಬಳಸಿ ಆಡುತ್ತಿದ್ದೆವು. ಒಂದೊಂದು ಹೊಂಡದಲ್ಲಿ ನಾಲ್ಕು ನಾಲ್ಕು ಕ್ಯಾ ಹಾಕಿ ಆಡುವ ಆಟ ಸಾಮಾನ್ಯ. ಆಟ ಇಬ್ಬರು ಆಡುವುದು. ಆಡುವಾಗ ಕ್ಯಾಗಳ ಸಂಖ್ಯೆಯ ಪ್ರಕಾರ ಅವುಗಳಿಗೆ ಹೆಸರು ಇತ್ತು. ಕ್ಯಾ ಹಾಕುತ್ತಾ ಹೋಗುವಾಗ ಕಾಲಿ ಹೊಂಡ ಬಂದರೆ ಕಾಲಿ ಹೊಂಡದ ನಂತರದ ಹೊಂಡದ ಕ್ಯಾ ಆಡುವವರಿಗೆ. 1 ಕ್ಯಾ ಆದರೆ **ಕೂಂತೆ,** 2 ಕ್ಯಾ ಸಿಕ್ಕಿದರೆ **ಲತ್ತೆ,** 3 ಕ್ಯಾಗೆ **ಮುಕ್ತಿ,** 4 ಕ್ಯಾ ಆದರೆ **ಬುಳೆ,** 5 ಮತ್ತು ಅದಕ್ಕಿಂತ ಹೆಚ್ಚು ಸಿಕ್ಕಿದರೆ **ಪೆರ್ಗ** ಎಂದು ಹೆಸರು. ಚೆನ್ನೆ ಆಟದಲ್ಲಿ ಕೆಲವು ಆಟಗಳ ವಿಭಾಗ ಇದೆ **"ಸೀತಾದೇವಿ" ಆಟ, ಜೋಡು ಪೆರ್ಗ**.



**ಚದುರಂಗ ಆಟ :** ದೇವರ ಆಟ ಚದುರಂಗ ಆಟ. 6 ಕವಡೆ ಹಾಗೂ ನಾಲ್ಕು ಜನ ಸೇರಿ ಆಡುವ ಆಟ. ಚದುರಂಗದ ಚಿತ್ರ: ನೆಲದ ಮೇಲೆ ಅಥವಾ ಕುಳಿತುಕೊಳ್ಳುವ ಮಣೆಯ ಹಿಂಭಾಗ ಚೌಕುಳಿ ಕೋಣೆಯ ಚಿತ್ರ ಬಿಡಿಸುವುದು. ವಸ್ತು: ನಾಲ್ಕು ಮಂದಿಗೆ ಬೇರೆ ಬೇರೆ ರೀತಿಯ ಗುರುತಿನ ಕ್ಯಾ, ಕಲ್ಲು, ಬಳೆ ಚೂರು ಇಟ್ಟು ಆಡುವುದು. ಕವಡೆ 6 ಕವಚಿ ಬಿದ್ದರೆ ಆರು ಕೋಣೆ ಮುಂದಕ್ಕೆ ನಮ್ಮ ಕ್ಯಾ ಇಡುವುದು, ಇನ್ನೊಬ್ಬರೂ ಹಾಗೆ ಇಡುತ್ತಾ ಬಂದಾಗ ಒಬ್ಬರ ಕೋಣೆಯಲ್ಲಿ ಇನ್ನೊಬ್ಬರ ಕ್ಯಾ ನಿಂತರೆ ಪ್ರಾರಂಭದ ಸ್ಥಾನಕ್ಕೆ ಹೋಗಬೇಕು. ಒಬ್ಬರಿಗೆ ಒಂದೇ ಆಟದ ಅವಕಾಶ. ಮಧ್ಯದ ಜಾಗಕ್ಕೆ ನಾಲ್ಕು ಕ್ಯಾ ಹೋದವರು ಆಟದಲ್ಲಿ ಗೆದ್ದಂತೆ.



**ಪೇಟ್ಲ :** ಅಷ್ಟಮಿ ಹಬ್ಬ, ಕೃಷ್ಣ ಜನ್ಮಾಷ್ಟಮಿಯಿಂದ ದೀಪಾವಳಿ ಹಬ್ಬದ ತನಕದ ನೆನಪಿನಲ್ಲಿದ್ದ ನಮ್ಮ ಆಟವೆಂದರೆ **"ಪೇಟ್ಲ"**. ಸೀಮೆ ಕೋಲು ಎಂದರೆ ಬಿದಿರು ಜಾತಿಯ ಇನ್ನೊಂದು ಎತ್ತರಕ್ಕೆ ಬೆಳೆಯುವ ಗಿಡ, ಇದರ ಗೆಲ್ಲು ಕಡಿದು ತಂದೆಯವರು ತಂದರೆ ನಾವೆಲ್ಲಾ ಪೇಟ್ಲ ಒಡೆಯುವ ಹಬ್ಬ ಬಂತು ಎಂದು ತಿಳಿಯುತ್ತಿದ್ದೆವು. ಸೀಮೆ ಕೋಲಿನ ಮಧ್ಯಭಾಗ ಟೊಳ್ಳು ಇರುತ್ತದೆ. ಅದನ್ನು 12" ಉದ್ದಕ್ಕೆ ತುಂಡು ಮಾಡಿ ಅದರ 4" ಉದ್ದದ ಇನ್ನೊಂದು ತುಂಡಿನಲ್ಲಿ ಅದರ **'ಗಜ'** ಎನ್ನುವ ಭಾಗ ತಯಾರಿಸಬೇಕು. ಪೇಟ್ಲದ ಹಿಡಿಕೆಗೆ ಗಟ್ಟಿಯಾದ ಹಿಡಿಕೆ, ಕೇಪುಳದ ನೆಟ್ಟಗಿನ ಕೋಲು ಗಟ್ಟಿಯಾಗಿ ಸಿಕ್ಕಿಸಬೇಕು. ಗಜಕೋಲಿನ ಅಳತೆ ಪೇಟ್ಲದ ಅಳತೆಗಿಂತ (ಕಾಲು) $^1/_4$ಇಂಚು ಕಡಿಮೆ ಇರಲೇಬೇಕು. ಪೇಟ್ಲದ ಬುಡ ಭಾಗದಲ್ಲಿ **'ಪೇಟ್ಲ ಕಾಯಿ'** ಒಂದು ಜಾತಿಯ ಗಿಡದಲ್ಲಿ ಗೊಂಚಲು ಗೊಂಚಲು ಸಿಗುತ್ತದೆ. ಅದೇ ಸಮಯದಲ್ಲಿ ಅದು ಸರಿಯಾಗಿ ಬೆಳೆಯುತ್ತಿತ್ತು. ಪೇಟ್ಲದ ಬುಡದಲ್ಲಿ ಪೇಟ್ಲ ಕಾಯಿ ಇಟ್ಟು ಗಜಕೋಲಿನಿಂದ ಕಾಯಿಯನ್ನು ಹಿಡಿಕೆಯ ಸಹಾಯದಿಂದ ಬಲಹಾಕಿ ಒಮ್ಮೆಲೆ ದೂಡಿದರೆ ಅದು **ಟಪ್** ಎಂದು ಶಬ್ಧ ಬರುತ್ತಿತ್ತು. ಈ ಶಬ್ಧ ಕೇಳಲಿಕ್ಕೆ ಒಂದು ರೀತಿಯ ಆನಂದ ಅತೀ ಗಟ್ಟಿ ಕೇಳಬೇಕಾದರೆ ತೆಂಗಿನ ಗರಿಯಲ್ಲಿ ತುದಿಗೆ ಸುತ್ತಬೇಕು (ಚಿತ್ರದಲ್ಲಿ ತೋರಿಸಿದಂತೆ) ಇದು ಸುತ್ತಿದರೆ ಸುಮಾರು ಕಿ.ಮಿ ದೂರದ ತನಕ ಶಬ್ಧ ಕೇಳುತ್ತಿತ್ತು. ಈ ಶಬ್ಧ ಗಟ್ಟಿ ಕೇಳುವಂತೆ ಮಾಡಿ ಆಟ ಆಡುತ್ತಿದ್ದೆವು.



**ಪೂಜೆ ಆಟ :** ನಮ್ಮ ತಂದೆಯವರು ಪೂಜೆ-ಪುರೋಹಿತ ಮಾಡುತ್ತಿದ್ದುದರಿಂದ ಪೂಜೆಆಟ ನಮಗೆ ಮೋಜು ಕೊಡುತ್ತಿತ್ತು. ಮಕ್ಕಳೆಲ್ಲಾ ಸೇರಿ ಒಂದು ಕಲ್ಲು ತಂದಿಟ್ಟು (ನಾನು ಮಣ್ಣಿನ ಮುದ್ದೆಯಲ್ಲಿ ಗಣಪತಿ ಮೂರ್ತಿ ಮಾಡಿದ್ದೆ) ಅದನ್ನು ಮಧ್ಯದಲ್ಲಿ ಇಟ್ಟು ಒಬ್ಬರು ಅದನ್ನು ಅಲಂಕಾರಗೊಳಿಸುವುದು ಉಳಿದವರು ಬೇರೆ ಬೇರೆ ಗಿಡದಲ್ಲಿ ಸಿಗುವ ಹೂಗಳು, ಕೇಪುಳ ಹೂ, ಮೂರಿ ಹೂ ಹೀಗೆ ಗಿಡಗಳಲ್ಲಿ ನೂರಾರು ರೀತಿಯ ಕಾಟು ಹೂಗಳನ್ನು ತರುತ್ತಿದ್ದರು. ಈ ಹೂಗಳನ್ನು ದೇವರ ಮುಂದೆ ಒಬ್ಬರು ಕುಳಿತು ಅಲಂಕಾರ ಮಾಡುತ್ತಿದ್ದರು. ಮಣಮಣ ಎಂದು ಬಾಯಿಗೆ ಬಂದ ಶಬ್ಧಗಳಿಂದ ಮಂತ್ರ ಹೇಳುತ್ತಾ

ಕಣ್ಣು ಮುಚ್ಚಿ ಧ್ಯಾನ ಮಾಡುತ್ತಿದ್ದೆವು. ದೇವರ ಸಮರ್ಪಣೆಗಾಗಿ ಗಿಡಗಳಲ್ಲಿ ಸಿಗುವ ಯಾವುದಾದರೂ ಹಣ್ಣುಕಾಯಿ ಇಡುತ್ತಿದ್ದೆವು. ಒಂದು ದೊಡ್ಡ ಎಲೆಯಲ್ಲಿ ಕುಂಟಲ ಹಣ್ಣು, ಕರಂಡೆ ಹಣ್ಣು, ಕೇಪುಳ ಹಣ್ಣು ಇಟ್ಟು ಸಮರ್ಪಣೆ ಆದ ನಂತ್ರ (ಕಡ್ಡಿಗಳ ಸಹಾಯದಿಂದ) ಗಂಟಾಮಣಿ ಆರತಿ ಎತ್ತಿ ಪೂಜೆ. ಕುಂಟಲ ಎಲೆಗಳಿಂದ ಕೆಲವರು ವಾಲಗ ಮಾಡಿ ತುತ್ತೂರಿ ಊದುತ್ತಿದ್ದರು. ಕೆಲವರು ಕಾಲಿ ಸೀಮೆ ಎಣ್ಣೆ ಡಬ್ಬಕ್ಕೆ ಕೋಲಿನಿಂದ ಬಡಿದು ನಗಾರಿ ಡೋಲು ಬಡಿಯುತ್ತಿದ್ದರು. ಪೂಜೆ ಮುಗಿದ ಬಳಿಕ ಸಮರ್ಪಣೆಗೆ ಇಟ್ಟ ಕುಂಟಲ ಹಣ್ಣು ಕರ್ಂಡೆ ಹಣ್ಣು ಕೇಪುಳ ಹಣ್ಣುಗಳನ್ನು ಪ್ರಸಾದವಾಗಿ ಎಲ್ಲರಿಗೂ ಹಂಚಿ ತಿಂದು ಆನಂದ ಪಡುತ್ತಿದ್ದೆವು. ಯಾರಾದರೂ ಹಿರಿಯರಿದ್ದರೆ ಅವರಿಗೂ, ಅಕ್ಕನವರಿಗೆ, ಅಪ್ಪನವರಿಗೆ, ಅಮ್ಮನವರಿಗೆ ಪ್ರಸಾದ ಕೊಡುತ್ತಿದ್ದೆವು. ಅವರು ತಮಾಷೆ ಮಾಡುತ್ತಾ ಸಂತೋಷವಾಗಿ ತಿಂದರೆ ನಮಗೆ ತುಂಬಾ ಸಂತೋಷವಾಗಿ ಕುಣಿದು ಕುಪ್ಪಳಿಸುತ್ತಿದ್ದ ನೆನಪು ಈಗಲೂ ಇದೆ.

ಒಂದು ವರ್ಷ ಮಳೆಗಾಲದಲ್ಲಿ ಒಂದು ಸಣ್ಣ ಗದ್ದೆಯನ್ನು ನೊಗ ನೇಗಿಲಿನಿಂದ ಉತ್ತು ನೇಜಿ ನೆಟ್ಟಿದ್ದೆವು. ಬೆಳ್ಳೆ ಬಾಲಕೃಷ್ಣ ಭಾವನವರು ರೈತನಾಗಿಯೂ ನಾನು, ಹಯವದನ ಕೋಣಗಳಾಗಿ ಮಳೆಗೆ ನೆನೆಯುತ್ತಾ ಉತ್ತದ್ದು – ನೇಜು ನೆಟ್ಟದ್ದು ನೆನಪಿನಲ್ಲಿದೆ.

# ಅಂದಿನ ತುಳುನಾಡಿನ ಹಬ್ಬದ ಆಚರಣೆ



**ಆಟಿ ಹುಣ್ಣಿಮೆ :** ಆಟಿ ಹುಣ್ಣಿಮೆ ಎಂಬುದು ಹೆಣ್ಣು ಮಕ್ಕಳು ಬಹಳ ಸಡಗರದಿಂದ ಸಂತೋಷದಿಂದ ಆಚರಿಸುವ ಹಬ್ಬ. ಹಬ್ಬದ ಒಂದು ವಾರದ ಮೊದಲೇ ಹುರುಳಿ ನೆನೆ ಹಾಕಿ, ಮೃದುವಾದ ಒದ್ದೆ ಮಣ್ಣಿನ ರಾಶಿಯಲ್ಲಿ ನೆನೆ ಹಾಕಿದ ಬೀಜ ಹಾಕಿ ಅದಕ್ಕೆ ಬುಟ್ಟಿ ಮುಚ್ಚಿ ಇಡುತ್ತಿದ್ದರು. ಆಟಿ ತಿಂಗಳ ಹುಣ್ಣಿಮೆ ದಿನ ಬಂತೆಂದರೆ ನಮಗೆಲ್ಲಾ ಗೊತ್ತಾಗುತ್ತಿತ್ತು. ಹೇಗೆಂದರೆ ಶೇಡಿಯನ್ನು ನೀರಿನಲ್ಲಿ ಕಲಸಿ ಕಡ್ಡಿಗೆ ಹತ್ತಿ ಕಟ್ಟಿ ಒದ್ದೆ ಮಾಡಿ ಗೋಡೆಗಳಲ್ಲಿ ಕಂಬಗಳಲ್ಲಿ ಬಾಗಿಲಿನಲ್ಲಿ ಬೊಟ್ಟು ಹಾಕುವ ಗೆರೆ ಹಾಕುವ ಕೆಲಸ ನಮಗೆ ಕೊಡುತ್ತಿದ್ದರು. ಮನೆಯಲ್ಲಿರುವ ಎಲ್ಲಾ ಕಿಟಕಿ ಬಾಗಿಲುಗಳಲ್ಲಿ (ಕಳೆದ ವರ್ಷದ ಶೇಡಿ ಗೆರೆಗಳನ್ನು ತೊಳೆದು) ಚಿತ್ರದಲ್ಲಿ ತೋರಿಸಿದಂತೆ ಸೇಡಿ ಗೆರೆಗಳನ್ನು ಬೊಟ್ಟುಗಳನ್ನು ಹಾಕುವ ಕೆಲಸವಿರುತ್ತಿತ್ತು. ಪಾಲೆಮರದ ಗೆಲ್ಲಿನ ತುದಿ ಭಾಗದಲ್ಲಿ ಐದು ಎಲೆಗಳಿರುತ್ತವೆ. ಅದರ ತೊಟನ್ನು ಹಾಗೇ ಬಿಟ್ಟು ಎಲೆ ಕಿತ್ತಾಗ ಐದು ಬೊಟ್ಟು ಹಾಕಲು ಅನುಕೂಲವಾಗುವುದು ಇಂತಹ ಬೊಟ್ಟುಗಳನ್ನು ನಮ್ಮ ಮನೆಯ ಎಲ್ಲಾ ಬಾಗಿಲುಗಳಿಗೆ ಕಂಬಗಳಿಗೆ ಹಾಕಿದ ನೆನಪು. ಅದು ಒಣಗಿದರೆ ಇಡೀ ವರ್ಷ ಅಳಿಸಿ ಹೋಗುತ್ತಿರಲಿಲ್ಲ. ಹೆಣ್ಣು ಮಕ್ಕಳು ಆದಿನ ತಲೆಗೆ ಸ್ನಾನ ಮಾಡಿ ವಾರದ ಹಿಂದೆ ಮೊಳಕೆಗೆ ಹಾಕಿದ ಹುರುಳಿಗೆ ಕವಚಿ ಹಾಕಿದ ಬುಟ್ಟಿ ತೆಗೆದು ಹುಲುಸಾಗಿ ಬೆಳೆದ ಹುರುಳಿ ಗಿಡ(ಹೂಸಹಿತ)ವನ್ನು ತಂದು ಕುಂಕುಮ ಅರಸಿನದೊಂದಿಗೆ ಬೇಯಿಸಿದ ಹಲಸಿನ ಬೀಜವನ್ನು ಪ್ರತಿ ಹೊಸ್ತಿಲಿನಲ್ಲಿ ಇಟ್ಟು ಹೊಸ್ತಿಲು ಪೂಜೆ ಮಾಡುತ್ತಿದ್ದರು. ಹೊಸ್ತಿಲು ಪೂಜೆ ಆದ ಕೂಡಲೇ ಹಲಸಿನ ಬೇಯಿಸಿದ ಬೀಜಕ್ಕಾಗಿ ನಾವು ಕಾಯುತ್ತಿದ್ದುದು, ಬೀಜಕ್ಕಾಗಿ ಅಕ್ಕನವರೊಂದಿಗೆ ಜಗಳ ಕಾದದ್ದು ಈಗಲೂ ನೆನಪಿನಲ್ಲಿದೆ.

## ವಂಚನೆಯಿಂದ ತಾತ್ಕಾಲಿಕ ಸಂತೋಷ, ನಿರ್ವಂಚನೆಯಿಂದ ಶಾಶ್ವತ ಸಂತೋಷ

**ಕೃಷ್ಣ ಜನ್ಮಾಷ್ಟಮಿ :** ಅಷ್ಟಮಿ ಸಮಯ ನಮಗೆ ಅಪ್ಪ ಪೇಟ್ಲ ತಯಾರಿಸಿಕೊಡುತ್ತಿದ್ದರು. ಅದರಲಿ ಆಟ ಆಡಿ ಸಂತೋಷ ಪಡುತ್ತಿದ್ದೆವು. ಅಷ್ಟಮಿ ಮುಂಚಿನ ದಿನ ಬೆಲ್ಲದ



ಪಾಕದಿಂದ ಮಾಡಿದ ವಿವಿಧ ರೀತಿಯ ಉಂಡೆ ಮಾಡುತ್ತಿದ್ದರು. ಎಳ್ಳುಂಡೆ, ಕಡ್ಲೆ ಹಿಟ್ಟಿನ ಉಂಡೆ, ಗುಂಡಿಟ್ಟು ಉಂಡೆ ಗೇರು ಬೀಜದ ಉಂಡೆ ಮಾಡುತ್ತಿದ್ದರು. ಇಡೀ ದಿನ ಅಮ್ಮ, ಅಜ್ಜಿ, ಅಕ್ಕನವರು ಚಕ್ಕುಲಿ ಮಾಡುತ್ತಿದ್ದುದನ್ನು ಮರೆಯಲಾರೆ. ಒಂದು ದೊಡ್ಡ ಪಾತ್ರೆಯಲ್ಲಿ ಚಕ್ಕುಲಿ ಮಾಡುತ್ತಿದ್ದರು. ರಾತ್ರಿ 12ಗಂಟೆಗೆ ನಮಗೆಲ್ಲಾ ಒಂದು ಸಣ್ಣ ನಿದ್ರೆಯಾದ ಬಳಿಕ ಅಮ್ಮ ಸ್ನಾನ ಮಾಡಿಸಿ ದೇವರ ಎದುರಿಗೆ ಶಾಲಿಗ್ರಾಮಕ್ಕೆ ಬಿಲ್ವಪತ್ರೆಯನ್ನು ಹಾಕಿಸಿ ಶಂಖದಿಂದ ಮೂರು ಮೂರು ಬಾರಿ ನೀರಿನಲ್ಲಿ ತಂದೆಯವರು ಮಂತ್ರ ಹೇಳುತ್ತಾ ಕೃಷ್ಣಂಚ... ಬಲಭದ್ರಂಚ... ಹೇಳುತ್ತಾ ನಿದ್ರೆ ಕಣ್ಣಿನಲ್ಲಿ ಅರ್ಘ್ಯ ಬಿಟ್ಟುದ್ದು ನೆನಪು. ಆ ದಿವಸ ದೇವರ ಸಮರ್ಪಣೆಗೆ ಮೂಡೆ, ಕಡುಬು ಮಾಡದೆ ಇರುತ್ತಿರಲಿಲ್ಲ. ಮೂಡೆ ಎಂದರೆ ಕೇದಿಗೆ ಎಲೆಯ ಬದಿಯ ಮುಳ್ಳು ತೆಗೆದು ಬೆಂಕಿ ಕೆಳಗೆ ಬಾಡಿಸಿ ಅದನ್ನು ಮೂಡೆಯ ಆಕಾರದಲ್ಲಿ ಹಿಡಿಕಡ್ಡಿಯಿಂದ ಕಟ್ಟುವುದು. ಮರುದಿನ ಲಡ್ಡನ್ನು ನಮಗೆ ಹಂಚುತ್ತಿದ್ದರು. ಅದನ್ನು ತುಂಬಾ ದಿನ ಕಾದಿರಿಸಿ ತಿನ್ನುತ್ತಿದ್ದೆವು. ತಂದೆಯವರು ಎಲ್ಲಾ ಉಂಡೆಗಳನ್ನು ತಂದು ಮನೆ ಮಂದಿಗೆ ಸರಿಯಾಗಿ ಲೆಕ್ಕಮಾಡಿ ಸುತ್ತ ಪ್ರತಿಯೊಬ್ಬರಿಗೂ ಪ್ರತಿ ಉಂಡೆಗಳು ಬರುವಂತೆ ಬೇರೆ ಬೇರೆಯಾಗಿ ಇಟ್ಟು ನಾವು ಅದನ್ನು ನಮ್ಮ ನಮ್ಮ ಡಬ್ಬಿಗಳಲ್ಲಿ 3–4 ತಿಂಗಳು ಜಾಗ್ರತೆಯಾಗಿಟ್ಟು ತಿನ್ನುತ್ತಿದ್ದುದನ್ನು ಈಗಲೂ ನನ್ನ ತಂಗಿ **ಆಶಾ** ನೆನಪಿಸುತ್ತಾಳೆ.

**ವಿಟ್ಲ ಪಿಂಡಿ :** ಮರುದಿನ ಊರಿನ ಕೆಲವು ಜನ ಆಸಕ್ತರು ಬೇರೆ ಬೇರೆ ರೀತಿಯ ವೇಷ ಹಾಕಿಕೊಂಡು ಮನೆ ಮನೆಗೆ ಬಂದು ಕೊಟ್ಟ ತಿಂಡಿ ದುಡ್ಡು ಪಡಕೊಂಡು ಹೋಗುತ್ತಿದ್ದರು. ಕೃಷ್ಣ, ಬಲರಾಮ, ಬ್ರಾಹ್ಮಣ ವೇಷ ಅಲ್ಲದೆ ಕುಲ ಕಸುಬುಗಳ ವೇಷ ಹಾಕಿಕೊಂಡು ಬರುತ್ತಿದ್ದರು. ಆ ದಿನ ಶಾಲೆಗೆ ರಜೆ ಇರುತ್ತಿತ್ತು. ನಮಗೆಲ್ಲಾ ವೇಷದವರನ್ನು ನೋಡುವುದು ಅವರ ಜೊತೆಗೆ ಮನೆ ಮನೆಗೆ ಹೋಗುವುದೇ ಮೋಜು. ಒಂದು ರೀತಿಯ ಸಂತೋಷ. ನಾನೂ ಕೆಲವು ವರ್ಷ ವೇಷ ಹಾಕಿ ನಮ್ಮ ಒಕ್ಕಲಿನವರ ಮನೆಗೆ ಹೋಗುತ್ತಿದ್ದೆ. ಒಕ್ಕಲಿನವರು ದನಿಗಳು ವೇಷ ಹಾಕಿದ್ದನ್ನು ನೋಡಿ ಸಂತೋಷ ಪಡುತ್ತಿದ್ದರು, ಬೊಂಡ ಕೊಡುತ್ತಿದ್ದರು, ಬಾಳೆಹಣ್ಣು ಕೊಡುತ್ತಿದ್ದರು.



**ದೀಪಾವಳಿ :** ಒಂದು ವಾರದ ಮೊದಲೇ ಅಪ್ಪ ಬಿದಿರಿನ ಸಲಾಖೆಗಳನ್ನು ಸ್ವಚ್ಛತೆಗೊಳಿಸಿ ಕಡ್ಡಿಗಳನ್ನು ರಚಿಸಿ ಕಟ್ಟಿ ಬಣ್ಣದ ಕಾಗದಗಳನ್ನು ಮೈದಾಹಿಟ್ಟಿನ ಅಂಟಿನಿಂದ ಅಂಟಿಸಿ **ಗೂಡು ದೀಪ** ರಚಿಸುತ್ತಿದ್ದರು. ಇದರ ಮಧ್ಯದಲ್ಲಿ ಹಣತೆ ದೀಪ ಇರಿಸಿ ಮನೆಯ ಮುಂದುಗಡೆ ಒಂದು ಎತ್ತರದ ಕಂಬದ ತುದಿಯಲ್ಲಿ ಜೋತಾಡಿಸುತ್ತಿದ್ದರು. ಮನೆಯ ಮುಂದುಗಡೆ ಸೆಗಣಿ ಸಾರಿಸಿ ರಂಗೋಲಿ ಹಾಕುತ್ತಿದ್ದರು. ದೀಪಾವಳಿಯಲ್ಲಿ ನಮಗೆಲ್ಲಾ ತಿಂಡಿಗಳಿಗಿಂತಲೂ ಪಟಾಕಿ, ದುರ್ಸು ಬಿಡುವ ಆಸೆ. ಹೊತ್ತು

ಮುಳುಗುವಾಗ ನಮ್ಮ ಮನೆಯ ಮುಂದುಗಡೆ ದೊಡ್ಡ ಗದ್ದೆಯಲ್ಲಿ **ರಥದೀಪ** ಇಡುತ್ತಿದ್ದರು. ಬಳಿಕ ನಮಗೆ ಬೇಸಾಯಕ್ಕೆ ಇದ್ದ ಎಲ್ಲಾ ಗದ್ದೆಗಳ ಬದಿಗೆ **"ಸೂಟೆ"** ಬೆಳಕಿನಲ್ಲಿ (ತೆಂಗಿನ ಸೋಗೆ, ಒಣ ಎಲೆಯ ಕಟ್ಟು) ಹೋಗಿ ಅಲ್ಲಿ ಕಡ್ಡಿ ದೊಂದಿ ಊರಿ ಅವಲಕ್ಕಿ, ತೆಂಗಿನ ಕ್ಯಾ ಚೂರು, ಬೆಲ್ಲ ಹಾಕಿ, ವೀಳ್ಯದೆಲೆ ಕ್ಯಾ ಹಾಕಿ ಅಪ್ಪ ಏನೋ ಮಂತ್ರ ಹೇಳುತ್ತಾ ಕೇಪುಳ ಹೂ ಹಾಕುತ್ತಿದ್ದುದು ನೆನಪು. ಬಳಿಕ ನಾನು ಗಟ್ಟಿಯಾಗಿ **"ಓ ಬಲೀಂದ್ರ....... ಓ ಬಲೀಂದ್ರ ಬೋಂತೇಲ್ ಮೂಜಿ ದಿನತ ಬಲಿ ಕೊಣದ್ ಬಲೀಂದ್ರ ಕೂ... ಕೂ... ಕೂ...** ಎಂದು ಗಟ್ಟಿಯಾಗಿ ಹೇಳುತ್ತಿದ್ದೆ. ಹೇಳಿದ ಕೂಡಲೇ ಅಲ್ಲಿದ್ದ ನಾವು 5–6 ಜನ ಸೇರಿ ಒಟ್ಟಾಗಿ ಊರಿಗೆಲ್ಲಾ ಕೇಳುವ ಹಾಗೆ ಗಟ್ಟಿಯಗಿ **'ಕೂ'** ಎನ್ನುತ್ತಿದ್ದೆವು. ಹಾಗೆ ಮೂರು ಬಾರಿ ಹೇಳುತ್ತಿದ್ದೆವು. ಎಲ್ಲಾ ಗದ್ದೆಯಲ್ಲಿ ಬೆಳಕು ದೀಪ ಇಡುತ್ತಿದ್ದರು. ಬಳಿಕ ದುರ್ಸು ಪಟಾಕಿ ಬಿಡುವ ಸಂಭ್ರಮ ನಕ್ಷತ್ರ, ನೆಲಚಕ್ರ, ನೆಲಬಾಂಬು, ಕೇಪು, ಹರಳು, ದುರ್ಸು, ಒಲಿ ಪಟಾಕಿ ಬಿಡುವ ಸಂತೋಷ.

## ಅಂದು ನಾವು ತಿನ್ನುತ್ತಿದ್ದ ತುಳುನಾಡಿನ ತಿಂಡಿ ತಿನಸುಗಳು


ಬಲಾಯಿ-ಬಲಾಯಿ


ಮಡಲು

**ಹಲಸಿನ ಹಪ್ಪಳ:** ಹಲಸಿನ ಕ್ಯಾ ಬೆಳೆದಾಗ ಅದರ ಸೊಳೆ ತೆಗೆದು ಬೇಯಿಸಿ ಕಡೆಯುವ ಕಲ್ಲಿನಲ್ಲಿ ಹಾಕಿ ಉಪ್ಪು ಮೆಣಸಿನ ಪುಡಿ ಹಾಕಿ **(ಬಲಾಯಿ)** ಗುದ್ದುವ ಸಾಧನದಲ್ಲಿ ಚೆನ್ನಾಗಿ ಗುದ್ದಿ ಉಂಡೆ ಮಾಡಬೇಕು. ಮರದ ಕುಳಿತುಕೊಳ್ಳುವ ಮಣೆಯ ಮೇಲೆ ಬಾಳೆಎಲೆಗೆ ಎಣ್ಣೆ ಸವರಿ ಉಂಡೆ ಇಟ್ಟು ಇನ್ನೊಂದು ಬಾಳೆ ಎಲೆ ತುಂಡಿಗೆ ಎಣ್ಣೆ ಸವರಿ ಅದರ ಮೇಲೆ ಇಟ್ಟು ಇನ್ನೊಂದು ಮಣೆಯಲ್ಲಿ ಬಲಹಾಕಿ ಒತ್ತಿದಾಗ ಹಪ್ಪಳ ರೆಡಿಯಾಗುತ್ತಿತ್ತು. ಅದನ್ನು ತೆಂಗಿನ ಗರಿಯಿಂದ ತಯಾರಿಸಿದ **'ಮಡಲು'** ಇದರಲ್ಲಿ ಒಣಗಲು ಹಾಕುತ್ತಿದ್ದರು. ಒಣಗಿದ ಬಳಿಕ ಅದನ್ನು ಕಟ್ಟಿಗೆ ಗೆಂಡದಲ್ಲಿ ಕಾಯಿಸಿ ಶಾಲೆಯಿಂದ ಬಂದ ಕೂಡಲೇ ಒಂದು ಅಥವಾ 2 ಹಪ್ಪಳ ಕೊಡುತ್ತಿದ್ದರು.

**ಗೆಣಸಿನ ಹಪ್ಪಳ:** ಗೆಣಸನ್ನು ತೊಳೆದು ನೀರಿನಲ್ಲಿ ಬೇಯಿಸಿ, ಸಿಪ್ಪೆ ತೆಗೆದು ಕಡೆಯುವ ಕಲ್ಲಿನಲ್ಲಿ ಹಾಕಿ **ಬಲಾಯಿ**ಯಲ್ಲಿ ಗುದ್ದಿ ಸಿಹಿ ಬೇಕಾದರೆ ಬೆಲ್ಲ, ಕಾರ ಬೇಕಾದರೆ ಮೆಣಸಿನ ಪುಡಿ ಹಾಕಿ ಚೆನ್ನಾಗಿ ಗುದ್ದಿದ್ದನ್ನು ಉಂಡೆ ರಚಿಸಿ ಹಲಸಿನ ಹಪ್ಪಳದಂತೆ ರಚಿಸಿ ಒಣಗಿಸಿ ಡಬ್ಬದಲ್ಲಿ ಇಡುತ್ತಿದ್ದರು. ಶಾಲೆಯಿಂದ ಬಂದಾಗ ಸ್ವಲ್ಪ ತೆಂಗಿನ ಚೂರು ಮತ್ತು ಒಂದು ಹಪ್ಪಳ ತಿನ್ನಲು ನೀಡುತ್ತಿದ್ದರು. ಹಸಿ ಹಪ್ಪಳ ಅತೀ ರುಚಿ ಇರುತ್ತಿತ್ತು. ಮರ ಗೆಣಸಿನ ಹಪ್ಪಳ ಖಾರವಾಗಿದ್ದು ಊಟಕ್ಕಾಗಿ ಮಾತ್ರ ಉಪಯೋಗಿಸುತ್ತಿದ್ದರು.

**ಸಾಂತಾಣಿ:** ಹಲಸಿನ ಬೀಜಕ್ಕೆ ರುಚಿಗೆ ತಕ್ಕಷ್ಟು ಉಪ್ಪು ಹಾಕಿ ಬೇಯಿಸಿ ಒಣಗಿಸಲು ಹಾಕುತ್ತಾರೆ. ಒಣಗಿದ ಬಳಿಕ ಮಳೆಗಾಲದ ತಿಂಡಿಗಾಗಿ ಡಬ್ಬಗಳಲ್ಲಿ ಹಾಕಿ ಇಡುತ್ತಿದ್ದರು. ಇದನ್ನು ತಿನ್ನಲು ನೀಡುತ್ತಿದ್ದರು. ಕೆಲವೊಮ್ಮೆ ನಾವು ಕದ್ದು ತಿನ್ನುತ್ತಿದ್ದೆವು. ಅಷ್ಟು ರುಚಿಯಾದ ತಿಂಡಿ ಬಾಯಿಯಲ್ಲಿ ಹಾಕಿ ನಿಧಾನವಾಗಿ ಜಗಿಯುತ್ತಾ ರುಚಿಯನ್ನು ಮೆಲ್ಲುತ್ತಾ, ಓದುವುದು, ಬರೆಯುವುದು ನಮ್ಮ ಅಭ್ಯಾಸವಾಗಿತ್ತು.

**ಹುಣಸೇ ಬೀಜ:** ಹುಣಸೆ ಹಣ್ಣನ್ನು ಮರದಿಂದ ಕಿತ್ತು ಸಿಪ್ಪೆ ತೆಗೆದು ಹುಣಸೆ ಹುಳಿಯ ಒಳಭಾಗದಲ್ಲಿ ಇರುವ ಬೀಜ. ಅಂದು ಹುಣಸೆ ಹುಳಿ ಅಂಗಡಿಯಲ್ಲಿ ಮಾರಾಟಕ್ಕೆ ಸಿಗುತ್ತಿರಲಿಲ್ಲ. ಪ್ರತಿಯೊಬ್ಬರ ಮನೆ ಬಳಿಯಲ್ಲಿದ್ದ ಹುಣಸೇ ಮರದಿಂದ ಹುಣಸೆ ಹುಳಿ ತಯಾರಿಸಿಟ್ಟುಕೊಳ್ಳುತ್ತಿದ್ದರು. ತಂದೆಯವರು ತನ್ನ 70ನೇ ವರ್ಷದಲ್ಲಿ ಅತೀ ಎತ್ತರವಾಗಿದ್ದ ಮನೆ ಅಂಗಳದ ಹುಣಸೇ ಮರದಿಂದ ಹುಣಸೇ ಹಣ್ಣನ್ನು ಕೊಯ್ಯುತ್ತಿದ್ದುದು ಮರೆಯದ ಘಟನೆ. ಇದರ ಬೀಜವನ್ನು ನಾವು ಆಟ ಆಡಲು ಉಪಯೋಗಿಸುತ್ತಿದ್ದೆವು. ಅಲ್ಲದೆ ಇದನ್ನು ಬಾಣಲೆಯಲ್ಲಿ ಹುರಿದು ಡಬ್ಬದಲ್ಲಿ ಹಾಕಿಡುತ್ತಿದ್ದರು. ನಮಗೆ ಮನಸ್ಸಾದಾಗ ಅದನ್ನು ತೆಗೆದು ತಿನ್ನುತ್ತಿದ್ದೆವು. ಒಂದು ಹುಣಸೇ ಬೀಜವನ್ನು ನಾವು ಅರ್ಧ ಗಂಟೆಯಲ್ಲಿ ಚೀಪಿ ತಿನ್ನುತ್ತಿದ್ದೆವು. ಈಗಿನ ಮಕ್ಕಳಿಗೆ ಇದರ ರುಚಿಯು ಅನುಭವಕ್ಕೆ ಇಲ್ಲದಾಗಿದೆ.

**ಗೆಣಸು:** ಗೆಣಸನ್ನು ಕಟ್ಟಿಗೆಯ ಬೆಂಕಿಯ ಒಲೆಯಲ್ಲಿ ಬಿಸಿ ಬೂದಿಯ ಒಳಗೆ ಹಾಕಿ ಇಡುತ್ತಿದ್ದೆವು. ಅದು ಬಿಸಿ ಬೂದಿಯಲ್ಲಿ ಅರ್ಧ ಗಂಟೆ ಇದ್ದ ಬಳಿಕ ಅದನ್ನು ತೆಗೆದು ಸಿಪ್ಪೆ ತೆಗೆದು ತಿಂದರೆ ಅದರ ರುಚಿ ಹೇಳತೀರದು. ಅಲ್ಲದೆ ಗೆಣಸನ್ನು ಬೇಯಿಸಿ (ನೀರಿನಲ್ಲಿ) ತುಂಡು ತುಂಡು ಮಾಡಿ ಬೇಸಿಗೆ ಕಾಲದಲ್ಲಿ ಬಿಸಿಲಿನಲ್ಲಿ ಒಣಗಿಸಿ ಇಡುತ್ತಾರೆ. ಅದು ಒಣಗಿದ ಬಳಿಕ ಮಳೆಗಾಲದಲ್ಲಿ ಚಳಿಗಾಲದಲ್ಲಿ ತಿನ್ನಲು ಸಿಕ್ಕಿದರೆ ಚಳಿ ಮಾಯ.

**ಸಂದೋಳಿಗೆ ಎಣ್ಣೆ:** ಸಂದೋಳಿಗೆ ಮರದಲ್ಲಿ ಚಿಕ್ಕುವಿನ ಆಕಾರದ ಕಾಯಿ ಆಗುತ್ತದೆ. ಬಲಿತ ಸಂದೋಳಿಗೆ ಕಾಯಿ ಮರದ ಕೆಳಗೆ ಬೀಳುತ್ತದೆ. ಇದನ್ನು ಗೋಣಿಯಲ್ಲಿ ತಂದು ಸಿಪ್ಪೆ ತೆಗೆದು ಒಳಗಿನ ಭಾಗ ಚೆನ್ನಾಗಿ ಕಡೆದು ಬೇಯಿಸಿದಾಗ ಬೇಯಿಸುವ ಪಾತ್ರೆಯ ಮೇಲ್ಭಾಗಲದಲ್ಲಿ ಒಂದು ಪದರು ಎಣ್ಣೆ ಬರುತ್ತದೆ. ಇದನ್ನು ಶೇಖರಿಸಿ ಒಟ್ಟು ಮಾಡಿದಾಗ ಕೆಲವು ಸಮಯ ಇಟ್ಟಾಗ ಗಟ್ಟಿಯಾದ ಬಿಳಿಯಾದ ಎಣ್ಣೆ ಸಿಗುತ್ತದೆ. ಇದನ್ನೇ ಉರುಟಾಗಿ ಉಂಡೆ ಮಾಡಿ ಮಡಕೆಯಲ್ಲಿ ಕಟ್ಟಿ ಅಜ್ಜಿ ಅಟ್ಟದಲ್ಲಿ ಇರಿಸುತ್ತಿದ್ದರು. ಇದು ತಿನ್ನಲು ಅಲ್ಲ. ಆದರೆ ನಾನು ಇದನ್ನು ಬೆಣ್ಣೆಯಂತೆ ಅಟ್ಟಕ್ಕೆ ಹತ್ತಿ ಸ್ವಲ್ಪ ಸ್ವಲ್ಪ ತಿನ್ನುತ್ತಿದ್ದೆ. ಸಂದೋಳಿಗೆ ಕಾಯಿಯ ಎಣ್ಣೆಯಲ್ಲಿ ಹಪ್ಪಳ, ಚಕ್ಕುಲಿ ತಿಂಡಿ ಕಾಯಿಸಿದರೆ ತುಪ್ಪಕ್ಕಿಂತ ರುಚಿಯಾಗುತ್ತಿತ್ತು.

**ಮಾವಿನ ಮಾಂಬಳ:** ಮಾವಿನ ಹಣ್ಣು ಆಗುವ ಸಮಯಕ್ಕೆ ಮಾವಿನ ಮರದ ಬುಡದಲ್ಲಿ ಗಾಳಿಗೆ ಹಣ್ಣು ಬೀಳುತ್ತಿರುತ್ತದೆ. ಈ ಮಾವಿನ ಹಣ್ಣು ಒಂದು–ಎರಡು ಆದರೆ ನಾವೇ ಬಾಯಿಯಲ್ಲಿ ಕಚ್ಚಿ ತಿಂದು ಅದರ ನೀರನ್ನು ಚೀಪುತಿದ್ದೆವು. ಕೆಲವೊಮ್ಮೆ ರಾತ್ರಿ ಹೊತ್ತು ತುಂಬಾ ಬಿದ್ದಿರುತ್ತದೆ. (ನಮ್ಮ ಅಜ್ಜಿ ಬೆಳಿಗ್ಗೆ 3 ಗಂಟೆಗೆ ನನ್ನನ್ನು ಎಬ್ಬಿಸಿ ಚಿಮಿಣಿ ದೀಪದ ಸಹಾಯದಿಂದ ಹಣ್ಣನ್ನು ಹೆಕ್ಕುತಿದ್ದದ್ದು ನೆನಪಾಗುತ್ತದೆ.) ತುಂಬಾ ಹಣ್ಣು ಇದ್ದಾಗ ಅದನ್ನು ತೊಳೆದು ಒಂದು ಪಾತ್ರೆಯಲ್ಲಿ ಅಮುಕಿ ಗೊರಟು, ಸಿಪ್ಪೆ ತೆಗೆದು ರಸ ಮಾತ್ರ ಹಿಂಡಿ ಹಾಕಿ ಚಾಪೆಯಲ್ಲಿ ಹರಡಿಸಿ ಬಿಸಿಲಿಗೆ ಒಣಗಿಸುತ್ತಿದ್ದರು. ಇದು ಒಂದು ದಿನದ ಕೆಲಸ ಹೀಗೆ ಪ್ರತೀ ದಿನ ಸಿಕ್ಕಿದ ಹಣ್ಣಿನ ರಸ ಅದಕ್ಕೆ ಸವರಿ ಸವರಿ 10–20 ದಿನ ಹಣ್ಣಿನ ರಸದ ಹಾಳೆ ಆದ ನಂತ್ರ ಅದನ್ನು ತುಂಡು ಮಾಡಿ ಚಾಪೆ ಮಡಚಿದ ಹಾಗೆ ಮಡಚಿ ಮಡಕೆಯ ಒಳಗೆ ಇಡುತ್ತಿದ್ದರು. ಮಳೆಗಾಲಕ್ಕೆ ನಮಗೆಲ್ಲಾ ಅತೀ ಸ್ವಾದಿಷ್ಟವಾದ ತಿಂಡಿ

ಎಂದರೆ ಇದರ ಒಂದು ತುಂಡು. ಇದನ್ನು ಮಿಠಾಯಿಯಂತೆ ಬಾಯಿಯಲ್ಲಿ ಇಟ್ಟು ಚಪ್ಪರಿಸುತ್ತಿದ್ದೆವು.

**ಹಲಸಿನ ಮಾಂಬಳ**: ಹಣ್ಣು ಹಲಸಿನ ಮಾಂಬಳವೂ ತಿನ್ನಲು ಬಹಳ ರುಚಿಯಾಗಿರುತ್ತದೆ. ಮಾವಿನ ಮಾಂಬಳದಂತೆ ಮಾಡುತ್ತಾರೆ. (ಮಾಂಬಳದಿಂದ ಒಗ್ಗರಣೆ ಹಾಕಿ ಗೊಜ್ಜು ಮಾಡಿದರೆ ಮೆಣಸು ಕ್ಯಾ ಮಾಡಿದರೆ ದೋಸೆ ತಿನ್ನಲು ಭಾರೀ ರುಚಿಯಾಗಿರುತ್ತದೆ ಗೊತ್ತಾ?)

**ಉದ್ದಿನ ಹಪ್ಪಳ**: ಉದ್ದಿನ ಹಿಟ್ಟಿಗೆ ರುಚಿಗೆ ಬೇಕಾದಷ್ಟು ಉಪ್ಪು ಹಾಕಿ ಮೆಣಸಿನ ಪುಡಿ ಹಾಕಿ ನೀರಿನಲ್ಲಿ ಮುದ್ದೆ ಮಾಡಿ ಚೆನ್ನಾಗಿ ಕಡೆಯುವ ಕಲ್ಲಿನಲ್ಲಿ ಹಾಕಿ ಗುದ್ದಿ ಸ್ವಲ್ಪ ಎಣ್ಣೆ, ಇಂಗು ಹಾಕಿ ಒಂದು ಹದಕ್ಕೆ ಬಂದಾಗ ಅದನ್ನು ದುಂಡಗೆ ಹಗ್ಗದಂತೆ ಮಾಡಿ ಸಣ್ಣ.. ಸಣ್ಣ.. ತುಂಡು ಮಾಡಿ (ದಾರದಿಂದ) ಬಳಿಕ ಹಪ್ಪಳ ಮಣೆ ಲಟ್ಟಣಿಗೆ ಸಹಾಯದಿಂದ ಹಿಟ್ಟು ಹಾಕಿ ಲಟ್ಟಿಸುತ್ತಿದ್ದರು. ಹಪ್ಪಳದ ಅಳತೆಗೆ ಬಂದಾಗ ಅದನ್ನು ನೆರಳಿನ ನೆಲದಲ್ಲಿ ಒಣಗಿಸುತ್ತಿದ್ದರು. ಇದನ್ನು ಮಳೆಗಾಲದಲ್ಲಿ ಮತ್ತು ಸೆಕೆಕಾಲದಲ್ಲಿ ಊಟಕ್ಕಾಗಿ ಬಳಸುತ್ತಿದ್ದರು. ಏನೂ ಪದಾರ್ಥ ಇಲ್ಲದಿದ್ದರೆ ಹಪ್ಪಳವನ್ನು ಒಲೆಯ ಬೆಂಕಿ ಗೆಂಡದಲ್ಲಿ ಕಾಯಿಸಿ ಊಟಕ್ಕೆ ಹಾಕುತ್ತಿದ್ದರು. ನೆಂಟರು ಬಂದಾಗ ಇದೇ ಹಪ್ಪಳವನ್ನು ಎಣ್ಣೆಯಲ್ಲಿ ಕರಿದು ಬಡಿಸುತ್ತಿದ್ದರು. ಅರ್ಧಾಂಶ ಊಟ ಒಂದು ಹಪ್ಪಳದಿಂದ ಮುಗಿಯುತಿತ್ತು. **ಉದ್ದಿನ ಹಪ್ಪಳ** (ಸಪ್ಪೆ) ಉದ್ದಿನ ಹಿಟ್ಟಿಗೆ ಮೆಣಸಿನ ಪುಡಿ ಹಾಕದೇ ಮಾಡಿದರೆ ಸಪ್ಪೆ ಹಪ್ಪಳ ಆಗುತ್ತದೆ. ಸಣ್ಣ ಮಕ್ಕಳಿಗಾಗಿ ಈ ಹಪ್ಪಳ.

**ಸೆಂಡಿಗೆ**: ಉದ್ದಿನ ಸೆಂಡಿಗೆ, ರಾಗಿ ಸೆಂಡಿಗೆ, ಅವಲಕ್ಕಿ ಸೆಂಡಿಗೆ, ಸಾಬಕ್ಕಿ ಸೆಂಡಿಗೆ, ಸೇಮಿಗೆ ಸೆಂಡಿಗೆ ಸಾರಿನ ಊಟಕ್ಕೆ ತುಂಬಾ ರುಚಿ ಕೊಡುತ್ತದೆ. **ಹುರಿದ ಕಾಳುಗಳ ತಿಂಡಿ** ಕೆಡ್ಡಸ ಬಂತೆಂದರೆ ನಮಗೆ ಗೊತ್ತಿತ್ತು ಹುರಿದ ಕಡಲೆ ಕಾಳು, ಹುರುಳಿ ಕಾಳು, ಉದ್ದಿನ ಕಾಳು, ಹೆಸರು ಕಾಳು, ಹುರಿದ ಅಕ್ಕಿ ರುಚಿಗೆ ತೆಂಗಿನಕ್ಯಾ (ಒಣಗಿದ್ದನ್ನು ಹುರಿದು) ಹಾಕಿ ಕೊಡುತ್ತಿದ್ದರು. ಬರೆಯುವಾಗ ಓದುವಾಗ ತಿಂದರೆ ಸಮಯ ಹೋದದ್ದೇ ಗೊತ್ತಾಗುತ್ತಿರಲಿಲ್ಲ.

**ದಕ್ಷಿಣ ಕನ್ನಡ ಜಿಲ್ಲೆಯ ರಾಜಕಲೆ ಯಕ್ಷಗಾನ: ದಕ್ಷಿಣ ಕನ್ನಡ ಜಿಲ್ಲೆಯ ಅತ್ಯಂತ ಶ್ರೇಷ್ಠ ಜಾನಪದ ಕಲೆ ಯಕ್ಷಗಾನ**. ಇದರಲ್ಲಿ ಹಾಡುಗಾರಿಕೆ (ಭಾಗವತರು) **ಮದ್ದಳೆ, ತಾಳ, ಹಾರ್ಮೋನಿಯಂ, ಜಾಗಟೆ, ಚೆಂಡೆ** ಮುಂತಾದ ಹಲವು ಹಿಮ್ಮೇಳಗಳಿದ್ದರೆ **ಗೆಜ್ಜೆ ಕಟ್ಟಿ ಹಾವ ಭಾವದೊಂದಿಗೆ ತಾಳಕ್ಕೆ ಸರಿಯಾಗಿ ಕುಣಿಯುವುದು** ಎಂತವರ ಮನಸ್ಸನ್ನೂ ಆಕರ್ಷಿಸದೇ ಇರದು. **ವೇಷ ಭೂಷಣಗಳಂತೂ ಅತ್ಯಾಕರ್ಷಕವಾಗಿರುತ್ತದೆ.** ಇದು ಎಲ್ಲ ಇದ್ದು **ಅರ್ಥಪೂರ್ಣವಾದ ವಾಕ್ ಚಾತುರ್ಯದ ವಿದ್ವತ್ತಿನಿಂದ ತುಂಬಿದ ಸಂಭಾಷಣೆಗಳು, ಮಾತುಗಳು, ಹಾಸ್ಯಗಳು ರಾತ್ರಿ ಇಡೀ ಕುಳಿತುಕೊಂಡು ಕೇಳಿದರೂ ನೋಡಿದರೂ ಬೇಸರ ತರುತ್ತಿರಲಿಲ್ಲ**. ಈ ರೀತಿಯ ಕಲೆ ಪ್ರಪಂಚದ ಯಾವ ಮೂಲೆಯಲ್ಲಿ ಹುಡುಕಿದರೂ ಸಿಗಲಾರದು. ಇದನ್ನು ನೋಡಲು ನಮಗೆ ಸಣ್ಣವರಿದ್ದಾಗಲೂ ಅತೀ ಆಸಕ್ತಿ. ಊರಿನ

ಎಲ್ಲರೂ ನಮ್ಮ ಮನೆಯಲ್ಲಿ ಸೇರಿ ಚಹಾ ಕುಡಿದು ಚಾಪೆ ಲಾಟಾನಿನ ಸೂಟೆಯ ಬೆಳಕಿನಲ್ಲಿ ಹೋಗುತ್ತಿದ್ದೆವು. ದಾರಿಯ ಬೆಳಕಿಗಾಗಿ ಸೂಟೆ ಅತೀ ಉತ್ತಮವಾಗಿತ್ತು.

**ಯಕ್ಷಗಾನ ರಂಗಸ್ಥಳ**ದ(ಚಿತ್ರದಲ್ಲಿರುವಂತೆ) ಎದುರಿಗೆ ನಾಲ್ಕು **ದೊಂದಿ** ಉರಿಯುತ್ತಿತ್ತು. ಈ ದೊಂದಿ ಬೆಳಕಿನಲ್ಲಿ ಆಟ. ರಾತ್ರಿ 9.00 ಗಂಟೆಯಿಂದ ಬೆಳಗ್ಗೆ 6.00ರ ತನಕ ನಡೆಯುತ್ತಿತ್ತು. ಕಾಲ ಕಳೆದಂತೆ ಬೆಳಕಿನ ಸುಧಾರಣೆ ಆಗುತ್ತಾ ಗ್ಯಾಸ್‌ಲೈಟ್ ಬಂತು. ರಂಗಸ್ಥಳದ ಸುತ್ತ ಗ್ಯಾಸ್‌ಲೈಟಿನ ಬೆಳಕು ಉರಿಯುತ್ತಿತ್ತು. ಅದು ಸರಿಯಿಲ್ಲದಿದ್ದಲ್ಲಿ ಗ್ಯಾಸ್ ಹಾಕಬೇಕಿತ್ತು. ಕ್ರಮೇಣ ಯಕ್ಷಗಾನ ಮಂಡಳಿಯವರು ಜನರೇಟರ್ ಬಳಸಿ ಟ್ಯೂಬ್ ಲೈಟಿನ ಬೆಳಕಿನಲ್ಲಿ ಆಟ ಆಡುತ್ತಿದ್ದರು. ಈಗಲೂ ಜನರೇಟರ್ ಬೆಳಕನ್ನೇ ಯಕ್ಷಗಾನಕ್ಕೆ ಬಳಸುತ್ತಿದ್ದಾರೆ.


ರಂಗಸ್ಥಳ – ರಥ – ಪಡಿಮಂಚ

<u>**ಮನೆಯಲ್ಲಿ ಬೆಳಕು:**</u> ಕತ್ತಲೆಯಾದರೆ ದೇವರಿಗೆ ಎಳ್ಳೆಣ್ಣೆಯಲ್ಲಿ ಹತ್ತಿ ಬತ್ತಿಯ ದೀಪ ಮನೆಯ ಎಲ್ಲಾ ಭಾಗಕ್ಕೂ ಕಾಲು ದೀಪದ ಬೆಳಕೇ ಇತ್ತು. ಕ್ರಮೇಣ ಸೀಮೆಎಣ್ಣೆ ಬಳಕೆ ಪ್ರಾರಂಭವಾದಾಗ ದೇವರಿಗೆ ಎಳ್ಳೆಣ್ಣೆ ದೀಪ ಮನೆಯಲ್ಲೆಲ್ಲಾ ಸೀಮೆಎಣ್ಣೆ ದೀಪ. ಅದು ಬೇರೆ ಬೇರೆ ರೂಪದಲ್ಲಿ ಇತ್ತು. ನಾವೆಲ್ಲಾ ಸೀಮೆ ಎಣ್ಣೆ ದೀಪದ ಬೆಳಕಿನಲ್ಲೇ ಅಭ್ಯಾಸ ಮಾಡಿದ್ದೆವು. ಕೆಲವು ಶ್ರೀಮಂತರ ಮನೆಯಲ್ಲಿ ಗ್ಯಾಸ್‌ಲೈಟ್ ಉರಿಯಲಾರಂಭಿಸಿತು.

<u>**ದಾರಿ ದೀಪ:**</u> ತಂತಿ ಕೆಳಭಾಗದಲ್ಲಿ ಹಣತೆಯಂತಹ ಲೋಹದ ದೀಪದಲ್ಲಿ ಹತ್ತಿ ಬತ್ತಿಯ ಎಣ್ಣೆಯ ದೀಪದಿಂದ ನಡಕೊಂಡು ಹೋಗುತ್ತಿದ್ದ ಕಾಲ ಒಂದಿತ್ತು. ಎಲ್ಲಾ ವರ್ಗದ ಜನರೂ ಬಳಸುತ್ತಿದ್ದುದು ತೆಂಗಿನ ಗರಿಯಿಂದ ತಯಾರಿಸಿದ ಸೂಟೆಯ ಬೆಳಕು. ಇದೇ ಬೆಳಕಿನಲ್ಲಿ ರಾತ್ರಿ 12.00 ಗಂಟೆಗೂ 5–6 ಮೈಲಿ ಹೋಗಿ ಬರುವವರಿದ್ದರು. ಕ್ರಮೇಣ ಲಾಟಾನು ಬಂತು, ಗ್ಯಾಸ್‌ಲೈಟ್ ಬಂತು, ಈಗ ಟಾರ್ಚ್‌ಲೈಟ್ ಬಂದಿದೆ.



<u>**ಪಣೆ:**</u> (ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತಿ ಹಾಕುವ ಸಾಧನ) ಗದ್ದೆಗಳಿಗೆ ನೀರನ್ನು ಹರಿಸಲು ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತಲು ಬಳಸುವ ಸಾಧನ. ಬಾವಿಯ ಹತ್ತಿರ ದೊಡ್ಡ ಕಬಕೆ ಇರುವ ಮರ ಉಪಯೋಗಿಸಿ ಕಬಕೆ ಮಧ್ಯದಲ್ಲಿ ಪಣೆ ಮರ ಜೋಡಿಸಿ ಒಂದು ಬದಿಯಿಂದ ಬಾವಿಯಿಂದ ನೀರನ್ನೆತ್ತಲು ಒಬ್ಬ ವ್ಯಕ್ತಿ ನಿಂತುಕೊಂಡರೆ ಇನ್ನೊಂದು ತುದಿಯಲ್ಲಿ 2 ಜನ ಪಣೆ ಮರದ ತುದಿಗೆ ಕಟ್ಟಿದ ಹಗ್ಗ ಹಿಡಿದು ಹೊಂಡಕ್ಕೆ ಹಾರಲು ಸಿದ್ಧರಾಗಿರುತ್ತಾರೆ. ನೀರನ್ನು ಮರಾಯಿಯಲ್ಲಿ ತುಂಬಿದ ಕೂಡಲೇ ಎರಡು ಜನ ಹೊಂಡಕ್ಕೆ ಹಾರುತ್ತಾರೆ. ಆವಾಗ ಮರಾಯಿ ನೀರು ಬಾವಿಯಿಂದ ಮೇಲೆ ಬರುತ್ತದೆ. ಆ ನೀರನ್ನು ತೋಡಿನಲ್ಲಿ

ಗದ್ದೆಗೆ ಕಳುಹಿಸುತ್ತಾರೆ. ಶಿಬರೂರು ಶ್ರೀ ಕೊಡಮಂತಾಯ ಭಂಡಾರ ಮನೆಯಲ್ಲಿ ಈಗಲೂ ಬಾವಿಯಲ್ಲಿರುವ ತೀರ್ಥವನ್ನು ಪಣಿಯಿಂದಲೇ ತೆಗೆದುಕೊಡುತ್ತಾರೆ.



**ಗದ್ದೆ ಉಳುವುದು:** (ಗದ್ದೆ ಉಳುತ್ತಿದ್ದ ಮಾದರಿ) ಜೂನ್ ತಿಂಗಳಲ್ಲಿ ನಮಗೆ ಶಾಲೆ ಪ್ರಾರಂಭ, ಮಳೆಯ ಅಬ್ಬರ ಗದ್ದೆ ತುಂಬಾ ನೀರು. ಈ ಸಮಯ ರೈತರೆಲ್ಲಾ ಅತೀ ಉತ್ಸಾಹದಿಂದ ಗದ್ದೆಯ ಕೆಲಸಕ್ಕೆ ತೊಡಗುತ್ತಿದ್ದ ಕಾಲ. ಹೆಚ್ಚಿನ ರೈತರ ಮನೆಗಳಲ್ಲಿ ಒಂದು ಜೊತೆ, 2 ಜೊತೆ ಎತ್ತು ಅಥವಾ ಕೋಣಗಳನ್ನು ಸಾಕುತ್ತಿದ್ದರು. ನಾಲ್ಕು ಐದು ದನ ಕರುಗಳು ಸಾಮಾನ್ಯ. ಇದಕ್ಕಾಗಿ ದೊಡ್ಡ ಹಟ್ಟಿ ಇರುತ್ತಿತ್ತು. ಹಟ್ಟಿ ತುಂಬ ತರಗೆಲೆ, ಸೆಗಣಿ, ಗೋಮೂತ್ರ, ಬೈಹುಲ್ಲಿನಿಂದ ಗೊಜಲು ತುಂಬಿರುತ್ತಿತ್ತು. ಇದರ ಮಧ್ಯದಲ್ಲಿ ಮಣೆ ಹಾಕಿ ನನ್ನ ಅಮ್ಮ ದನದ ಹಾಲು ಕರೆಯುತ್ತಿದ್ದುದು ಈಗಲೂ ನೆನೆಪಿದೆ.

ಗೊಬ್ಬರಕ್ಕೆ ಹಟ್ಟಿಯಲ್ಲಿ ಶೇಖರವಾಗಿದ್ದ ಎಲ್ಲಾ ಸೊಪ್ಪು ಸೆಗಣಿ ಗೋಮೂತ್ರದ ಗೊಜಲನ್ನು ಉಪಯೋಗಿಸುತ್ತಿದ್ದರು. ಇದನ್ನು ಮನೆ ಹೊರಗೆ ಶೇಖರಿಸಿ ಇಡುತ್ತಿದ್ದರು. ಇದನ್ನು **ಗೊಬ್ಬರದ ಬುಟ್ಟಿಯಲ್ಲಿ** ಮಳೆ ಬಂದ ಸಮಯ ಗದ್ದೆಯ ಎಲ್ಲಾ ಭಾಗದಲ್ಲಿ ಪಸರಿಸುತ್ತಿದ್ದರು. ಬಳಿಕ ನಾಲ್ಕೈದು ದಿನದ ಬಳಿಕ ಗದ್ದೆ ಉಳುವುದಕ್ಕಾಗಿ ಬೆಳಿಗ್ಗೆ ಬೇಗ ಎದ್ದು ನೊಗ ನೇಗಿಲು ಹೆಗಲಿಗೇರಿಸಿ ಗದ್ದೆ ಬಳಿ ಹೋಗಿ ಕೋಣಗಳ ಹೆಗಲಿಗೆ ನೇಗಿಲು ಕಟ್ಟಿ ಅದರ ಮಧ್ಯ ನೊಗಕಟ್ಟಿ ಹೊಲ ಉಳಲಿಕ್ಕೆ ಪ್ರಾರಂಭ. 9.00 ಗಂಟೆ ಸಮಯಕ್ಕೆ ಸರಿಯಾಗಿ ಮನೆ ಹೆಂಗಸರು ಗಂಜಿ ಬೇಯಿಸಿ ಗದ್ದೆ ಬಳಿ ತಂದು ತಮ್ಮ ಮನೆಯವರಿಗೆ ಬಟ್ಟಲಲ್ಲಿ ಗಂಜಿ ಉಪ್ಪಿನ ಕ್ಯಾಯೊಂದಿಗೆ ಉಣ ಬಡಿಸುತ್ತಿದ್ದರು. ತಾವು ತಂಗಳನ್ನ ಮತ್ತು ಮಜ್ಜಿಗೆಯಲ್ಲಿ ಉಂಡು ಬರುತ್ತಿದ್ದರು. ಭತ್ತ ಬೀಜ ಹಾಕಿ ಮೊಳಕೆಯೊಡೆದು ಒಂದು ಗೇಣು ಎತ್ತರಕ್ಕೆ ಬೆಳದಿದ್ದ ನೇಜನ್ನು ಕೊಯ್ಯಲು ಹೆಂಗಸರು ಸೊಂಟಕ್ಕೆ ಸೆರಗು ಎಳೆದು ಕಟ್ಟಿ ಸಜ್ಜಾಗುತ್ತಿದ್ದರು. ಗಂಡಸರು ಉಳುತ್ತಿದ್ದರೆ, ಹೆಂಗಸರು ನೇಜು ಕೊಯ್ಯುವ ದೃಶ್ಯ, ಅದರೊಂದಿಗೆ ಮಳೆಯ ಅಬ್ಬರ ಎಷ್ಟೊಂದು ಮನಸ್ಸಿಗೆ ಸಂತೋಷ ಕೊಡುತ್ತಿತ್ತು. ನೇಜು ಹರಿಯಲು ಎರಡೂ ಕೈ ಬಳಸುತ್ತಿದ್ದರು. ಎರಡು–ಮೂರು ಮುಷ್ಠಿ ನೇಜು ಒಟ್ಟಾದ ಬಳಿಕ ಒಂದು ಹುಲ್ಲಿನಿಂದ ಅದಕ್ಕೆ ಕಟ್ಟ ಹಾಕಿ ದೂರ ಎಸೆಯುತ್ತಿದ್ದರು. ಗಂಡಸರು ಗದ್ದೆ ಉತ್ತ ಬಳಿಕ ಅದರ ಮಣ್ಣು ಒಂದೇ ಮಟ್ಟದಲ್ಲಿ ನಿಲ್ಲಲು ಹಲಿಗೆ ಹಾಕಿ ಪುನಃ ಉಳುತ್ತಿದ್ದರು. ಬಳಿಕ ಹೆಂಗಸರು ಸಾಲಾಗಿ ನಿಂತು ಎಡಕೈಯಲ್ಲಿ ನೇಜಿನ ಗಿಡ ಹಿಡಕೊಂಡು 3, 4 ತಸಿಗಳನ್ನು ಉತ್ತು ಹಾಕಿದ ಗದ್ದೆಯಲ್ಲಿ ಒಂದೇ ಅಳತೆಯಲ್ಲಿ ನೆಡುತ್ತಿದ್ದರು. ಮನ ಸಂತೋಷಕ್ಕೆ ಸಮಯ ಕಳೆಯಲು ಬೇರೆ ಬೇರೆ ರೀತಿಯ **ಪಾರ್ದನ** ಹೇಳುವ ಕ್ರಮ ಇತ್ತು. ಒಬ್ಬಳು ಹೇಳಿದ ನಂತರ ಎಲ್ಲರೂ ಸೇರಿ ಹಾಡುವ ಪಾರ್ದನ ಎಲ್ಲರಿಗೂ ಖುಷಿ ಕೊಡುತ್ತಿತ್ತು. ನೆಟ್ಟ ಗದ್ದೆಯಲ್ಲಿ ಎರಡು ತಿಂಗಳಲ್ಲಿ ತೆನೆ ಬರುವಾಗ ಕಳೆ ಕೀಳುವ ಕೆಲಸವಿರುತ್ತಿತ್ತು. ಹಕ್ಕಿಗಳು ತೆನೆ ತಿನ್ನಬಾರದೆಂದು ಗದ್ದೆ ಮಧ್ಯ **"ಬೆರ್ಚಪ್ಪ"** ಇಡುತ್ತಿದ್ದರು.



## ಸುಳ್ಳಿನ ಸುಖಕ್ಕಿಂತ ಸತ್ಯದ ದುಃಖ ಲೇಸು




4 ತಿಂಗಳ ಬಳಿಕ ಭತ್ತದ ತೆನೆ ಒಣಗಿ ಹುಲ್ಲು ಒಣಗಲು ಪ್ರಾರಂಭವಾದಾಗ ಕೊಯ್ಲಿಗಾಗಿ ಹೆಂಗಸರು **'ಪರ್ಕತ್ತಿ'** ಹಿಡಿದು ಗದ್ದೆಗೆ ಹೊರಡುತ್ತಿದ್ದರು. ಬೆಳೆದ ಭತ್ತದ ಗಿಡಗಳಿಗೆ **"ಕೈ"** ಎನ್ನುತ್ತಿದ್ದರು. **ಕೈ** ಇದನ್ನು ಒಂದು ಹೊರೆ ಮಾಡಿ ಸೆಗಣಿ ಹಾಕಿ ಗುಡಿಸಿದ ಅಂಗಳದಲ್ಲಿ ರಾಶಿ ಹಾಕುತ್ತಿದ್ದರು. ಮಳೆ ಬರುವ ಸಂಭವವಿದ್ದರೆ ಕೈಯಿತ ಮುಟ್ಟೆ ಕಟ್ಟುತ್ತಿದ್ದರು. ಭತ್ತ ಮತ್ತು ಹುಲ್ಲು ಬೇರ್ಪಡಿಸಲು **ಪಡಿಮಂಚ** ಉಪಯೋಗಿಸುತ್ತಿದ್ದರು.


**ಪಡಿಮಂಚ**

ಹುಲ್ಲು ಭತ್ತ ಬೇರ್ಪಟ್ಟ ಬಳಿಕ ಹುಲ್ಲು ಕಟ್ಟಿ ಒಂದು ವ್ಯವಸ್ಥಿತವಾಗಿ ಮಳೆಗೆ ಹಾಳಾಗದಂತೆ ಜೋಡಿಸಿ ಮೇಲೆ ಮೇಲೆ ಪೋಣಿಸುವ ಕ್ರಮಕ್ಕೆ **ಬೈತಮುಟ್ಟೆ** ಎನ್ನುತ್ತಿದ್ದರು. ನೆಲಕ್ಕೆ ಗೆದ್ದಲು ಹಿಡಿಯದಂತೆ ಎತ್ತರದ ಕಲ್ಲು ಅಥವಾ ಮರ ಇಟ್ಟು ಎತ್ತರ ಮಾಡುತ್ತಿದ್ದರು. ಬಳಿಕ ಬೈಹುಲ್ಲನ್ನು ಸ್ವಲ್ಪ ಸ್ವಲ್ಪವೇ ಹಟ್ಟಿಯಲ್ಲಿ ದನ, ಕೋಣ, ಎತ್ತುಗಳಿಗೆ ಮೇಯಲು ಹಾಕುತ್ತಿದ್ದರು. ಭತ್ತ ಶುದ್ಧಗೊಳಿಸಿ ಮನೆಯಲ್ಲಿ ರಾಶಿ ಹಾಕುತ್ತಿದ್ದರು ಅಥವಾ ಗೋಣಿಯಲ್ಲಿ ತುಂಬಿಸುತ್ತಿದ್ದರು. ದೊಡ್ಡ ಶ್ರೀಮಂತರು ತುಂಬಾ ಗದ್ದೆ ಇದ್ದವರು ಅಥವಾ ಧನಿಗಳು ಭತ್ತ ಶೇಖರಿಸಲು **'ತುಪ್ಪೆ'** ಅಥವಾ ಮನೆಯ ಒಳಗಾದರೆ **'ಗಳಗೆ'** ಬಳಸುತ್ತಿದ್ದರು. ದೀಪಾವಳಿ ಸಮಯ ಭತ್ತದ ರಾಶಿಗೆ ದೀಪ ಇಟ್ಟು ಪೂಜೆ ಮಾಡುವ ಕ್ರಮ ಇತ್ತು. ಮಳೆ ನಿಂತ ಬಳಿಕ ಭತ್ತವನ್ನು ಬೇಯಿಸಿ ಅಕ್ಕಿ ಮಾಡುವುದು ಕ್ರಮ.



**ಕುಚ್ಚಿಲು ಅಕ್ಕಿ** : ಮನೆಯಲ್ಲಿ ದೊಡ್ಡ ಗುಡಾಣದಲ್ಲಿ ಭತ್ತ ಹಾಕಿ ನೀರು ಹಾಕಿ ಬೇಯಿಸಿ ಇಡುತ್ತಿದ್ದರು. ಮರುದಿನ ಇನ್ನೊಮ್ಮೆ ಬಿಸಿ ಮಾಡಿ ಅಂಗಳದಲ್ಲಿ ಒಣ ಹಾಕುತ್ತಿದ್ದರು. ಸರಿಯಾದ ಮಟ್ಟದಲ್ಲಿ ಒಣಹಾಕಲು ಹಲಿಗೆಯಿಂದ ಮಾಡಿದ ಸಾಧನ **'ಕೈಗೋರಿ'** ಉಪಯೋಗಿಸುತ್ತಿದ್ದರು. ಬಿಸಿಲು ಎಲ್ಲಾ ಭತ್ತಕ್ಕೆ ಸಿಗುವಂತೆ ಮಾಡಲು ಇನ್ನೊಂದು ಸಾಧನ ಬಳಕೆಯಾಗುತ್ತಿತ್ತು. ಒಣಗಿದ ಬಳಿಕ ಕಲ್ಲಿನ ಹೊಂಡದಲ್ಲಿ **ಉಜ್ಜೆರ್** ಎಂಬ ಹುಣಸೆ ಮರದ ತಿರುಳಿನಿಂದ ರಚಿಸಿದ ಸಾಧನದಿಂದ ಕುಟ್ಟುತ್ತಿದ್ದರು. ಭತ್ತ ಕುಟ್ಟಿದ ಬಳಿಕ **ತಡ್ಪೆ** ಎಂಬ ಸಾಧನದಿಂದ (ಬಿದಿರಿನ ಸಿಪ್ಪೆಯಿಂದ ಮಾಡಿರುತ್ತಾರೆ ಅದಕ್ಕೆ ಸೆಗಣಿ ನೀರಿನಿಂದ ಒರಸಿ ಒಣಗಿಸಿಡುತ್ತಾರೆ) ಭತ್ತದ ಸಿಪ್ಪೆ ಹಾಗೂ ಅಕ್ಕಿ ಬೇರ್ಪಡಿಸುತ್ತಿದ್ದರು. ಸಿಪ್ಪೆಯನ್ನು ದನಕರುಗಳ ಆಹಾರದ ಜೊತೆ ಬೆರಸುತ್ತಿದ್ದರು. ಅಕ್ಕಿ ಆದ 6 ತಿಂಗಳ ನಂತರ ತಿಂದರೆ ಆರೋಗ್ಯ ದೃಷ್ಟಿಯಿಂದ ತುಂಬಾ ಒಳ್ಳೆಯದು. ಈ ರೀತಿಯ ಅಕ್ಕಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 90 ಪಾಲು ಜನರು ಬಳಸುತ್ತಿದ್ದರು. ಇದನ್ನು **ಕುಚ್ಚಲು ಅಕ್ಕಿ** (ಉರ್ಪೆಲ್ ಅರಿ) ಎನ್ನುತ್ತಿದ್ದರು. ಉರ್ಪೆಲ್ ಅರಿ ಭತ್ತ ಬೇಯಿಸದೆ ಒಣಗಿಸಿ ಮಾಡಿದ **ಅಕ್ಕಿ ಬೆಳ್ತಿಗೆ** (ಬೊಲಂತೆ ಅರಿ) ಎನ್ನುತ್ತಿದ್ದರು. ಅಕ್ಕಿಯನ್ನು ಜಾಗ್ರತೆಯಾಗಿ ವರ್ಷದವರೆಗೆ ಇರಿಸುವ **ಅಕ್ಕಿ ಮುಡಿ** ಕಟ್ಟುತ್ತಿದ್ದರು.







ಅಕ್ಕಿ ಹೊರತೆಗೆಯಲು ತೂತು ಮಾಡಲು ಒಂದು ಚೂರಿ ಬಳಸುತ್ತಿದ್ದರು. ಮುಡಿಯನ್ನು ವರ್ಷಗಟ್ಟಲೆ ಇಟ್ಟಿರುವ ಅಕ್ಕಿಯಲ್ಲಿ ಅಕ್ಕಿ ಹುಳ, ಹಾಗೂ ಗುಗ್ಗುರು ಆಗುತ್ತಿತ್ತು. ಹೀಗೆ ಹುಳ ಇದ್ದ ಅಕ್ಕಿ ಆರೋಗ್ಯಕ್ಕೆ ತುಂಬಾ ಒಳ್ಳೆಯದು, ಬೆಲೆ ಬಾಳುವ ಅಕ್ಕಿ. ಹುಳ, ಗುಗ್ಗುರು ತೆಗೆದು ಈ ಕುಚ್ಚಿಲು ಅಕ್ಕಿಯಿಂದ ಮಾಡಿದ ಮಡಕೆಯಲ್ಲಿ (ಮಣ್ಣಿನ ಮಡಕೆ) ಕಟ್ಟಿಗೆ ಬೆಂಕಿಯಿಂದ ಬೇಯಿಸಿದ ಗಂಜಿ ಉಂಡು ನೋಡಿದರೆ ಗೊತ್ತಾಗುತ್ತೆ ಅದರ ರುಚಿ. ಇಂತಹ ಗಂಜಿಗೆ ಇರುವ ಶಕ್ತಿ ಈಗಿನ ಯಂತ್ರದಲ್ಲಿ ತಯಾರಾದ ಅಕ್ಕಿಗೆ ಸ್ವಲ್ಪವೂ ಇರಲಾರದು. ಸಾಮಾನ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತುಳು ಜನಾಂಗದವರಿಗೂ ಕುಚ್ಚಿಲು ಅಕ್ಕಿಯಿಂದ ಮಾಡಿದ ಗಂಜಿಯೇ ಬೆಳಗ್ಗಿನ ಹಾಗೂ ರಾತ್ರಿ ಊಟ. ಊಟಕ್ಕೆ ಸ್ವಲ್ಪ ಉಪ್ಪು, ತುಪ್ಪ, ಉಪ್ಪಿನ ಕ್ಯಾ ಇದ್ದರೆ ಹೊಟ್ಟೆ ತುಂಬ ಉಂಡು ಅದರ ನೀರು (ತೆಳಿ) ಕುಡಿದು ತೇಗುತ್ತಿದ್ದರು. ಇದೇ ತುಳುವರ ಆರೋಗ್ಯಕ್ಕೆ ಕಾರಣವಾಗಿತ್ತು. ಎಲ್ಲರೂ ಆರೋಗ್ಯವಂತರಾಗಿದ್ದರು. ಸಾಮಾನ್ಯ ಹೆಚ್ಚಾಗಿ ಎಲ್ಲರೂ 80ರಿಂದ 100ವರ್ಷ ಆರೋಗ್ಯವಂತರಾಗಿ ಜೀವಿಸುತ್ತಿದ್ದರು.

ಅಂದಿನ ಎಲೆ ಗೊಬ್ಬರದ ಅಕ್ಕಿ, ತರಕಾರಿ ದಿನವೆಲ್ಲಾ ಹೊಲದಲ್ಲಿ ಕೆಲಸ, ಗಂಡಸರು ಉಳುವುದು, ಗೊಬ್ಬರ ಹೊರುವುದು, ಸದಾ ಸಾಗುವಳಿಯ ಕೆಲಸ, ಹಟ್ಟಿಯ ಕೆಲಸದಲ್ಲಿ ತೊಡಗಿದರೆ ಹೆಂಗಸರು ತೆಂಗಿನ ಕ್ಯಾಯನ್ನು ಕಲ್ಲಿನ ಕಡೆಯುವ ಕಲ್ಲಿನಲ್ಲಿ ಕಡೆಯುವುದು. ಅಕ್ಕಿ, ರಾಗಿ, ಗೋಧಿ ಬೀಸುವ ಕಲ್ಲಿನಲ್ಲಿ ಬೀಸುವುದು, ಅಕ್ಕಿ, ಭತ್ತ, ಅವಲಕ್ಕಿ ಕುಟ್ಟುವುದು. ಬಟ್ಟೆ ಒಗೆಯುವುದು, ರಾಟೆ ಬಾವಿಯಿಂದ ಕೊಡದ ಸಹಾಯದಿಂದ ನೀರನ್ನು ಎತ್ತುವುದು, ಪಾತ್ರೆ ತೊಳೆಯುವುದು, ಕುಳಿತು ನೆಲ ಒರೆಸುವುದು, ಕೂತು ಕಟ್ಟಿಗೆ ಒಲೆಯಲ್ಲಿ ಅನ್ನ ಪದಾರ್ಥ ಮಾಡುವುದು ನೆಲದಲ್ಲಿ ಕುಳಿತು ಊಟ ಮಾಡುವುದು ಹೆಂಗಸರ ಆರೋಗ್ಯವನ್ನು ಕಾಪಾಡುತ್ತಿತ್ತು. ಈ ಎಲ್ಲಾ ಮನೆ ಕೆಲಸಗಳು ಹೆಂಗಸರನ್ನು ಶಕ್ತಿವಂತರನ್ನಾಗಿ ಮಾಡುತ್ತಿತ್ತು. ಹತ್ತು ಮಕ್ಕಳನ್ನು ಹೆತ್ತಿರುವ ಹೆಂಗಸರೂ ಕೂಡ ಆರೋಗ್ಯವಂತರಾಗಿ ಸಪೂರವಾಗಿದ್ದು ತುಂಬಾ ಚಟುವಟಿಕೆಯಿಂದ ಓಡಾಡುವ ಕಾಲ ಅಂದಿನದ್ದು.




ಇಂದು ಒಂದು ಮಗು ಹಡೆದಿರುವ ಹುಡುಗಿಯರು ಸ್ಥೂಲಕಾಯರಾಗಿ ಯಾವ ಕೆಲಸವನ್ನು ಮಾಡಲಾಗದೆ ಒದ್ದಾಡುತ್ತಿದ್ದಾರೆ. **ಇಂದಿನ ಆಹಾರ ಕ್ರಮ ಹಾಗೂ ಇಂದಿನ ಯಾಂತ್ರಿಕ ಬಳಕೆಯಿಂದಾಗಿ 90 ಪಾಲು ಹೆಂಗಸರ ಆರೋಗ್ಯ ಹಾಳಾಗುತ್ತಿದೆ.**

# ಅಂದು ಕಂಡದ್ದು – ಇಂದು ಕಾಣದ್ದು (ವಸ್ತುಗಳು)

## ಹೆಚ್ಚಿನ ಎಲ್ಲಾ ಚಿತ್ರಗಳನ್ನು ಕಟೀಲು ಪ.ಪೂ. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಂ. ಜಯರಾಮ ಪೂಂಜರ ಸಹಕಾರದಿಂದ ಅಲ್ಲಿಯ ವಸ್ತುಸಂಗ್ರಹಾಲಯದಲ್ಲಿ ಇದ್ದ ವಸ್ತುಗಳನ್ನು ನೊಡಿ ಬಿಡಿಸಿರುತ್ತೇನೆ.

**ಕೊರಂಬು :** ಮಳೆಗಾಲ ಸಾಮಾನ್ಯ ಜೂನ್ ತಿಂಗಳಲ್ಲಿ ಪ್ರಾರಂಭವಾಗಿ ದೀಪಾವಳಿ ಹಬ್ಬದ ತನಕ ಇರುತಿತ್ತು. ಈ ಅವಧಿಯಲ್ಲಿ ರೈತರೆಲ್ಲರೂ ಹೊಲದಲ್ಲಿ ಕೆಲಸ ಮಾಡುವಾಗ ಮಳೆಯ ರಕ್ಷಣೆಗಾಗಿ ಬಳಸುತ್ತಿದ್ದ ಅತೀ ಉತ್ತಮವಾದ ಸಾಧನ. ಹೆಂಗಸರು, ಗಂಡಸರು, ಮಕ್ಕಳೆಲ್ಲರೂ ಬಳಸುತಿದ್ದರು. ಬೀಳಲನ್ನು ಅಡ್ಡ ನೀಟನೇಯ್ದು ದೊಡ್ಡ ಗಾತ್ರದ ಎಲೆ (ಒಂದು ಜಾತಿಯ ಮರದ ಎಲೆ)ಯನ್ನು ಚಂದವಾಗಿ ಪೋಣಿಸಿ ಒಂದು ತೊಟ್ಟು ನೀರು ಕೂಡ ಇದರೊಳಗೆ ಬಾರದಂತೆ ತಯಾರಿಸುತ್ತಿದ್ದರು. ಶಾಲೆಗೆ ಬರುವ ಎಲ್ಲ ಮಕ್ಕಳಿಗೂ **ಕೊರಂಬು** ಇರುತ್ತಿತ್ತು.




**ತತ್ರ :** ಸ್ವಲ್ಪ ಶ್ರೀಮಂತ ವರ್ಗದ ಮಕ್ಕಳು ದೊಡ್ಡವರು ತತ್ರ ಎಂಬ ಇನ್ನೊಂದು ರೀತಿಯ ಸಾಧನವನ್ನು ಮಳೆಗಾಲಕ್ಕೆ ಬಳಸುತಿದ್ದರು. ಇದನ್ನು ಬಿದಿರು ಕಡ್ಡಿಗಳಿಂದ ರಚಿಸುತಿದ್ದರು. ಮಧ್ಯಭಾಗದಲ್ಲಿ ಹಿಡಿದುಕೊಳ್ಳಲಿಕ್ಕೆ ಅನುಕೂಲವಾಗುವಂತೆ ಬಿದಿರು ಕೋಲು ಇತ್ತು. ಸಾಮಾನ್ಯ ಕೊಡೆಯಂತೆ ಇರುತ್ತದೆ. ಇದಕ್ಕೆ ತಾಳೆ ಮರದ ಅಗಲವಾದ ಎಲೆಯನ್ನು ಬಳಸುತ್ತಾರೆ.




**ಮುಟ್ಟಲಿ :** ಮಳೆಗಾಲದಲ್ಲಿ ತಲೆಗೆ ನೀರು ತಾಗದಂತೆ ಮತ್ತು ಭಾರವಾಗಿರುವ ವಸ್ತುಗಳನ್ನು (ಹುಲ್ಲು ಕಟ್ಟು – ಬತ್ತ ಕಟ್ಟು) ಹೊರಲು ತಲೆಯ ರಕ್ಷಣೆಗಾಗಿ ಇದನ್ನು ಬಳಸುತ್ತಿದ್ದರು. ಇದನ್ನು ಹೆಂಗಸರು, ಗಂಡಸರು ಎಂಬ ಬೇಧವಿಲ್ಲದೆ ಉಪಯೋಗಿಸುತ್ತಿದ್ದರು. ಅಡಿಕೆ ಮರದಲ್ಲಿ ಅಡಿಕೆ ಹೂವಿಗೆ ಮುಚ್ಚಿಕೊಂಡಿರುವ ಹಾಳೆಯನ್ನು ನೀರಿನಲ್ಲಿ ನೆನೆಹಾಕಿ ಚಿತ್ರದಲ್ಲಿ ತೋರಿಸಿದಂತೆ ರಚಿಸುತಿದ್ದರು. ಇದನ್ನು **ಮುಟ್ಟಳೆ** ಎಂದೂ ಕರೆಯುತ್ತಿದ್ದರು.




**ಚೆನ್ನಮಣೆ :** ಮಳೆ ಧಾರಾಕಾರ ಸುರಿಯುತ್ತಿರುವಾಗ ರೈತರಿಗೆ ಗದ್ದೆ ಕೆಲಸ ಮಾಡಲಿಕ್ಕೆ ಆಗದಿದ್ದಾಗ, ಹೆಂಗಸರು ಮತ್ತು ಮಕ್ಕಳು **ಚೆನ್ನಮಣೆಯಲ್ಲಿ ಆಟ ಆಡುತ್ತಿದ್ದರು.** ಇದನ್ನು ಮರದಿಂದ ತಯಾರಿಸುತ್ತಿದ್ದರು. ಏಳು+ಏಳು (14) ದುಂಡಗಿನ ಹೊಂಡ ಇರುತ್ತಿತ್ತು. ಎರಡೂ ಪಕ್ಕದಲ್ಲಿ ಆಟಕ್ಕೆ ಬಳಸುತ್ತಿದ್ದ ಕಾಯಿ ಹಾಕಲು ಜಾಗ ಇದರಲ್ಲಿ ಇದೆ. ಹಲವಾರು ವಿಧದ ಆಟಗಳಿವೆ. ರಾಜ–ಮಂತ್ರಿ, ಪೆರ್ಗ–ಕುಂತೆ, ಸೀತೆ ಆಟ. ಎರಡು ಮಂದಿ ಎದುರು ಬದುರಾಗಿ ಕುಳಿತು ಒಂದೊಂದು



ಹೊಂಡದಲ್ಲಿ ನಾಲ್ಕು – ನಾಲ್ಕು ಕಾಯಿ (ಹುಣಸೆಬೀಜ, ಗುರುಗಂಜಿ, ಚೆನ್ನೆಹರಳು, ಕವಡೆ ಬಳಸುತ್ತಿದ್ದರು.) ಇದು ಮನಸ್ಸಿಗೆ ತುಂಬ ಸಂತೋಷ ಕೊಡುತ್ತಿದ್ದ ಆಟ. ಹೆಚ್ಚಿನ ತುಳುವರೆಲ್ಲರ ಮನೆಯಲ್ಲಿ ಚೆನ್ನಮಣೆ ಇರುತ್ತಿತ್ತು.

**ಬೂರುದ ಪೆಟ್ಟಿಗೆ** : ತಿಂಗಳುಗಟ್ಟಲೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ವಾಸಿಸಲು ಬೇಕಾಗುವ ವಸ್ತುಗಳನ್ನು ಕೊಂಡು ಹೊಗಲು ಹಳ್ಳಿಯ ಜನರು ತಮ್ಮ ಬಟ್ಟೆ ಬರೆಗಳನ್ನು ಜೋಡಿಸಿ ಇಡಲು ಇದನ್ನು ಬಳಸುತ್ತಿದ್ದರು. 50 ವರ್ಷಕ್ಕೆ ಹಾಳಾಗುವುದಿಲ್ಲ. ಕಾಡಿನಲ್ಲಿ ಸಿಗುವ ಬೀಳಲಿನಿಂದ ಇದನ್ನು ರಚಿಸುತ್ತಿದ್ದರು. ತುಳುನಾಡಿನ ರಾಜ ಕಲೆಯಾದ 'ಯಕ್ಷಗಾನದ ಕಲಾವಿದರ ಉಡುಪು ಹಾಗೂ ವಸ್ತುಗಳನ್ನು ಒಂದು ಕಡೆಯಿಂದ ಇನ್ನೊಂದೆಡೆಗೆ ಕೊಂಡು ಹೋಗಲು ಇದು ತುಂಬಾ ಉಪಯೋಗವಾಗುತ್ತಿತ್ತು. **"ಪಡುಬಿದ್ರೆಯ ನಾಗಮಂಡಲದಲ್ಲಿ ನೃತ್ಯ ಮಾಡುವ ವೈದ್ಯರಲ್ಲಿ ಈಗಲೂ ಇದರ ಬಳಕೆ ಇದೆ"**.







**ಮರಾಯಿ** : ಗದ್ದೆಗೆ ನೀರು ಮೇಲಕ್ಕೆ ತರುವ ಸಾಧನಕ್ಕೆ **ಮರಾಯಿ** ಎನ್ನುತ್ತಾರೆ. ಇದು ಒಂದೇ ಮರದ ತುಂಡನ್ನು ಕೊರೆದು (ಮಧ್ಯ ಭಾಗ) ರಚಿಸುತ್ತಿದ್ದರು. 4–5 ಕೊಡ ನೀರು ತುಂಬುವಷ್ಟು ದೊಡ್ಡ ಗಾತ್ರದಲ್ಲಿ ಇರುತ್ತದೆ. ಕೆಲವು ಸ್ವಲ್ಪ ದೊಡ್ಡ ಗಾತ್ರದಲ್ಲಿ ಇರುತ್ತಿತ್ತು.



**ಪಣೆ** : ಪಣೆ ಚಿತ್ರ ನೋಡಿದಾಗ ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ವಿಧಾನ ತಿಳಿಯುತ್ತದೆ. ಒಬ್ಬ ಬಾವಿಯ ಬದಿಯ ಆಧಾರ ಗೂಟದಲ್ಲಿ ನಿಂತು ಮಾರಾಯಿ ಮೂಲಕ ನೀರನ್ನು ಎತ್ತಿ ಮೇಲಕ್ಕೆ ತೋಡಿಗೆ ಹೊಯ್ಯಬೇಕು. ಅದು ಮೇಲಕ್ಕೆ ಬರಲು ಇಬ್ಬರು ಹಗ್ಗದ ಸಹಾದಿಂದ ನೇತಾಡಿ ಹೊಂಡಕ್ಕೆ ಹಾರಬೇಕು. ಆವಾಗ ಮಾರಾಯಯಲ್ಲಿದ್ದ 4–5 ಕೊಡ ನೀರು ತೋಡಿನ ಮೂಲಕ ಗದ್ದೆಗಳಿಗೆ ಹೋಗುತ್ತದೆ. ಇದು ಮಳೆ ಇಲ್ಲದಿದ್ದಾಗ ಗದ್ದೆಗಳಿಗೆ ನೀರು ಸರಬರಾಜು ಮಾಡುವ ವಿಧಾನ.



**ಕುರ್ಕಿಲ್** : ಇದನ್ನು ಕಾಡಿನಲ್ಲಿ ಸಿಗುವ ಬೀಳಲಿನಿಂದ ಚಿತ್ರದಲ್ಲಿ ತೋರಿಸಿರುವಂತೆ ನೇಯುತ್ತಾರೆ. ಇದನ್ನು ಹಟ್ಟಿಯಲ್ಲಿ ದನ, ಎತ್ತು, ಕೋಣಗಳಿಗೆ ಮಲಗಲು ಹಾಸಲು ತರಗಲೆಯನ್ನು ಕಾಡಿನಿಂದ ತರಲು ಬಳಸುತ್ತಿದ್ದರು. ಇದು 4–5 ಅಡಿ ಎತ್ತರ ಹಾಗೂ ಅಗಲವಾಗಿ ದುಂಡಗೆ ಇರುತ್ತಿತ್ತು. ಒಂದು ಹಟ್ಟಿಗೆ ಬೇಕಾಗುವ ತರಗೆಲೆಯನ್ನು (ಒಮ್ಮೆ ಹರಡಲು) ಇದರಲ್ಲಿ ತುಂಬಿಸಲು ಸಾಧ್ಯವಾಗುತ್ತಿತ್ತು. ಇದೇ ತರಗೆಲೆ ಮೂತ್ರ ಸೆಗಣಿ ಸೇರಿ ಹಟ್ಟಿ ಗೊಬ್ಬರವಾಗುತ್ತಿತ್ತು.

**ಪೊಲಿಮಣೆ** : ಮಳೆಗಾಲ ಮುಗಿದು ನವೆಂಬರ್ ತಿಂಗಳಲ್ಲಿ ರೈತರೆಲ್ಲಾ ತಮ್ಮ



ಅಂಗಳವನ್ನು ಸರಿ ಪಡಿಸಬೇಕಾಗುತ್ತದೆ. ಮಣ್ಣಿನ ಅಂಗಳದಲ್ಲಿ ಮಳೆ ಬಂದು ಎಲ್ಲಾ ಏರು ತಗ್ಗು ಹೊಂಡ ಇರುತ್ತದೆ. ಅದನ್ನು ಸಮತಟ್ಟು ಮಾಡಲು **ಪೊಲಿಮಣೆ**ಯನ್ನು ಬಳಸುತ್ತಿದ್ದರು. ಚಿತ್ರದಲ್ಲಿ ತೋರಿಸಿರುವಂತೆ ಮರದಿಂದ ತಯಾರಿಸುತ್ತಾರೆ. 2–3 ಅಡಿ ಉದ್ದ ಹಾಗೂ 4–5 ಇಂಚು ಎತ್ತರವಿದ್ದು ಎರಡೂ ಕೈಯಲ್ಲಿ ಹಿಡಿದು ಬಡಿಯಲು ಸರಿಯಾದ ಹಿಡಿಕೆ ಇರುತ್ತದೆ.



**ಪಡಿಮಂಚ** : ಚಿತ್ರದಲ್ಲಿ ತೋರಿಸಿದಂತೆ ಇದನ್ನು ಮರದಿಂದ ರಚಿಸುತ್ತಿದ್ದರು. 3 ಅಡಿ ಎತ್ತರ ಹಾಗೂ 5–6 ಅಡಿ ಚೌಕಾಕಾರದ ಮಂಚದ ರೀತಿ ಇರುವುದರಿಂದ ಇದನ್ನು **ಪಡಿಮಂಚ** ಎನ್ನುತ್ತಾರೆ. ಬತ್ತದ ಬೆಳೆ ಬೆಳೆದು ಒಣಗಲಿಕ್ಕೆ ಆಗುವಾಗ ಕೊಯ್ದು ಕಟ್ಟು ಕಟ್ಟು ಮಾಡಿ (ಸೂಡಿ ಎನ್ನುತ್ತಾರೆ) ಅಂಗಳದಲ್ಲಿ ತಂದು ರಾಶಿ ಹಾಕುತ್ತಾರೆ. ಬಳಿಕ ಎರಡು – ಮೂರು ಸೂಡಿ ಒಟ್ಟಾಗಿ ಹಿಡಿದು ಬತ್ತದ ತೆನೆಯ ಬದಿಯನ್ನು ಪಡಿ ಮಂಚಕ್ಕೆ ಬಡಿದಾಗ ಬತ್ತ ಮಧ್ಯ ಭಾಗದಲ್ಲಿ ರಾಶಿಯಾಗಿ ಬೀಳುತ್ತದೆ.



**ಅಲೆದೆಕ್ಕುನ ಚರಕ** : ಹಾಲು ಕುದಿಸಿ – ಮೊಸರು ಮಾಡಿದ ಬಳಿಕ ಬೆಣ್ಣೆ ತೆಗೆಯಲು ಮೊಸರನ್ನು ಪಾತ್ರೆಗೆ ಹಾಕಿ ಹಗ್ಗದ ಸಹಾಯದಿಂದ ಎರಡೂ ಕೈಯನ್ನು ಬಳಸಿ ಕಡೆಯಲು ಚರಕ ಬಳಸುತ್ತಿದ್ದರು. ಇದನ್ನು ಮರದಿಂದ ರಚಿಸುತ್ತಿದ್ದರು. ನನ್ನ ಮನೆಯಲ್ಲಿ ಅಮ್ಮ ಬೆಳಿಗ್ಗೆ 5 ಗಂಟೆಗೆ ಎದ್ದು ಲಕ್ಷ್ಮೀ ಶೊಬಾನೆ ಹಾಡುತ್ತಾ ಮಜ್ಜಿಗೆ ಕಡೆಯುತ್ತಿದ್ದುದು ಈಗಲೂ ನೆನಪಿದೆ. ಇಂತಹ ಸಾಧನಕ್ಕೆ **ಅಲೆದೆಕ್ಕುನ ಚರಕ** (ತುಳುವಿನಲ್ಲಿ) ಹೇಳುತ್ತಾರೆ.



**ನುಗ** : ಮಳೆಗಾಲದ ಪ್ರಾರಂಭದಲ್ಲಿ ಗದ್ದೆಗೆ ಹಟ್ಟಿಗೊಬ್ಬರ ಹಾಕಿ ರೈತರೆಲ್ಲಾ ಎತ್ತುಗಳ ಸಹಾಯದಿಂದ ಕೋಣಗಳ ಸಹಾಯದಿಂದ ಉಳುವ ಕೆಲಸ ಮಾಡುತ್ತಿದ್ದರು. 2 ಕೋಣಗಳ ಕುತ್ತಿಗೆಗೆ ಜೊತೆಗೊಳಿಸುವ ಸಾಧನವೇ **ನುಗ** ಅಥವಾ **ನೊಗ**. **ನೊಗದ** ಎರಡೂ ಬದಿಯಲ್ಲಿ ಉಂಗುರಗಳಿವೆ. ಈ ಉಂಗುರಗಳಿಗೆ ಮತ್ತು ಕೋಣಗಳ ಕೊರಳಿಗೆ ಹಗ್ಗದ ಸಹಾಯದಿಂದ ಕಟ್ಟುತ್ತಾರೆ. ಮರದಿಂದ ಇದನ್ನು ರಚಿಸುತ್ತಾರೆ. ಸಾಮಾನ್ಯವಾಗಿ 6 ಅಡಿಯಷ್ಟು ಉದ್ದವಿರುತ್ತದೆ.



**ಮುಟ್ಟತ್ತಿ ಬೊಕ್ಕ ಪೆರೆದನೆ** : ಈ ಸಾಧನವನ್ನು ಈಗಲೂ ಹೆಚ್ಚಿನ ಮನೆಗಳಲ್ಲಿ ಬಳಸುತ್ತಿದ್ದಾರೆ. ಬಳಕೆ ಕಡಿಮೆಯಾಗುತ್ತಾ ಇದೆ. ಹೆಂಗಸರು ತರಕಾರಿಯ ಸಿಪ್ಪೆ ತೆಗೆಯಲು, ಸಾಂಬರ್ ಪಲ್ಯಕ್ಕೆ ಬೇಕಾದ ಗಾತ್ರದಲ್ಲಿ ತುಂಡು ಮಾಡಲು ಇದರ ಮೇಲೆ ಕುಳಿತು ಉಪಯೋಗಿಸುತ್ತಿದ್ದರು. ಇದಕ್ಕೆ **"ಮುಟ್ಟತ್ತಿ"** ಎನ್ನುತ್ತಾರೆ. ಇದರ ತುದಿ ಭಾಗದಲ್ಲಿ ಇರುವುದು **ಪೆರೆದನೆ** ಎಂದರೆ ತೆಂಗಿನಕಾಯಿ ಒಡೆದು ಬಳಿಕ ಒಂದು ಭಾಗವನ್ನು ಇದರ ಬದಿಯಲ್ಲಿ ಇರುವ ಗರಗಸದಂತಹ ಹಲ್ಲಿನ ಭಾಗದ ಸಹಾಯದಿಂದ ಹೆರೆಯುತ್ತಾರೆ. ಇದರಲ್ಲಿ ಕುಳಿತುಕೊಳ್ಳುವ ಭಾಗ ಮರದ್ದು ತುಂಡುಮಾಡುವ ಮತ್ತು ಹೆರೆಯುವ ಭಾಗ ಕಬ್ಬಿಣ ಅಥವಾ ಮಿಲಾವಿನದ್ದು.



**ಕತ್ತಿ ಕೂಟುನ ಮಣೆ** : ಕತ್ತಿಯನ್ನು ಹರಿತಗೊಳಿಸಲು ಬಿಳಿಕಲ್ಲನ್ನು (ಬೊರ್ಗಲ್ಲು) ಪುಡಿಮಾಡಿ ಇದರಲ್ಲಿ ಹಾಕಿ ಚೆನ್ನಾಗಿ ಮಸೆದಾಗ ಕತ್ತಿ, ಚೂರಿ, ಉಳಿ ಬಹಳ ಹರಿತವಾಗುತ್ತದೆ.ಇದನ್ನು ಮರದಿಂದ ರಚಿಸುತ್ತಾರೆ.



**ಉಪ್ಪುದ ಭರಣಿ** : ಇದನ್ನು ಚೀನೀ ಸೀಸೆಯಿಂದ ಮಾಡುತ್ತಾರೆ ಎಂದು ಕೆಲವರು ಹೇಳಿದ್ದು ನೆನಪು. ತುಳುನಾಡಿನ ಹಳೆಯ ಮನೆಗಳಲ್ಲಿ ಈಗಲೂ ಇಂತಹ ಭರಣಿಗಳನ್ನು ಉಪ್ಪಿನಕಾಯಿ ಹಾಕಿ ಇಡಲು ಬಳಸುತ್ತಾರೆ. ಸಣ್ಣದಾದ ದುಂಡಗಿನ ಭರಣಿಯನ್ನು **"ಉಪ್ಪು"** ಹಾಕಿ ಇಡಲು ಬಳಸುತ್ತಿದ್ದರು. ಇದರಲ್ಲಿ ಹಾಕಿ ಇಟ್ಟ ಉಪ್ಪು ಕರಗಿ ನೀರಾಗುವುದಿಲ್ಲ. ಅಲ್ಲದೆ ಹಾಕಿ ಇಟ್ಟ ಉಪ್ಪಿನ ಕಾಯಿ ನಾಲ್ಕೈದು ವರ್ಷವಾದರೂ ಹಾಳಾಗುವುದಿಲ್ಲ. ಇದಕ್ಕೆ **ಉಪ್ಪಡ್‌ದ ಭರಣಿ** (ತುಳುವಿನಲ್ಲಿ) ಎನ್ನುತ್ತಾರೆ. ಮೊಸರು, ಮಜ್ಜಿಗೆ ಇಡಲೂ ಇದನ್ನು ಬಳಸುತ್ತಾರೆ. ಬೇರೆ ಬೇರೆ ಗಾತ್ರದಲ್ಲಿ ಸಿಗುತ್ತಿತ್ತು. ಅಂಗಡಿಗಳಲ್ಲಿ ನಶ್ಯ ಹಾಕಿ ಇಡಲು ಭರಣಿಯನ್ನು ಉಪಯೋಗಿಸುತ್ತಿದ್ದರು.








**ಚಕ್ಕುಲಿದ ಅಂಡೆ** : ಚಕ್ಕುಲಿ, ಕಾರಕಡ್ಡಿ ಮಾಡಲು ಇದರ ಉಪಯೋಗ. ಇದರಲ್ಲಿ 2 ಭಾಗವಿದೆ. ಒಂದು ಲೋಟೆಯಂತಹ ಭಾಗ. ಇದರಲ್ಲಿ ಕೆಳಗೆ ಚಕ್ಕುಲಿ ಆಕಾರದ ಒಂದು ರಂಧ್ರ ಕತ್ತರಿಸಿದ ತಾಮ್ರದ ತಗಡು ಇಟ್ಟು ಕಡಲೆ ಹಿಟ್ಟು ಕಲಸಿ ಇನ್ನೊಂದು ಒತ್ತುವ ಭಾಗದಿಂದ ಒತ್ತಿದರೆ ಚಕ್ಕುಲಿ (ಆಕಾರದಲ್ಲಿ) ಸಿದ್ದ. ಕಾರಕಡ್ಡಿ ರಚಿಸಲು ಸಣ್ಣ ಸಣ್ಣ ದುಂಡಗಿನ ರಂಧ್ರ ರಚಿಸಿದ ತಾಮ್ರದ ತಗಡನ್ನು ಬಳಸುತ್ತಾರೆ. ಈ ಸಾಧನಕ್ಕೆ **"ಚಕ್ಕುಲಿದ ಅಂಡೆ"** ಎನ್ನುತ್ತಾರೆ. ಮರದಿಂದ – ಕಂಚಿನಿಂದಲೂ ಇದನ್ನು ತಯಾರು ಮಾಡುತ್ತಾರೆ.




**ಮರತ ಬೆದ್‌ರ್ದ ಸೇರ್, ಪಾವು** : ಅಕ್ಕಿ, ಭತ್ತ ಮತ್ತು ದವಸ ಧಾನ್ಯ ಅಳತೆ ಮಾಡಲು ಉಪಯೋಗಿಸುತ್ತಿದ್ದ ಸಾಧನ. ಒಂದು ಸೇರು ಎಂದರೆ 4 ಪಾವುಗಳಿಗೆ ಸರಿ. ಕೆಲವನ್ನು ಮರವನ್ನು ಕೊರೆದು ರಚಿಸುತ್ತಿದ್ದರೆ ಇನ್ನು ಕೆಲವನ್ನು ಬಿದಿರಿನ ಸಹಾಯದಿಂದ ರಚಿಸುತ್ತಿದ್ದರು.




**ಬೂರುದ ಬುಟ್ಟಿ** : ಬೆಳೆದ ತರಕಾರಿಯನ್ನು ಹೊಲದಿಂದ ಮನೆಗೆ ತರಲು, ಅಂಗಡಿಯಿಂದ ಕಟ್ಟಿಕೊಟ್ಟ ಸಾಮಾನುಗಳನ್ನು ಒಟ್ಟು ಮಾಡಿ ತರಲು ತಲೆ ಹೊರೆಯಲ್ಲಿ ಕೊಂಡು ಹೋಗಬೇಕಾದ ಯಾವುದೇ ವಸ್ತುಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಕೊಂಡುಹೋಗಲು ಇದು ಬಹಳ ಅನುಕೂಲ. ಇದನ್ನು ಕಾಡಿನಲ್ಲಿ ಸಿಗುವ ಒಂದು ಜಾತಿಯ ಬೀಳಲಿನಿಂದ ರಚಿಸುತ್ತಾರೆ. ಹತ್ತು ವರ್ಷವಾದರೂ ಏನೂ ಹಾಳಾಗುವುದಿಲ್ಲ. ಇದನ್ನು **"ಬುಟ್ಟಿ"** ಎನ್ನುತ್ತಿದ್ದರು.

**ಬಚ್ಚಿರೆ ಉಬ್ಬುನ ಬಾಜನ** : ಹಳ್ಳಿಯ ಜನರಿಗೆ, ರೈತರಿಗೆಲ್ಲರಿಗೂ ವೀಳ್ಯದೆಲೆ ತಿನ್ನುವ ಹವ್ಯಾಸ ಇರುತ್ತದೆ. ವೀಳ್ಯದೆಲೆ, ಸುಣ್ಣ, ಅಡಿಕೆ, ಕೆಲವರು ಸ್ವಲ್ಪ ಹೊಗೆಸೊಪ್ಪು ಸೇರಿಸಿ ತಿನ್ನುತ್ತಿದ್ದರು. ಬಾಯಿಯಲ್ಲಿ ಜಗಿಯುತ್ತಾ ಗದ್ದೆಯ ಕೆಲಸ ಮಾಡುವರು. ಇದು ಹೆಚ್ಚಿನ ಹೆಂಗಸರ, ಗಂಡಸರ, ಹವ್ಯಾಸವಾಗಿತ್ತು. ಬಾಯಿಯಲ್ಲಿದ್ದ ಎಂಜಲನ್ನು ಉಗುಳುವ ಈ ಸಾಧನಕ್ಕೆ **ಬಚ್ಚಿರೆ ಉಬ್ಬುನ ಬಾಜನ** ಎನ್ನುತ್ತಾರೆ.




**ಲಾಂಟಾನ್** : ಹೆಚ್ಚಿನ ಎಲ್ಲಾ ತುಳುವರ ಮನೆಯಲ್ಲಿ ಬೆಳಕಿಗಾಗಿ ಬಳಸುತ್ತಿದ್ದ ಸಾಧನ. ಇದನ್ನು **"ಲಾಂಟನ್"** ಎನ್ನುತ್ತಾರೆ. ಕೆಳಗಿನ ಭಾಗದಲ್ಲಿ ಅರ್ಧ ಲೀಟರ್‌ನಷ್ಟು ಸೀಮೆಎಣ್ಣೆ ತುಂಬಿಸಿದರೆ ಮಧ್ಯದಲ್ಲಿ ದೀಪಕ್ಕಾಗಿ ಬಟ್ಟೆಯ ಬತ್ತಿ ಟೇಪ್ ಇರುತ್ತದೆ. ಇದನ್ನು ದೊಡ್ಡದಾಗಿ ಮಾಡಲು ಸಣ್ಣದಾಗಿ ಉರಿಸಲು ಬದಿಯಲ್ಲಿ ಕೀಲಿ ಇದೆ. ನಂದಿ ಹೋಗದಂತೆ (ಗಾಳಿಗೆ) ಗಾಜಿನ ಕುಪ್ಪಿ ಇದೆ. ಕುಪ್ಪಿಯನ್ನು ಹೊರ ತೆಗೆದು ಮಸಿಯನ್ನು ಸ್ವಚ್ಛಗೊಳಿಸಲು ಕ್ಲಿಪ್ ವ್ಯವಸ್ಥೆ ಇರುತ್ತದೆ. ಇದನ್ನು ರಾತ್ರಿ ವೇಳೆ ಮನೆಬೆಳಕಿಗೆ ಹಾಗೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಕಾಲ್ನಡಿಗೆಯಲ್ಲಿ ರಾತ್ರಿ ವೇಳೆಗೆ ಹೋಗಲು ತುಂಬಾ ಜನರು ಬಳಸುತ್ತಿದ್ದರು.







**ತೇಮಗದೆ ಮುಟ್ಟು** : ಮನೆಯಲ್ಲಿ ನೆಂಟರು ಬಂದಾಗ, ಹಬ್ಬದ ದಿನಗಳಲ್ಲಿ ಸೇಮೆಗೆ (ತುಳುವಿನಲ್ಲಿ ತೇಮಗೆ) ಮಾಡುವುದು ಸಾಮಾನ್ಯ. ಅಕ್ಕಿಯನ್ನು ನೀರಿನಲ್ಲಿ ನೆನೆಹಾಕಿ ಕಡೆಯುವ ಕಲ್ಲಿನಲ್ಲಿ ಕಡೆದು ಬಾಣಲೆಯಲ್ಲಿ ಬೇಯಿಸಿ, ಉಂಡೆ ಕಟ್ಟಿ ಸೆಕೆ ಭರಿಸಿದ ಬಳಿಕ **"ತೇಮಗದೆ ಮುಟ್ಟು"**ವಿನಲ್ಲಿ ಇರುವ ಮಧ್ಯಭಾಗದ

ಲೋಟದಲ್ಲಿ ಹಾಕುತ್ತಾರೆ. ಅದಕ್ಕೆ ಸಣ್ಣ ಸಣ್ಣ ರಂಧ್ರವಿರುತ್ತದೆ. (ಲೋಟೆಗೆ) ಲೋಟೆಯಲ್ಲಿ ಹಾಕಿದ ಉಂಡೆಯನ್ನು ಮೇಲಿನ ಮರದ ಸಾಧನದಿಂದ ಒತ್ತಿದರೆ ಸಪೂರವಾಗಿ ಸೇಮಿಗೆ ಕೆಳಗೆ ಬೀಳುತ್ತದೆ. ಹಿಡಿಕೆಯಿಂದ ಒತ್ತಲು ಕೈಯನ್ನು ಬಳಸುತ್ತಿದ್ದರು. ಗಟ್ಟಿಯಾದರೆ ಹಿಡಿಕೆಯ ಮೇಲೆ ನಿಂತು ಒತ್ತುತ್ತಿದ್ದರು. ಇದನ್ನು **"ಲೋಟೆ"** ಹೊರತುಪಡಿಸಿ ಉಳಿದ ಎಲ್ಲಾ ಭಾಗ ಮರದಿಂದ ಮಾಡುತ್ತಿದ್ದರು.

<ins>**ಸಂಬಾರದ ಮರಾಯಿ**</ins> : ದಿನನಿತ್ಯದ ಸಾರು – ಸಾಂಬಾರು ಮಾಡಲು ಒಗ್ಗರಣೆ ಹಾಕಲು ಬೇಕಾದ ಮುಖ್ಯವಾದ ಸಾಸಿವೆ, ಕೊತ್ತಂಬರಿ, ಉದ್ದಿನಬೇಳೆ, ಮೆಣಸು, ಮೆಂತೆ, ಜೀರಿಗೆ ಮುಂತಾದ ವಸ್ತುಗಳನ್ನು ಹಾಕಿ ಇರಿಸುತ್ತಿದ್ದರು. ನಾಲ್ಕು ಅದೆ – 5 ಅದೆ ಇರುವ **"ಸಂಬಾರದ ಮರಾಯಿ"** (ಸಂಬಾರದ ಬಟ್ಟಲು) ಇರುತ್ತಿತ್ತು. ಇದನ್ನು ಒಂದೇ ಮರದಿಂದ ಕೆತ್ತಿ ಕೊರೆದು ರಚಿಸುತ್ತಿದ್ದರು. ಅದೆಗಳಿಲ್ಲದಿದ್ದರೆ ಉಪ್ಪು ಹಾಕಲು ಬಳಕೆ ಮಾಡುತ್ತಿದ್ದರು. ಉಪ್ಪಿನ ಕ್ಯಾ ಹಾಕುತ್ತಿದ್ದ ಮರಾಯಿಗೆ ಉಪ್ಪಡ್‌ದ ಮರಾಯಿ ಎನ್ನುತ್ತಾರೆ.







<ins>**ಅರ್ಕಂಜಿ ಮರಾಯಿ**</ins> : ಅಕ್ಕಿ ತೊಳೆದ ನೀರನ್ನು ಹಾಕಿ ಇಡಲು ಉಪಯೋಗಿಸುವ ಸಾಧನಕ್ಕೆ ತುಳುವಿನಲ್ಲಿ **"ಅರ್ಕಂಜಿ ಮರಾಯಿ"** ಎನ್ನುತ್ತಾರೆ. ಇದನ್ನು ಮರದಿಂದ ಕೆತ್ತಿ ಕೊರೆದು ಒಂದೇ ಮರದ ತುಂಡಿನಲ್ಲಿ ತಯಾರಿಸುತ್ತಿದ್ದರು. ತುಂಬಾ ತುಂಬಿದರೆ ಇಬ್ಬರು ಕೊಂಡೊಯ್ಯಲು ಸರಿಯಾದ ಹಿಡಿಕೆ ಇರುತ್ತದೆ. ಸಮಾರಂಭಗಳಲ್ಲಿ ಅನ್ನ–ಪಲ್ಯ ಬಡಿಸಲು ಇದರ ಬಳಕೆಯಾಗುತ್ತಿತ್ತು.




<ins>**ಅಲೆತ್ತ ಮಂತ್**</ins> : ಹಾಲು ಕುದಿಸಿ ರಾತ್ರಿ ತೊಟ್ಟು ಮಜ್ಜಿಗೆ ಹಾಕಿ, ಹೆಪ್ಪುವಿಗೆ ಇಟ್ಟು ಮರುದಿನ ಆದ ಮೊಸರಿನಿಂದ ಬೆಣ್ಣೆ ತೆಗೆಯಲು ಉಪಯೋಗಿಸುವ ಮರದ ಈ ಸಾಧನಕ್ಕೆ ತುಳುವಿನಲ್ಲಿ **"ಮಂತ್"** (ಅಲೆತ್ತ = ಮಜ್ಜಿಗೆಯ) ಎನ್ನುತ್ತಾರೆ. ಮೊಸರನ್ನು ಇದರಲ್ಲಿ ಕಡೆದರೆ ಬೆಣ್ಣೆ ಸುಲಭವಾಗಿ ಸಿಗುತ್ತದೆ.

<ins>**ಅರಿತ ಮುಡಿ**</ins> : ಸಮಗೊಳಿಸಿದ ಅಕ್ಕಿಯನ್ನು (ಮುಂಚಿನ ದಿನ ನೆನೆ ಹಾಕಿ ಮರುದಿವಸ ಒಣಗಿಸಿ ಕುಟ್ಟಿದರೆ ಬೆಳ್ತಿಗೆ ಅಕ್ಕಿ ಆಗುತ್ತದೆ). **"ಕುಚ್ಚಲು ಅಕ್ಕಿ"** ಮುಂಚಿನ ದಿನ ರಾತ್ರಿ ನೆನೆಹಾಕಿದ ಭತ್ತವನ್ನು ಮರುದಿನ ಬೆಳಿಗ್ಗೆ ಬೇಯಿಸಬೇಕು. ಬೇಯಿಸಿದ ಮೇಲೆ ಅಂಗಳದಲ್ಲಿ ಒಣಗಿಸಿ ತೆಗೆದು ಕುಟ್ಟಿದರೆ ಕುಚ್ಚಲು ಅಕ್ಕಿ ಆಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ 90 ಪಾಲು ಜನರು ಕುಚ್ಚಲು ಅಕ್ಕಿಯ ಅನ್ನವನ್ನೇ ಉಣ್ಣುತ್ತಾರೆ. ಇದು ದೇಹಕ್ಕೆ ತಂಪು ಆಹಾರ. ಈ ಅಕ್ಕಿಯನ್ನು 2 ಅಥವಾ 3 ವರ್ಷ ಹಾಳಾಗದಂತೆ ಜಾಗ್ರತೆಯಲ್ಲಿ ಇಡಲು ಅಕ್ಕಿ ಮುಡಿ **"ಅರಿತ ಮುಡಿ"**



(ತುಳು) ಕಟ್ಟುತ್ತಾರೆ. ಇದನ್ನು ಬೈ ಹುಲ್ಲಿನ ಸಹಾಯದಿಂದ ರಚಿಸುತ್ತಾರೆ. ಎಲ್ಲಾ ರೈತರ ಮನೆಗಳಲ್ಲೂ ಅಕ್ಕಿಮುಡಿ ಇರುತ್ತಿತ್ತು. ಇದರಲ್ಲಿ ಬೇರೆ ಬೇರೆ ಅಳತೆಯ ಅಕ್ಕಿಮುಡಿ ಇರುತ್ತದೆ. ಬೈ ಹುಲ್ಲನ್ನು ಸೂಡಿಮಾಡಿ ಕಟ್ಟಿ, ಕಟ್ಟಿದ ಭಾಗ ಒಳಗೆ ಬರುವಂತೆ ಸುತ್ತ ಬಿಡಿಸಿಟ್ಟು ಹುಲ್ಲನ್ನು ಹಾಕಿ ಅಕ್ಕಿ ಹಾಕುತ್ತಾರೆ. ಬಳಿಕ ಬೈ ಹುಲ್ಲಿನ ಹಗ್ಗದಿಂದ ಸುತ್ತುತ್ತಾ ಮೇಲಕ್ಕೆ ಮೇಲಕ್ಕೆ ತಂದು ಅಡ್ಡ-ನೀಟ ಹಗ್ಗದಿಂದ ಕ್ರಮವತ್ತಾಗಿ ಸುತ್ತಿ ರಚಿಸುತ್ತಾರೆ. ಇದನ್ನು ಕೆಲವೇ ರೈತರು ಮಾತ್ರ ಕಟ್ಟಲು ಸಮರ್ಥರಿರುತ್ತಿದ್ದರು.

**ಕಲಿತ ಗುರ್ಕೆ** : ತೆಂಗಿನಮರದಲ್ಲಿ ಹೂಬಿಟ್ಟ ಸಮಯ ಅದನ್ನು ತುಂಡು ಮಾಡಿ ಮಡಕೆಯಲ್ಲಿ ಅದರ ನೀರನ್ನು ಶೇಖರಿಸಿ ಇಡುತ್ತಾರೆ. ಶೇಖರಣೆ-ಯಾದ ನೀರನ್ನು ಒಂದು ದೊಡ್ಡ ಗುಡಾಣದಲ್ಲಿ ಶೇಖರಿಸಿ ಇಡುತ್ತಾರೆ. ಅದಕ್ಕೆ **"ಕಲಿತ ಗುರ್ಕೆ"** ಎನ್ನುತ್ತಾರೆ. ಕುಡಿಯಲು ಸಣ್ಣ ಪ್ರಮಾಣದ ಮಣ್ಣಿನ ಮಡಕೆ **"ಕುದುಪೆ"** ಎನ್ನುವ ಸಾಧನ ಬಳಸುತ್ತಿದ್ದರು. ಇದು ಒಂದು ಅಮಲು ಪಾನೀಯ. ರೈತರ ದಣಿವು ನಿವಾರಿಸಲು ಇದನ್ನು ಪಾನೀಯವಾಗಿ ಬಳಸುತ್ತಿದ್ದರು. ಹೆಚ್ಚಾಗಿ ಗಂಡಸರು ಮಾತ್ರ ಬಳಸುತ್ತಿದ್ದರು.




**ರೈಲು ಚೊಂಬು** : ಇದು ಹೆಚ್ಚಾಗಿ ತುಳುನಾಡಿನ ಬ್ರಾಹ್ಮಣ ಜನಾಂಗದವರು ಯಾತ್ರೆಗೆ ಬಳಸುತ್ತಿದ್ದ ಸಾಧನ. ಇದರಲ್ಲಿ ನೀರು ತುಂಬಿಸಿ ರೈಲು ಪ್ರಯಾಣದಲ್ಲಿ ಬಾಯಾರಿದಾಗ ಬಳಸುತ್ತಿದ್ದರು. ತುಪ್ಪ, ಎಣ್ಣೆಯನ್ನು ಕಾಯ್ದಿರಿಸಲು ಇದರ ಉಪಯೋಗವಾಗುತ್ತಿತ್ತು. ಕಂಚು, ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಂಗಳಲ್ಲಿ ಇದನ್ನು ರಚಿಸುತ್ತಾರೆ. ರೈಲಿನಲ್ಲಿ ಪ್ರಯಾಣಕ್ಕೆ ಇದರ ಬಳಕೆ ತುಂಬಾ ಇದ್ದುದರಿಂದ **"ರೈಲು ಚೊಂಬು"** (ತುಳು) ರೈಲು ತಂಬಿಗೆ ಎನ್ನುತ್ತಾರೆ.




**ಪೇರ್ ಅರ್ಪೆ** : ತೆಂಗಿನಕಾಯಿ ಒಡೆದು ಹೆರೆದ ಬಳಿಕ ಅದನ್ನು ಇಂತಹ ಬೀಳಲಿನ **"ಅರ್ಪೆ"** ಎಂಬ ಸಾಧನದಿಂದ ಒತ್ತಿ ಹಿಂಡಿ ಹಾಲು ತೆಗೆಯುತ್ತಿದ್ದರು. **ಪೇರ್** ಎಂದರೆ ಹಾಲು. (ತುಳು) ಇದನ್ನು ಬೀಳಲಿನ ಸಹಾಯದಿಂದ ನೇಯ್ದು ರಚಿಸುತ್ತಿದ್ದರು. ಹೆಚ್ಚಿನ ತುಳುವರ ಮನೆಯಲ್ಲಿ ಈ ಸಾಧನ ಬಳಕೆಯಾಗುತ್ತಿತ್ತು.




**ಚಲ್ಲ** : ನಾನು ಕಂಡಿರುವಂತೆ ಬ್ರಾಹ್ಮಣರ ಮನೆಯಲ್ಲಿ ದುಡ್ಡು ಹಾಕಿ ಇಡಲು ಬಳಸುತ್ತಿದ್ದ ತಾಮ್ರ ಅಥವಾ ಹಿತ್ತಾಳೆಯ ಡಬ್ಬಕ್ಕೆ ಚಲ್ಲ ಎನ್ನುತ್ತಿದ್ದರು. (ಅಂದು ಪೇಪರ್‌ನಿಂದ ರಚಿಸಿದ ನೋಟಿನ ಬಳಕೆ ಬಹಳ ಕಡಿಮೆ ಇತ್ತು. ಆಗರ್ಭ ಶ್ರೀಮಂತರಲ್ಲಿ ಮಾತ್ರ ನೋಟು ಇರುತ್ತಿತ್ತು). ಇದನ್ನು ಮುಚ್ಚಿ ಬೀಗ ಹಾಕಲು ವ್ಯವಸ್ಥೆ ಇತ್ತು. ಬೇರೆ ಬೇರೆ ಆಕಾರದಲ್ಲಿ ಇದು ಇರುತ್ತಿತ್ತು. (ವೃತ್ತ, ಆಯತ ಆಕಾರ ಹೀಗೆ)



**<u>ಬಂಗಾರ್‌ದ ಪೆಟ್ಟಿಗೆ</u>** : ಬಂಗಾರದ ಆಭರಣಗಳನ್ನು ಜೋಪಾನವಾಗಿ ಇಡಲು ಚಲ್ಲದಂತೆ ಇರುವ ಬೇರೆ ಬೇರೆ ಅದೆಗಳು ಇರುವ ಪೆಟ್ಟಿಗೆ ಬಳಸುತ್ತಿದ್ದರು. ಬಟ್ಟೆಯಲ್ಲಿ ಬಂಗಾರವನ್ನು ಸುತ್ತಿ ಇಂತಹ ಪೆಟ್ಟಿಗೆಯಲ್ಲಿ ಇರಿಸುವುದು ಕ್ರಮ. ಇದನ್ನು ತುಳುವಿನಲ್ಲಿ ಬಂಗಾರ್‌ದ ಪೆಟ್ಟಿಗೆ ಎನ್ನುತ್ತಾರೆ.




**<u>ಮರತ ರಾಟೆ</u>** : ತುಳುನಾಡಿನ ಪ್ರತಿ ಮನೆಯಲ್ಲೂ ಮನೆ ಕಟ್ಟುವ ಮೊದಲು ಬಾವಿ ತೋಡಿಸಿ ನೀರಿನ ವ್ಯವಸ್ಥೆ ಮಾಡಿಸುತ್ತಿದ್ದರು. ಬಾವಿ ತೋಡಿದ ಬಳಿಕ ಮನೆ ಕಟ್ಟುತ್ತಿದ್ದರು. ಶ್ರೀಮಂತ ವರ್ಗದ ಜನಾಂಗದವರು ಮಣ್ಣು ಬಾವಿಗೆ ಜರಿದು ಬೀಳದಂತೆ ಕಲ್ಲು ಕಟ್ಟಿಸುತ್ತಿದ್ದರು. ಬಾವಿಯಿಂದ ನೀರು ಮೇಲಕ್ಕೆತ್ತಲು ರಾಟೆ ಬೇಕೇಬೇಕು. ಮರದಿಂದ ತಯಾರಿಸುವ ಈ ರೀತಿಯ ರಾಟೆಗೆ ತೆಂಗಿನ ನಾರಿನಿಂದ ಮಾಡಿದ ಹಗ್ಗ ಬಳಕೆ ಮಾಡುತ್ತಿದ್ದರು. ಇದನ್ನು **"ಮರದ ರಾಟೆ"** ಎನ್ನುತ್ತಾರೆ.







**<u>ಮರತ ತೊಟ್ಟಿಲ್</u>** : ತುಳು ನಾಡಿನ ಸಂಸ್ಕೃತಿಯಲ್ಲಿ ತೊಟ್ಟಿಲು ಎಂಬುದು ಮನೆಯ ಒಂದು ಅಮೂಲ್ಯವಾದ ವಸ್ತು ಮತ್ತು ಸಂಪತ್ತು. ತೊಟ್ಟಿಲು ಮನೆಯಲ್ಲಿ ಇರುವುದು ಸೌಭಾಗ್ಯವೆನ್ನುವ ನಂಬಿಕೆ ಇದೆ. ಮಗು ಇಲ್ಲದ ಮನೆಯ ತೊಟ್ಟಿಲಲ್ಲಿ ತೆಂಗಿನಕಾಯಿ ಒಂದನ್ನು ಇಡುವ ಪದ್ಧತಿ. ಗೃಹಪ್ರವೇಶದ ಸಮಯದಲ್ಲಿ ತೊಟ್ಟಿಲನ್ನು ನೂತನ ಗೃಹದೊಳಗೆ ಕೊಂಡುಹೋಗುತ್ತಾರೆ. ಮಗು ಜನನವಾಗಿ ಏಳನೇ ದಿನದಲ್ಲಿ ಮಗುವನ್ನು ತೊಟ್ಟಿಲಿನಲ್ಲಿ ಇಟ್ಟು ಗೃಹಿಣಿಯರು ತೂಗುವ ಪದ್ಧತಿ ಈಗಲೂ ತುಳುನಾಡಿನಲ್ಲಿ ಇದೆ. ತೊಟ್ಟಿಲಿಗೆ ಹೂವಿನಿಂದ ಅಲಂಕಾರ ಮಾಡುತ್ತಾರೆ. ಮರದಿಂದ ಅಥವಾ ಹಿತ್ತಾಳೆಯಿಂದ ತೊಟ್ಟಿಲನ್ನು ತಯಾರಿಸುತ್ತಾರೆ.




**<u>ಮರತ ಕೈತಟ್ಟುಗ</u>** : ಇದನ್ನು ಮರದಿಂದ ರಚಿಸುತ್ತಾರೆ. ದೊಡ್ಡ ದೊಡ್ಡ ಪಾತ್ರೆಗಳಿಂದ ಅನ್ನ-ಪಲ್ಯಗಳನ್ನು ಇನ್ನೊಂದಕ್ಕೆ ಹಾಕಲು **ಮರತ ಕೈ ತಟ್ಟುಗ** (ತುಳು) ಇದನ್ನು ಬಳಸುತ್ತಾರೆ. ಸಮಾರಂಭಗಳ ಊಟದ ಸಮಯ ಬಡಿಸಲು ಇದರ ಉಪಯೋಗ ಕಂಡು ಬರುತ್ತದೆ.




**<u>ಕೈ ಮರಾಯಿ</u>** : ಕೈ ಮರಾಯಿಯನ್ನು ಒಂದೇ ಮರದಿಂದ ಕೆತ್ತಿ ಕೊರೆದು ರಚಿಸುತ್ತಿದ್ದರು. ಇದನ್ನು ದ್ರವ ಪದಾರ್ಥಗಳನ್ನು ದೊಡ್ಡ ಪಾತ್ರೆಯಿಂದ ಸಣ್ಣದಕ್ಕೆ ಹಾಕಲು ಬಳಸುತ್ತಿದ್ದರು. ಮನೆಗಳಲ್ಲಿ ಅಕ್ಕಿ ತೊಳೆದ ನೀರನ್ನು ಇದರಲ್ಲಿ ಹಾಕುತ್ತಿದ್ದರು. ಅಕ್ಕಚ್ಚು ಕುಡಿಯಲು ಹಸುಗಳಿಗೆ ಅನುಕೂಲವಾದ ಸಾಧನ.

**ಎಲಿತ ಪಂತ್** : ತುಳುವಿನಲ್ಲಿ ಹೇಳುವ ಈ ಸಾಧನ ಹೆಗ್ಗಣ ಹಿಡಿಯಲು ಬಹಳ ಅನುಕೂಲ. ಇದನ್ನು ಮರದಿಂದ ರಚಿಸುತ್ತಿದ್ದರು. ಚಿತ್ರದಲ್ಲಿ ತೋರಿಸಿದಂತೆ ಹಗ್ಗದ ತುದಿಗೆ ಆಹಾರ ಕಟ್ಟಿ ಇಡುತ್ತಿದ್ದರು. ಆಹಾರ ತಿನ್ನುವ ಆಸೆಯಲ್ಲಿ ಮರದ ಪೆಟ್ಟಿಗೆಯ ಒಳಗೆ ಬಂದ ಹೆಗ್ಗಣ ಆಹಾರವನ್ನು ಎಳೆದಾಗ ಹಗ್ಗ ಜಾರಿ ಅದರ ಇನ್ನೊಂದು ಬದಿಯ ಹಲಿಗೆ ಬಾಗಿಲಿನಂತೆ ಮುಚ್ಚುತ್ತದೆ. ಆವಾಗ ಹೆಗ್ಗಣಕ್ಕೆ ಹೊರ ಹೋಗಲಾಗುವುದಿಲ್ಲ. ರೈತನ ವೈರಿಯೆಂದೇ ಪರಿಗಣಿಸಲ್ಪಡುವ ಹೆಗ್ಗಣವನ್ನು ಆಮೇಲೆ ಕೊಲ್ಲುತ್ತಿದ್ದರು. ಹೆಗ್ಗಣದ ಸಣ್ಣ ಜಾತಿಯ ಇಲಿ ಅಂದರೆ **ಎಲಿತಪಂತ್** ಅಂದರೆ ಗೂಡು.




**ಓದುನ ಮುಕ್ಕಲಿಗೆ** : ಮರದ ಒಂದೇ ಹಲಿಗೆಯನ್ನು ಮಧ್ಯಭಾಗ ಸಿಗಿದು ಬಿಜಾಗ್ರಿಯಂತೆ ಇದನ್ನು ರಚಿಸುತ್ತಿದ್ದರು. ಇದನ್ನು ಬಿಡಿಸಿದ ಮೇಲೆ ಪುಸ್ತಕ ಇಟ್ಟು ಬ್ರಾಹ್ಮಣರು ಭಾಗವತ, ಮಹಾಭಾರತ, ರಾಮಾಯಣ ಓದುತ್ತಿದ್ದರು. ಇದನ್ನು ಮುಚ್ಚಿ ಇಡಲು ಆಗುತ್ತಿತ್ತು. ಈಗಲೂ ಕೆಲವು ಮಠ ಮಂದಿರಗಳಲ್ಲಿ ಬಳಕೆಯಾಗುತ್ತಿದೆ.




**ಉಜ್ಜೆರ್** : ಪ್ರತೀ ರೈತರ ಮನೆಯಲ್ಲೂ (ತುಳುನಾಡಿನ) ಅಂದು ಈ ವಸ್ತುವಿನ ಅಗತ್ಯ ಇರುತ್ತಿತ್ತು. **ಉಜ್ಜೆರ್** ಇದನ್ನು ಹುಣಸೆ ಮರದ ತಿರುಳಿನಿಂದ ರಚಿಸಿ ಕಬ್ಬಿಣದ ಹಲ್ಲುಗಳಂತಹ ಟೊಪ್ಪಿಯನ್ನು ಒಂದು ತುದಿಗೆ ಗಟ್ಟಿಯಾಗಿ ಜೋಡಿಸುತ್ತಿದ್ದರು. ನೆಲದಲ್ಲಿ ಕಪ್ಪು ಕಲ್ಲಿನಿಂದ ಮಾಡಿದ ಜ್ಯೂಲಿಯಾಕಾರದ ಕಲ್ಲಿನ ಸಾಧನವನ್ನು ನೆಲದಲ್ಲಿ (ನೆಲಕ್ಕೆ ಸಮತಟ್ಟಾಗಿ) ಹೂತು ಇಡುತ್ತಿದ್ದರು. ಈ ಹೂತಿರುವ ಕಲ್ಲಿನ ಜ್ಯೂಲಿಯ ಒಳಗೆ ಬೇಯಿಸಿ ಒಣಗಿಸಿದ ಭತ್ತ ಹಾಕಿ **'ಉಜ್ಜೆರ್'**ನಿಂದ ಹಲ್ಲಿನ ಭಾಗದಲ್ಲಿ ಸರಿಯಾಗಿ ಕುಟ್ಟಿದಾಗ ಭತ್ತದ ಸಿಪ್ಪೆ ಜಾರಿ ಅಕ್ಕಿ ಸಿಗುತ್ತಿತ್ತು. ಅಕ್ಕಿ ಮತ್ತು ಸಿಪ್ಪೆಯನ್ನು ಮತ್ತೆ ಬೇರ್ಪಡಿಸಬೇಕು. (ಬೆಳ್ತಿಗೆ ಅಕ್ಕಿಗಾದರೆ ಭತ್ತ ಬೇಯಿಸಬಾರದು, ನೆನೆ ಹಾಕಬೇಕು) ಇಬ್ಬರು ಹೆಂಗಸರು ಒಟ್ಟಾಗಿ ಕೂಡಾ ಕುಟ್ಟಬಹುದು.




**ಬಜಿಲ್ ಮೆದ್ದುನ ಜೆಡ್ಡೆ** : ಇದು ಅವಲಕ್ಕಿ ಕುಟ್ಟುವ ಜೆಡ್ಡೆ. 4 ಅಥವಾ 3 ಅಡಿ ಎತ್ತರವಿರುವ ಈ ಸಾಧನ ಅವಲಕ್ಕಿ ಮಾಡಲು ಬಳಕೆಯಾಗುತ್ತಿತ್ತು. ಭತ್ತವನ್ನು ಚೆನ್ನಾಗಿ ಹುರಿದು ಬಿಸಿಬಿಸಿ ಬತ್ತವನ್ನು ಜೆಡ್ಡೆಯ ಮಧ್ಯಭಾಗದ ಹೊಂಡದಲ್ಲಿ ಹಾಕಿ, ಕೂಡಲೇ ಬಲಾಯಿಯಲ್ಲಿ ಕುಟ್ಟಿದಾಗ ಅದು ಅವಲಕ್ಕಿ ಆಗುತ್ತಿತ್ತು. ಭತ್ತದ ಸಿಪ್ಪೆ ಹೋಗಿ ತೆಳುವಾದ ಅವಲಕ್ಕಿ ತಯಾರಾಗುತ್ತಿತ್ತು. ಬಿಸಿಬಿಸಿ ಅವಲಕ್ಕಿ ತಿನ್ನಲು ಎಷ್ಟು ರುಚಿ ಇರುತ್ತದೆ ಎಂದರೆ ನಾವು ಆವಾಗ ಜಗಳ ಮಾಡಿ ತಿಂದುದು ಈಗಲೂ ಬಾಯಲ್ಲಿ ನೀರೂರಿಸುತ್ತದೆ. ಅಂದು ನಾನು ಇದರ ಮೇಲೆ **'ಭೂತ'** (ಕುಣಿದ ಬಳಿಕ ವಿಶ್ರಾಂತಿಗಾಗಿ) ಕುಣಿಯುವಾತ ಕುಳಿತ್ತಿದ್ದುದನ್ನು ನೋಡುತ್ತಿದ್ದೆ.



<u>ಮೀನ್ ಪತ್ತುನ ಮಕ್ಕೆರಿ</u> : ಚಿತ್ರದಲ್ಲಿ ಇರುವ ಮೀನು ಹಿಡಿಯುವ ಸಾಧನವನ್ನು **"ಮಕ್ಕೆರಿ"** ಎನ್ನುತ್ತಾರೆ.1 ಇದನ್ನು ಬಿದಿರು ಸಲಾಕೆಗಳಿಂದ ರಚಿಸುತ್ತಾರೆ. ಮೀನುಗಳು ಗುಂಪಾಗಿ ಸೇರುವಂತೆ ತಿಂಡಿ ಹಾಕಿ ಅವುಗಳು ಒಟ್ಟಾದಾಗ ಇದನ್ನು ಒಮ್ಮೆಲೆ ಅವು ಹೊರಹೋಗದಂತೆ ಮುಚ್ಚುವುದು. ಬಳಿಕ ಮೇಲಿನ ತೂತಿನಿಂದ ಕೈ ಹಾಕಿ ಮೀನು ತೆಗೆಯುವುದು.2 ಚಿತ್ರದಲ್ಲಿ ತೋರಿಸಿದಂತೆ ಇದನ್ನು ನೀರು ಇಳಿದುಬರುವ ಜಾಗದಲ್ಲಿ ಇಟ್ಟರೆ ಇದಕ್ಕೆ ಬಿದ್ದ ಮೀನು ಹೊರಹೋಗಲಾಗದೆ ರೈತರಿಗೆ ಸಿಗುತ್ತಿತ್ತು. ಇದನ್ನು **ಮಕ್ಕೆರಿ** ಎನ್ನುತ್ತಾರೆ.




<u>ಕೈಗೋರಿ</u> : ಮರದಿಂದ ತಯಾರಿಸುವ **"ಕೈಗೋರಿ"**ಯನ್ನು ಅಕ್ಕಿ ಮಾಡಲು ಭತ್ತ ಬೇಯಿಸಿ ಒಣ ಹಾಕಿದಾಗ ಅದನ್ನು ಬಿಸಿಲಿಗೆ ಸರಿಯಾಗಿ ಹರಡಲು ಬಳಸುತ್ತಿದ್ದರು. ಭತ್ತ ಅಂಗಳದಲ್ಲಿ ಹರಡಿ ಗಂಟೆಗೊಮ್ಮೆ ಇದರ ಸಹಾಯದಿಂದ ಅಡಿ ಮೇಲು ಮಾಡಿದರೆ ಭತ್ತ ಚೆನ್ನಾಗಿ ಒಣಗುತ್ತಿತ್ತು. ಎರಡು ರೀತಿಯ **ಕೈಗೋರಿಗಳನ್ನು** ನಾನು ನೋಡಿದ್ದೇನೆ.







<u>ನಾಯೆರ್</u> : ಎರಡು ಎತ್ತು ಅಥವಾ ಕೋಣಗಳಿಂದ ಗದ್ದೆ ಉಳುವುದು ಕ್ರಮ. ಎತ್ತು, ಕೋಣಗಳು ದೂರದೂರ ಹೋಗದಂತೆ "ನೊಗ"ದ ಸಹಾಯದಿಂದ ಕುತ್ತಿಗೆಗೆ ಕಟ್ಟಿದ ಬಳಿಕ ಎತ್ತು ಕೋಣಗಳ ಮಧ್ಯಭಾಗದಲ್ಲಿ ನೊಗಕ್ಕೆ **ನೇಗಿಲು** ಕಟ್ಟಬೇಕು. ನೇಗಿಲಿಗೆ ತುಳುವಿನಲ್ಲಿ **"ನಾಯೆರ್"** ಎನ್ನುತ್ತಾರೆ. ನೆಲವನ್ನು ಸಿಗಿದುಕೊಂಡು ಹೋಗುವ ಈ ಸಾಧನಕ್ಕೆ ರೈತನಿಗೆ ಹಿಡಿದುಕೊಳ್ಳಲು ಸರಿಯಾದ ಹಿಡಿಕೆಯೂ ಇರುತ್ತದೆ.



<u>ಬೀಸ್‌ಕಲ್</u> : ದೋಸೆ, ಇಡ್ಲಿ ಮಾಡಲು ರವಾ, ಅಕ್ಕಿಹಿಟ್ಟು ಬೇಕಾಗುತ್ತದೆ. ಹೆಂಗಸರು ಅಕ್ಕಿಯನ್ನು ಇದರ ಮಧ್ಯಭಾಗದಲ್ಲಿ ಹಾಕಿ ಮೇಲಿನ ಕಲ್ಲನ್ನು ತಿರುಗಿಸಿದರೆ ಅಕ್ಕಿಯು ರವಾ ಆಗಿ ಹಿಟ್ಟಾಗಿ ಬೀಳುತ್ತದೆ. ಇದನ್ನು ಕಪ್ಪುಕಲ್ಲಿನಿಂದ ರಚಿಸುತ್ತಿದ್ದರು. ಎರಡು ಭಾಗವಾಗಿ ವಿಂಗಡಿಸಬಹುದು. ಕೆಳಕಲ್ಲಿಗೆ ಮಧ್ಯದಲ್ಲಿ ಗೂಟ ಗಟ್ಟಿಯಾಗಿ ಜೋಡಿಸಿ ಇಡುತ್ತಿದ್ದರು. ಮೇಲಿನ ಕಲ್ಲು ಗೂಟದಲ್ಲಿ ಸರಾಗವಾಗಿ ತಿರುಗುವಂತಿತ್ತು. ಮೇಲಿನ ಕಲ್ಲಿಗೆ ತಿರುಗಿಸಲು ಅನುಕೂಲವಾಗುವಂತೆ ಗೂಟ ಇರುತ್ತಿತ್ತು.

<u>ಕಡಂದಕಲ್</u> : ಕನ್ನಡದಲ್ಲಿ ಕಡೆಯುವ ಕಲ್ಲು ಎನ್ನುತ್ತಾರೆ. ಅಂದು ಎಲ್ಲರ ಮನೆಯಲ್ಲೂ ಅಡುಗೆಕೋಣೆಯಲ್ಲಿ ಒಂದು ಮೂಲೆಯಲ್ಲಿ ಇರುತ್ತಿದ್ದ ವಸ್ತು. ಪ್ರತಿ



ಮನೆಯವರು ತಿಂಡಿ ತಿನಸಿಗೆ, ಮಸಾಲೆಗೆ ಕಡೆಯಬೇಕಾದರೆ ಇದನ್ನೇ ಬಳಸುತ್ತಿದ್ದರು. ದೊಡ್ಡ ಸಂಸಾರದ ಮನೆಯಲ್ಲಿ ದೊಡ್ಡ ಗಾತ್ರದ ಕಡೆಯುವ ಕಲ್ಲು ಇರುತ್ತಿತ್ತು. ಇದರಲ್ಲಿ ಕಡೆಯುವುದೆಂದರೆ ತುಂಬಾ ಶ್ರಮವಹಿಸಬೇಕಾಗಿತ್ತು. ಮೇಲಿನ ಭಾಗವಾದ ಕಂಜಿಯನ್ನು ಎಡಕೈಯಿಂದ ತಿರುಗಿಸಬೇಕು. ಅಕ್ಕಿ ಮತ್ತು ನೀರು ಜೊತೆಯಾಗಿ ಕಂಜಿಯ ಬದಿಗೆ ಹಾಕಿ, ಬಲಕೈಯಿಂದ ಒಳ ತಳ್ಳಬೇಕು. ಹೀಗೆ ಅರ್ಧಗಂಟೆ, ಒಂದುಗಂಟೆ ದಿನಾ ಇದನ್ನು ಬಳಸಿದಾಗ ಹೆಂಗಸರಿಗೆ ತುಂಬಾ ವ್ಯಾಯಾಮ ಸಿಗುತ್ತಿತ್ತು. ಅಂದಿನ ಹೆಂಗಸರು 10–12 ಮಕ್ಕಳನ್ನು ಹೆತ್ತರೂ ಸಪೂರವಾಗಿ ಆರೋಗ್ಯವಂತರಾಗಿ ಕಾಯಿಲೆ ಇಲ್ಲದೆ ಇರಲು ಕಡೆಯುವ ಕಲ್ಲಿನ ಈ ಕೆಲಸವೇ ಕಾರಣ ಎಂದರೆ ತಪ್ಪಾಗದು.



**ಮರತ ಕೈ ತಟ್ಟುಗ : "ಕೈತಟ್ಟುಗ"** ಎಂದರೆ ಕನ್ನಡದಲ್ಲಿ **"ಕೈಸಟ್ಟುಗ"** ಎನ್ನಬಹುದು. ಇದನ್ನು ಒಂದು ಪಾತ್ರೆಯಿಂದ ಇನ್ನೊಂದಕ್ಕೆ ಹಾಕಲು ಊಟಕ್ಕೆ ಬಡಿಸಲು ಬಳಸುತ್ತಿದ್ದರು. ಮರದಿಂದ ತಯಾರಿಸಿದ ಇದನ್ನು ಬೇಕಾದಂತೆ ಬೇರೆ ಬೇರೆ ಆಕಾರ ಕೊಟ್ಟು ತಯಾರಿಸುತ್ತಿದ್ದರು.

**ಮರತ ಸುತ್ತಿಗೆ, ಬಡಾವುದ ಮಂತ್, ಬಚ್ಚಿರೆ ಗುದ್ದುನಕಲ್** : ಮರದ ಕೆಲಸದ ಆಚಾರಿಗಳಿಗೆ ಉಳಿಯನ್ನು ಬಡಿಯಲು ಬಳಸುತ್ತಿದ್ದ **ಮರದ ಸುತ್ತಿಗೆ,** ಸಣ್ಣ ಮಕ್ಕಳಿಗೆ ತಿಂದ ಅನ್ನ ಅಜೀರ್ಣವಾಗಬಾರದೆಂದು ತಟ್ಟೆಯಲ್ಲಿ ಅನ್ನ ಹಾಕಿ ಸಣ್ಣವಾಗಿ ಅರೆಯಲು ಬಳಸುವ ಮರದ ಸಾಧನ **ಮಂತ್,** ಕಡೆಯುವ ಕಲ್ಲಿನಂತೆ ಇರುವ ಸಣ್ಣ ಸಾಧನ ಬಚ್ಚಿರೆ, ತುಳು ಜನರ ಹವ್ಯಾಸವಾಗಿ ವೀಳ್ಯದೆಲೆ ಅಡಿಕೆ ಸುಣ್ಣ ತಿನ್ನುತ್ತಿದ್ದರು. ಪ್ರಾಯದ ಮುದುಕ ಮುದುಕಿಯರಿಗೆ ಅಡಿಕೆ ಪುಡಿಮಾಡಲು ಹಲ್ಲುಗಳಿಂದ ಕಷ್ಟವಾದಾಗ ಇಂತಹ ಕಲ್ಲು ಬಹಳ ಉಪಯೋಗ. ಮೇಲಿನ ಮರದ ಸಾಧನದಿಂದ ಅಡಿಕೆ ಗುದ್ದಿ ಪುಡಿ ಮಾಡಿ ವೀಳ್ಯದೆಲೆಯನ್ನು ತಿನ್ನುವ ಕ್ರಮ ಇತ್ತು. ಇದನ್ನು ತುಳುವಿನಲ್ಲಿ **ಬಚ್ಚಿರೆ ಗುದ್ದುನ ಕಲ್ ಎನ್ನುತ್ತಾರೆ.**




**ಬೆಲಸುನ ಮರಾಯಿ** : ಊಟ ಬಡಿಸುವ ಸಾಧನ. ಸಮಾರಂಭಗಳಲ್ಲಿ ಪಲ್ಯ–ಅನ್ನ ಬಡಿಸಲು ಅನುಕೂಲವಾಗುವಂತೆ ಇದನ್ನು ಮರದಿಂದ ತಯಾರಿಸುತ್ತಾರೆ. ಇಬ್ಬರಿಗೆ ಹಿಡಿಯಲು ಸರಿಯಾದ ಹಿಡಿಕೆ ಇರುತ್ತದೆ. ತುಳುವಿನಲ್ಲಿ **"ಬೆಲಸುನ ಮರಾಯಿ** ಎನ್ನುತ್ತಾರೆ.



**<u>ಚಪಾತಿ ಮಣೆ</u>** : ದುಂಡಗಿನ ಮರದ ಹಲಗೆ ಮಾಡಿ ಅದಕ್ಕೆ 3–4 ಸಣ್ಣದಾದ ಕಾಲು ಜೋಡಿಸಿದರೆ ಚಪಾತಿ ಮಣೆ ಆಗುತ್ತದೆ. ಚಪಾತಿ–ಹಪ್ಪಳ–ಹೋಳಿಗೆ ಮಾಡಲು ಈ ಮಣೆ ಅತೀ ಅಗತ್ಯ. **ಲಟ್ಟಣಿಗೆ** ಎಂದರೆ ಚಪಾತಿ ಹೋಳಿಗೆ ಹಿಟ್ಟನ್ನು ದುಂಡಗೆ ಆಕೃತಿಗೆ ತರಲು ಇದನ್ನು ಬಳಸುತ್ತಾರೆ. ಮಧ್ಯಭಾಗದಲ್ಲಿ ಹಿಟ್ಟಿನ ಉಂಡೆ ಇಟ್ಟು ಲಟ್ಟಣಿಗೆಯಿಂದ ಅಗಲ ಮಾಡುತ್ತಾ ಆಕಾರಕ್ಕೆ ತರುತ್ತಾರೆ.



**<u>ಬಜ್ಜೈ ಕತ್ತರಿ</u>** : ಒಣ ಅಡಿಕೆಯನ್ನು ಕತ್ತರಿಸಲು ಬಳಸುವ ಕಬ್ಬಿಣದ ಕತ್ತರಿಯಂತಹ ಸಾಧನ. ವೀಳ್ಯದೆಲೆ ತಿನ್ನುವ ಪ್ರತಿಯೊಬ್ಬರಲ್ಲೂ ಇಂತಹ ಕತ್ತರಿ ಇರುತ್ತಿತ್ತು. ತುಳುನಾಡಿನ ಹೆಚ್ಚಿನ ರೈತರು ವೀಳ್ಯದೆಲೆ ತಿನ್ನುವ ಹವ್ಯಾಸ ಇರಿಸಿಕೊಂಡಿದ್ದರು.





**<u>ತಿಪ್ಪಿದ ಸೌಟು</u>** : ಹಳ್ಳಿಯ ರೈತರೆಲ್ಲರ ಮನೆಯಲ್ಲೂ ಗೆರೆಟೆಯಿಂದ ತಯಾರಿಸಿದ ಸೌಟು ಬಳಕೆಯಾಗುತ್ತಿತ್ತು. ಸಾಂಬಾರ್ ಕದಡಿಸಲು, ಊಟ ಬಡಿಸಲು ಇದು ಅತೀ ಅಗತ್ಯ. ಇಂತಹ 7–8 ಸೌಟುಗಳು ಎಲ್ಲರ ಮನೆಯಲ್ಲೂ ಇತ್ತು. ಗೆರೆಟೆಗೆ ಎರಡು ತೂತು ತೆಗೆದು ಬಿದಿರಿನ ತೆಳು ಸಿಪ್ಪೆಯನ್ನು ಸಿಕ್ಕಿಸಿದರೆ ಸೌಟು ರೆಡಿ ಆಗುತಿತ್ತು.

**<u>ಬಾರ್‌ದ ತುಪ್ಪೆ</u>** : ರೈತರು ಬೆಳೆದ ಬತ್ತವನ್ನು ಜೋಪಾನವಾಗಿ ಒಂದೆರಡು ವರ್ಷ ಇಡಲು **"ತುಪ್ಪೆ"** ಬಳಸುತ್ತಿದ್ದರು. ಇದನ್ನು ಮನೆಯ ಅಂಗಳದಲ್ಲಿ ದೊಡ್ಡ ಗಾತ್ರದಲ್ಲಿ ರಚಿಸುತ್ತಿದ್ದರು. (ಶುದ್ಧಗೊಳಿಸಿದ ಬತ್ತ) ನೆಲದಲ್ಲಿ ಗೆದ್ದಲು ಬಾರದಂತೆ ಕಲ್ಲುಗಳನ್ನು ಇಟ್ಟು ಅಡ್ಡ – ನೀಟ ಮರದ ದಿಮ್ಮಿಗಳನ್ನು ಇಟ್ಟು ಬೈಹುಲ್ಲನ್ನು ಅಡಿಭಾಗಕ್ಕೆ ದಪ್ಪ ಹಾಸಿ ಬೈಹುಲ್ಲಿನ ಹಗ್ಗವನ್ನು ಸುತ್ತುತ್ತಾ ಮೇಲಕ್ಕೆ ತರುತ್ತಾರೆ. ಬೈಹುಲ್ಲಿನ ಅಡಿಬಾಗಕ್ಕೆ ದಪ್ಪ ಹಾಸಿ ಬೈಹುಲ್ಲಿನ ಹಗ್ಗವನ್ನು ಸುತ್ತುತ್ತಾ ಮೇಲಕ್ಕೆ ತರುತ್ತಾರೆ. ಬೈಹುಲ್ಲಿನ ದಪ್ಪ ಹೊರ ಕವಚ ಇದ್ದು ಗಾಳಿ ಸೋಕದಂತೆ ಹುಲ್ಲಿನ ಹಗ್ಗದಿಂದ ಕಟ್ಟುತ್ತಾ ಮೇಲೆ ಮೇಲೆ ತರುತ್ತಾರೆ. ಒಳಗಡೆ ಗೋಣಿ, ಗೋಣಿ ಬತ್ತ ಸುರಿಯುತ್ತಾರೆ. 40–50 ಗೋಣಿ ಬತ್ತದ ತನಕವೂ ಈ ತುಪ್ಪೆಯಲ್ಲಿ ಸುರಿಯುತ್ತಾರೆ. ಕೊನೆಗೆ ಹುಲ್ಲನ್ನು ದಪ್ಪ ಮುಚ್ಚಿ ಬೈಹುಲ್ಲಿನಿಂದ ಮಾಡಿನ ಆಕಾರದಲ್ಲಿ ಇಟ್ಟು ಕಟ್ಟುತ್ತಾರೆ. ಮಳೆನೀರು ಒಳಹೋಗದಂತೆ ಜಾಗೃತೆ ಮಾಡುತ್ತಾರೆ. ಅಕ್ಕಿ ತಯಾರಿಸಲಿಕ್ಕಾಗುವಾಗ ಇದನ್ನು ಕಾಲಿ ಮಾಡುತ್ತಾರೆ. **ಇದರ ಮಾದರಿ ಸೂರಿಂಜೆ ದೇವಸ್ಥಾನದಲ್ಲಿ ಈಗಲೂ ಇದೆ.**






**<u>ದಂಬೆಡ್ ನೀರ್ ತೇಪುನು</u> :** ರೈತರು ಕೆಳಗೆ ಇರುವ ತೋಡಿನ ನೀರನ್ನು ತಮ್ಮ ಮೇಲಿನ ಗದ್ದೆಗೆ ಹಾಕಲು ಕಂಡುಕೊಂಡ ಸುಲಭ ವಿಧಾನ. ಈಂದಿನ ಮರದಲ್ಲಿ ಅಡಿಕೆ ಮರದ ಗರಿಗಳಂತೆ ಹಾಳೆ ಸಹಿತ ಒಣಗುತ್ತದೆ. ಇಂತಹ ಈಂದಿನ ಮರದ ಹಾಳೆಯನ್ನು ಒಣಗಿಸಿ ಮಧ್ಯದಲ್ಲಿ ಮರಕ್ಕೆ ಹಗ್ಗ ಕಟ್ಟಿ ಜೋಡಿಸಿ ಎರಡೂ ಕೈಯನ್ನು ಬಳಸಿ ನೀರನ್ನು ಹಾಕುವ ವಿಧಾನ. (ಚಿತ್ರದ ಮೂಲಕ ಅರ್ಥೈಸಿಕೊಳ್ಳಿ) **"ದಂಬೆಡ್ ನೀರ್ ತೇಪನು"** ಎಂದು ತುಳುವಿನಲ್ಲಿ ಹೇಳುತ್ತಾರೆ.




**<u>ಕಳಸೆ ಕೋಲು</u> :** ಅಕ್ಕಿ–ಬತ್ತ ಅಳೆಯಲು ತುಳುನಾಡಿನಲ್ಲಿ ಕಳಸೆ ತುಂಬಾ ಬಳಸುತ್ತಿದ್ದರು. ಇದು ಒಂದು ಅಳತೆ ಸಾಧನ. ಮರವನ್ನು ಕೊರೆದು ಇದನ್ನು ರಚಿಸುತ್ತಿದ್ದರು. ಮೇಲ್ಭಾಗ ಸವೆಯದಂತೆ ತಾಮ್ರದ ತಗಡು ಸುತ್ತ ಹಾಕುತ್ತಿದ್ದರು. ಅಕ್ಕಿ, ಬತ್ತ ಹಾಕಿದ ಬಳಿಕ ಮೇಲ್ಭಾಗವನ್ನು ಸಮತಟ್ಟಾಗಿ ಮಾಡಲು ಕೋಲನ್ನು ಬಳಸುತ್ತಿದ್ದರು. ಬೇರೆಬೇರೆ ಅಳತೆಯ ಕಳಸೆ ಬಳಸುತ್ತಿದ್ದರು.




**<u>ಬೀಗದ ಪಲ್ಲೆ</u> :** ಶ್ರೀಮಂತರ ಮನೆಯಲ್ಲಿ ಮನೆಯ ಬಾಗಿಲಿಗೆ ಹಾಕುವ **"ಬೀಗದ ಪಲ್ಲೆ"** ಇದು. ಈ ಸಾಧನ ಈಗ ಪ್ರದರ್ಶನದಲ್ಲಿ ಮಾತ್ರ ವೀಕ್ಷಿಸಬಹುದು. ಸರಪಳಿಯ ಬಾಗಿಲಿನ ಚಿಲಕಕ್ಕೆ ಸಿಕ್ಕಿಸಿ ಇದಕ್ಕೆ ಬೀಗ ಹಾಕುತ್ತಿದ್ದರು.





Find out ...? (CHANDRA MOULESHWARA)

# ಧಾರವಾಡದಲ್ಲಿ ಹೋಟೇಲ್ ಸಪ್ಲಾಯರ್ ಆಗಿ ಚಿತ್ರಕಲಾ ಅಭ್ಯಾಸ

ಇಂಗ್ಲೀಷ್ ವಿಷಯದಲ್ಲಿ ದಡ್ಡನಾಗಿದ್ದ ನಾನು ಪಾಸಾದುದು ತುಂಬಾ ಆಶ್ಚರ್ಯ. ಪಾಸಾದ ಬಳಿಕ ನನ್ನ ಜೀವನದಲ್ಲಿ ಬದಲಾವಣೆಯಾಗಲು ಪ್ರಾರಂಭವಾಯ್ತು. ನನಗೆ ಚಿತ್ರಕಲೆಯಲ್ಲಿ ಆಸಕ್ತಿ. ಹಾಗಾಗಿ ತಂದೆಯವರು ನೀನೊಬ್ಬ ದಡ್ಡ, ನಿನ್ನನ್ನು ಮುಂದಕ್ಕೆ ಕಲಿಸಿದರೆ ನೀನು ಪಾಸಾಗಲಿಕ್ಕಿಲ್ಲ. ಹಾಗಾಗಿ **"ನೀನು ಹೊಟೇಲ್ ಸಪ್ಲೈ ಕೆಲಸ ಮಾಡಲು ಹೋಗು"** ಎಂದುಬಿಟ್ಟರು. ನಾನು ಕೂಗುತ್ತಾ ಕುಳಿತೆ. ನನ್ನ (ಮಲ್ಲಕ್ಕ) **ಸುಮತಿ ಅಕ್ಕನ ಗಂಡ ಪದ್ಮನಾಭ ಭಾವನ**ವರಿಂದ ಒಂದು ಕಾಗದ ನನಗೆ ಬಂತು. ಆ ಕಾಗದದ ಒಳಗೆ ಒಂದು ಸಣ್ಣ ಪೇಪರ್ ತುಂಡು ಇತ್ತು. ಆ ತುಂಡುಪೇಪರಿನಲ್ಲಿ ಚಿತ್ರಕಲಾಸಕ್ತರಿಗೆ ಧಾರವಾಡದಲ್ಲಿ ಇರುವ ಕಲಾ ಮಂದಿರದಲ್ಲಿ ಚಿತ್ರ ಕಲಿಯಲು ಅವಕಾಶ ಇದೆ ಎಂದು ಬರೆದಿತ್ತು. (ಆವಾಗ ಮಂಗಳೂರಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಾಗಿದ್ದ **"ನವಭಾರತ"** ದಿನ ಪತ್ರಿಕೆಯಲ್ಲಿ ಮೇಲಿನ ವಿಷಯ ಪ್ರಕಟಿತವಾಗಿತ್ತು.) "ರೋಗಿ ಬಯಸಿದ್ದು ಹಾಲು ಡಾಕ್ಟರ್ ಹೇಳಿದ್ದೂ ಹಾಲು" ಎಂಬಂತೆ ತಂದೆಯವರು ಹೇಳಿದ್ದು ಹೊಟೇಲಿಗೆ ಸೇರು ಎಂದು. ಹಾಗೆ ಹೊಟೇಲ್ ಸಪ್ಲೈ ಮಾಡಲು ಧಾರವಾಡಕ್ಕೆ ಹೋಗುವುದಾಗಿ ಅಮ್ಮನಲ್ಲಿ ಹೇಳಿದೆ. ಅಮ್ಮನ ಸಂಬಂಧಿಕರು ಪೆರಣಂಕಿಲದ **ಉಪೇಂದ್ರ ಭಟ್** ಎನ್ನುವವರು ಧಾರವಾಡದಲ್ಲಿ ಇರುವುದನ್ನು ತಿಳಿದ ನಾನು ಅವರ ವಿಳಾಸ ಹುಡುಕಿ ಅವರಿಗೆ ಒಂದು ಕಾಗದ ಬರೆದೆ. ನಾನು ಧಾರವಾಡಕ್ಕೆ ಬಂದರೆ ಹೊಟೇಲ್ ಸಪ್ಲೈ ಕೆಲಸ ತೆಗೆಸಿ ಕೊಡುತ್ತೀರಾ? ಎಂದು. ಒಂದು ವಾರದಲ್ಲಿ ಖಂಡಿತಾ ಬಾ ಎಂದು ಅವರ ಕಾಗದ ಬಂತು. ಅಮ್ಮನಲ್ಲಿ 25 ರೂಪ್ಯಾ ಬೇಡಿ ಪಡೆದು ತಂದೆಯವರಲ್ಲೂ ಹೇಳದೆ ಮನೆಯಿಂದ ತಗಡಿನ ಟ್ರಂಕ್‌ನಲ್ಲಿ ನನಗೆ ಬೇಕಾದ ಚಡ್ಡಿ, ಅಂಗಿ ತುಂಬಿಸಿಕೊಂಡು **"ಪರಾರಿಯಾದೆ"**. ನನಗೆ ಆವಾಗ 18 ವರ್ಷ ಪ್ರಾಯ.

ಉಡುಪಿಯಲ್ಲಿ **ಹುತೇಶ್** ಬಸ್ಸು ಹರಿಹರಕ್ಕೆ ಹೋಗುವುದಿತ್ತು. ಅದರಲ್ಲಿ ಹೋದರೆ ಧಾರವಾಡಕ್ಕೆ ರೈಲು ಸಿಗುವುದಾಗಿ ಒಬ್ಬರು ಹೇಳಿದರು. ಧಾರವಾಡಕ್ಕೆ ಹೋಗುವ ಪ್ರಯಾಣಿಕರ ಜೊತೆ ಮಾತನಾಡಿ ಗೆಳೆತನ ಮಾಡಿಕೊಂಡೆ. ಹುತೇಶ್ ರಾತ್ರಿ 8 ಗಂಟೆಗೆ ಹರಿಹರಕ್ಕೆ ಹೊರಟಿತು. ರಾತ್ರಿ 12 ಗಂಟೆಗೆ ಬಸ್ಸು ಪಶ್ಚಿಮ ಘಟ್ಟದಲ್ಲಿ ಮಧ್ಯದಲ್ಲಿ ನಿಂತು ಬಿಟ್ಟಿತು. ಘಾಟಿಯ ಮಧ್ಯದಲ್ಲಿ ರಸ್ತೆಗೆ ಮಣ್ಣು ಜರಿದುಬಿದ್ದು ಬಸ್ಸು ಮುಂದಕ್ಕೆ ಹೋಗುವುದಿಲ್ಲ ಎಂದು ಡ್ರೈವರ್ ಹೇಳಿದಾಗ ಎಲ್ಲರೂ ಕಂಗಾಲಾದರು. ನನ್ನ ಜೊತೆಯಲ್ಲಿ ಧಾರವಾಡಕ್ಕೆ ಹೋಗುವವರು ನನ್ನಲ್ಲಿ ಟ್ರಂಕ್ ಹಿಡಿದುಕೋ, ಒಂದು ಪರ್ಲಾಂಗು ಮುಂದೆ ಹೋದರೆ ಬೇರೆ ಬಸ್ಸು ಇದೆ ಎಂದರು. ಅವರ ಅಭಿಪ್ರಾಯದಂತೆ ಟ್ರಂಕ್ ಎತ್ತಿಕೊಂಡು ರಾತ್ರಿ ತಿಂಗಳಬೆಳಕಿಗೆ ಅವರೊಂದಿಗೆ ಹೆಜ್ಜೆ ಹಾಕಿದೆ. ಆ ಕಡೆಯಿಂದ ಈ ಕಡೆಗೆ ಬರಲಾಗದ ಬಸ್ಸನ್ನು ಹಿಂದಕ್ಕೆ ತಿರುಗಿಸಿ ಇಟ್ಟಿದ್ದರು. ಎಲ್ಲರೊಂದಿಗೆ ನಾನೂ ಹತ್ತಿದೆ. ಹರಿಹರ ಸೇರಿದಾಗ ಬೆಳಿಗ್ಗೆ 6 ಗಂಟೆ. ಅವರೇ ರೈಲಿಗೆ ಟಿಕೇಟು ತೆಗೆಸಿಕೊಟ್ಟರು. ನನ್ನ ಜೊತೆಯಲ್ಲಿದ್ದವರ ಜೊತೆಗೆ ಧಾರವಾಡ ಸೇರಿದಾಗ ಸಂಜೆ 5 ಗಂಟೆ. ರೈಲ್ವೇ ಸ್ಟೇಷನಿನಲ್ಲಿ ಉಪೇಂದ್ರ ಮಾವನವರಿಗೆ ನನ್ನ ಪರಿಚಯ ಇಲ್ಲದಿದ್ದರೂ ಗುರುತು ಕೇಳಿಕೊಂಡು ಅವರೇ ನನ್ನನ್ನು ಕುದುರೆ ಟಾಂಗಾದಲ್ಲಿ ಅವರ ಮನೆಗೆ ಕರಕೊಂಡು ಹೋದರು. ತುಂಬಾ ಸೋತುಹೋಗಿದ್ದ ನಾನು ಉಂಡಕೂಡಲೇ ನಿದ್ರೆಗೆ ಹೋದೆ.

## ಜಿ.ಆರ್. ಉಪಾಧ್ಯಾಯರ (ವಿ)ಚಿತ್ರ ಜೀವನ

**ಉಪೇಂದ್ರ ಮಾವ** ಸಮಾರಂಭಗಳಿಗೆ ಅಡಿಗೆಗೆ ಹೋಗುವ ಬಡ ಕುಟುಂಬದವರು ಅವರು ಅತೀ ಸೌಜನ್ಯ, ಸಾದುಸ್ವಭಾವದ ಸದ್ಗುಣವಂತ ವ್ಯಕ್ತಿ. ಅವರ ಪತ್ನಿ **ವಸಂತಿ** ಅವರೂ ಆದರ್ಶ ದಂಪತಿಗಳಂತೆ ನನಗೆ ಕಾಣುತ್ತಿದ್ದರು. ಮಕ್ಕಳು ಐದು ಮಂದಿ, 3 ಜನ ಗಂಡು ಮಕ್ಕಳು, 2 ಜನ ಹೆಣ್ಣು ಮಕ್ಕಳು. ನಾನು ಅವರಲ್ಲಿಗೆ ಹೋದಾಗ ದೊಡ್ಡವನಿಗೆ 12–13ವರ್ಷ ಆಗಿತ್ತು ಅಷ್ಟೇ. ಅವನ ನಂತ್ರ ಇಬ್ಬರು ತಮ್ಮಂದಿರು, ಬಳಿಕ ಇಬ್ಬರು ತಂಗಿಯಂದಿರು. ಸಣ್ಣ ಮಗುವಿಗೆ 1–2 ವರ್ಷ ಆಗಿದ್ದಿರಬಹುದು. ಉಪೇಂದ್ರ ಮಾವ ಬಹಳ ಕಷ್ಟದಿಂದ ಮಕ್ಕಳನ್ನು ಸಾಕಿ ಬೆಳೆಸಬೇಕಾಗಿತ್ತು. ಅದರ ಮಧ್ಯದಲ್ಲಿ ನಾನೊಬ್ಬ ಅವರ ಸಂಸಾರದವನಾಗಿ ಸೇರಿಕೊಂಡೆ. ಅವರ ಮಕ್ಕಳಂತೆ ನನ್ನನ್ನೂ ನೋಡಿಕೊಂಡರು. ಅಂದು ಅವರ ಮಕ್ಕಳೊಂದಿಗೆ ಸೇರಿ ಚಹಾ ಬ್ರೆಡ್ ತಿಂದುದು ಇಂದಿಗೂ ಅವರನ್ನೆಲ್ಲಾ ನೆನಪಿಸುತ್ತದೆ. ಅವರ ಕಷ್ಟದ ಜೀವನ ನೆನೆಸುವಾಗ ಕಣ್ಣಲ್ಲಿ ನೀರು ಬರುತ್ತದೆ. ಸುರುವಿನ ಮಗ '**ಅಪ್ಪಿ**'ಗೆ ಸೌಖ್ಯ ಇರಲಿಲ್ಲ. ಉಪ್ಪು ತಿನ್ನುವ ಕಾಯಿಲೆ ಇತ್ತು. ಅಂಗಡಿ ಬಾಗಿಲಲ್ಲಿ ಗೋಣಿ ಚೀಲದಲ್ಲಿಟ್ಟಿದ್ದ ಉಪ್ಪು ಮುಷ್ಠಿ ಮುಷ್ಠಿಯಾಗಿ ತಿನ್ನುತ್ತಿದ್ದ. ಬಳಿಕ **ರಾಘವೇಂದ್ರ** ಅವನ ತಮ್ಮ **ಶ್ರೀನಿವಾಸ** ಹೆಣ್ಣು ಮಕ್ಕಳ ಹೆಸರು ಈಗ ಮರೆತಿದೆ. ಇವರು ಒಂದು ಸಣ್ಣ ಮನೆಯ ಮಾಳಿಗೆಯಲ್ಲಿ ಒಂದು ಕೊಠಡಿಯಲ್ಲಿ ಬಾಡಿಗೆಗೆ ಇದ್ದರು. ಅಲ್ಲೇ ಅಡಿಗೆ ಅಲ್ಲೆ ಬಾತ್ ರೂಂ, ಊಟ ಅಲ್ಲೇ ಮಲಗುವುದು.



ನನ್ನ ವಿನಂತಿಯ ಮೇರೆಗೆ ಅವರು ಬಾಡಿಗೆಗೆ ಇದ್ದ ಮನೆಯ ಹತ್ತಿರದ ಗಾಂಧೀ ಚೌಕದ ವೃತ್ತದ ಬಳಿ ಇದ್ದ ಹೊಟೇಲ್ **"ಆನಂದಭವನ"**ವನ್ನು ನಡೆಸುತ್ತಿದ್ದ **ಗುರುರಾಜ ಭಟ್ಟ**ರಲ್ಲಿ ಮಾತನಾಡಲು ನನ್ನನ್ನು ಕರಕೊಂಡು ಹೋದರು. ಗುರುರಾಜ ಭಟ್ಟರು ನನ್ನನ್ನು ಕೆಲಸಕ್ಕೆ ಸೇರಿಸಿಕೊಂಡರು. ಸಪ್ಲೈ ಕೆಲಸಕ್ಕೆ ಸೇರಿದೆ.  ಬೆಳಿಗ್ಗೆ 5 ಗಂಟೆಗೆ ಎದ್ದು ತಣ್ಣೀರುಸ್ನಾನ ಮಾಡಿ ಹೊಟೇಲ್ ದೇವರಿಗೆ ಪೂಜೆ ಮಾಡಿ 6 ಗಂಟೆಗೆ ಹೊಟೇಲ್ ಬಾಗಿಲು ತೆರೆಯುವ ಜವಾಬ್ದಾರಿ ನನ್ನದಾಗಿತ್ತು. 6 ಗಂಟೆಯಿಂದ ರಾತ್ರಿ 10 ಗಂಟೆಯ ತನಕ ಸಪ್ಲೈ ಕೆಲಸ ಮಾಡಲು ಒಪ್ಪಿಕೊಂಡು ಸೇರಿದೆ.

ಉಪೇಂದ್ರ ಮಾವನವರಲ್ಲಿ **"ಸ್ಕೂಲ್ ಆಫ್ ಆರ್ಟ್"** ಸಂಸ್ಥೆಯಲ್ಲಿ ಚಿತ್ರಕಲಾ ಅಭ್ಯಾಸಕ್ಕೆ ಸೇರುವ ನನ್ನ ಇಂಗಿತವನ್ನು ಹೇಳಿಕೊಂಡೆ. ಅವರು ನನ್ನನ್ನು ಅಲ್ಲಿಗೆ ಕರಕೊಂಡು ಹೋಗಿ ಮಾತನಾಡಿದರು. ಅಲ್ಲಿ **ತಾರಾ ಪವಾರ್** ಎನ್ನುವವರು ನನ್ನ ಬಗ್ಗೆ ತಿಳಿದುಕೊಂಡು ನನ್ನ ಚಿತ್ರಗಳನ್ನು ನೋಡಿ ಖುಷಿ ಪಟ್ಟರು. (ಡಿ.ಟಿ.ಸಿ.) ಡ್ರಾಯಿಂಗ್ ಟೀಚರ್ಸ್ ಕೋರ್ಸ್‌ಗೆ ಸೇರಲು ಆಗುವುದಿಲ್ಲ. ಡ್ರಾಯಿಂಗ್ ಗ್ರೇಡ್ ಪರೀಕ್ಷೆ ಮುಗಿಸಿದ ಬಳಿಕವೇ ಡಿ.ಟಿ.ಸಿ. ಮಾಡಲಾಗುತ್ತದೆ ಎಂದು ತಿಳಿಸಿದರು. ನನಗೆ ಸಂಬಳ ಬೇಡ 8ರಿಂದ 12ರ ತನಕ ನಾನು ಚಿತ್ರ ಕಲಿಯಲು ಅವಕಾಶ ಕೊಡಬೇಕಾಗಿ (ಆನಂದ ಭವನದ ಮಾಲಕರಲ್ಲಿ ಗುರುರಾಜ ಭಟ್ಟರಲ್ಲಿ) ಬೇಡಿಕೊಂಡೆ. ಅದಕ್ಕೆ ಅವರು ಒಪ್ಪಿಗೆ ಕೊಟ್ಟ ಬಳಿಕ ಅವರ ಅಭಿಪ್ರಾಯದಂತೆ 6ರಿಂದ 8ರ ತನಕ ಸಪ್ಲೈ ಮಾಡಿ 8ರಿಂದ


ರ್‍ಯಾಂಕ್ ಬಂದಾಗ ಪತ್ರಿಕೆಯವರಿಗೆ ಕೊಡಲು ತೆಗೆಸಿದ ಫೋಟೊ


ಶ್ರೀ ಡಿ.ವಿ. ಹಾಲಬಾವಿ (ನಾನು ಬಿಡಿಸಿದ್ದಲ್ಲ)

12ರ ತನಕ ಸ್ಕೂಲ್ ಆಫ್ ಆರ್ಟ್‌ಗೆ ಚಿತ್ರಕಲಾಭ್ಯಾಸಕ್ಕೆ ಹೋಗಿ 12ರಿಂದ ರಾತ್ರಿ 10ರ ತನಕ ಸಪ್ಲೈಯರ್ ಆಗಿ ದುಡಿದೆ. **1965ನೇ ನವೆಂಬರ್ ತಿಂಗಳಲ್ಲಿ ನಡೆದ ಕರ್ನಾಟಕ ರಾಜ್ಯ ಮಟ್ಟದ ಹಾಯರ್ ಗ್ರೇಡ್ ಪರೀಕ್ಷೆಗೆ ಕುಳಿತ ನನಗೆ ರಾಜ್ಯದಲ್ಲಿ 2ನೇ ರ್‍ಯಾಂಕ್ ಬಂತು.** ಧಾರವಾಡದ ವಾರ್ತಾ ಪತ್ರಿಕೆಗಳಲ್ಲಿ ನನ್ನ ಫೋಟೋದೊಂದಿಗೆ ರ್‍ಯಾಂಕ್ ಬಂದ ವಿಷಯ, ಸಪ್ಲೈಯರ್ ಆಗಿ ರ್‍ಯಾಂಕ್ ಬಂದ ಎಲ್ಲಾ ವಿಷಯ ಪ್ರಕಟವಾಯ್ತು. ಇದನ್ನು ನೋಡಿದ ನಮ್ಮ ಹೊಟೇಲ್ ಸಾಹುಕಾರರು ತುಂಬಾ ಸಂತೋಷಪಟ್ಟರು. ಕಲಾಮಂದಿರದ ಸ್ಥಾಪಕರಾಗಿದ್ದ **ಶ್ರೀಯುತ ಡಿ.ವಿ. ಹಾಲಬಾವಿ**ಯವರಂತೂ ನನ್ನನ್ನು ತನ್ನ ಮಗನಂತೆ ನೋಡಿಕೊಂಡರು. ಕಲಾ ಮಂದಿರದ ಎಲ್ಲಾ ಜವಾಬ್ದಾರಿ ನನಗಿತ್ತರು. 65 ವರ್ಷದ ಹಿರಿಯ ಗೌರವಾನ್ವಿತ ವ್ಯಕ್ತಿ ಅವರಾಗಿದ್ದರೂ ಬಹಳ ಸಜ್ಜನರಾಗಿದ್ದರು. ಸೌಮ್ಯ ಸ್ವಭಾವದಿಂದ ಆಪದ್ಬಾಂಧವ ಹಾಗೂ ಸದಾ ಸಹಾಯ ಹಸ್ತದವರಾಗಿದ್ದರು. ಧಾರವಾಡದ ಕೋರ್ಟಿನ ಎದುರಿಗೆ ಇದ್ದ **'ಬಸಪ್ಪ ಖಾನಾವಳಿ'** ಎಲ್ಲರಿಗೂ ಗೊತ್ತಿರುವ ಲಿಂಗಾಯಿತರ ಹೊಟೇಲ್. ಈ ಹೊಟೇಲ್‌ಗೆ ತಾಗಿ ಇದ್ದ ಕಟ್ಟಡವೇ ನಮ್ಮ **ಕಲಾಮಂದಿರ**. ನಮ್ಮ ಕಲಾಮಂದಿರದ ಒಂದು ತರಗತಿ ಬಸಪ್ಪ ಖಾನಾವಳಿ ಮಾಳಿಗೆಯಲ್ಲೇ ನಡೆಯುತ್ತಿತ್ತು. ನವೆಂಬರ್ ಗ್ರೇಡ್ ಪರೀಕ್ಷೆ ಬಳಿಕ ನಾನು ಪ್ರಥಮ ಡಿಪ್ಲೋಮಾ ಪರೀಕ್ಷೆಗೆ ಅಭ್ಯಾಸ ಪ್ರಾರಂಭಿಸಿದೆ. ರ್‍ಯಾಂಕ್ ಬಂದ ನನಗೆ ಡಿ.ವಿ. ಹಾಲಬಾವಿಯವರು ಚಿತ್ರಕಲಾಭ್ಯಾಸಕ್ಕೆ ಬೇಕಾದ ಪೈಂಟ್, ಪೇಪರ್, ಕ್ಯಾನ್‌ವಾಸ್ ಎಲ್ಲಾ ಉಚಿತವಾಗಿ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಹೊಟೇಲ್ ಮಾಲಕರಾದ ಗುರುರಾಜ ಭಟ್ಟರವರು ಸಂಜೆ 3ರಿಂದ 4ರ ತನಕ ಸಪ್ಲ್ಯಾ ಕೆಲಸಕ್ಕೆ ವಿಶ್ರಾಂತಿ ಕೊಟ್ಟರು. ಉಡುಪು ತೆಗೆಸಿಕೊಡುತ್ತಿದ್ದರು. ಖರ್ಚಿಗೆ ಸ್ವಲ್ಪ ಹಣ ಸಹ ಕೊಡುತ್ತಿದ್ದರು. 1 ಗಂಟೆ ವಿಶ್ರಾಂತಿ ವೇಳೆ ಟೈಪ್ ರೈಟಿಂಗ್ ತರಗತಿಗೆ ಸೇರಿಕೊಂಡು ಟೈಪ್ ರೈಟಿಂಗ್ ಜೂನಿಯರ್ ಪರೀಕ್ಷೆಗೆ ಅಭ್ಯಾಸ ಮಾಡಿದೆ. ತಿಂಗಳಿಗೆ ರೂ.5/– ಫೀಸ್ ಕಟ್ಟುತ್ತಿದ್ದೆ, ಜೂನ್ ತಿಂಗಳಲ್ಲಿ ಡಿಪ್ಲೋಮಾ ಪ್ರಥಮ ವರ್ಷದ ಪರೀಕ್ಷೆ ಮತ್ತು ಟೈಪ್ ರೈಟಿಂಗ್ ಪರೀಕ್ಷೆ ದಿನಾಂಕ ಒಟ್ಟಾಗಿ ಬಂದುದರಿಂದ ಟೈಪ್ ರೈಟಿಂಗ್ ಪರೀಕ್ಷೆಗೆ ಹಾಜರಾಗಲಿಲ್ಲ. ಪ್ರಥಮ ಡಿಪ್ಲೋಮಾ ಕಲಿಯಲು ಬರುತ್ತಿದ್ದ **ಈಶ್ವರ ಯನ್. ಹೆಗ್ಡೆ** ನನ್ನ ಆತ್ಮೀಯ ಗೆಳೆಯನಾದ. ಕುಮಟಾದ ಕಲ್ಲಬ್ಬೆಯ ಅವನ ಮನೆಗೆ ಒಮ್ಮೆ ಹೋಗಿ ಬಂದಿದ್ದೆ.

1966 ಜೂನ್ ತಿಂಗಳಲ್ಲಿ ಧಾರವಾಡದ ಕಲಾಮಂದಿರದಲ್ಲಿ ದ್ವಿತೀಯ ಪೈಂಟಿಂಗ್ ಡಿಪ್ಲೋಮಾ ಅಭ್ಯಾಸ ಹಾಗೂ ಡಿ.ಟಿ.ಸಿ. ಡ್ರಾಯಿಂಗ್ ಟೀಚರ್ ಕೋರ್ಸ್ ಅಭ್ಯಾಸಕ್ಕೆ ಸೇರಿದೆ. ಡಿ.ಟಿ.ಸಿ. ಮಾತ್ರ ಮಾಡಿದರೆ ಉದ್ಯೋಗ ಸಿಗುವುದು ಕಷ್ಟ ಎಂದು ಕೆಲವರು ಹೇಳಿದರು. ನನ್ನ ತಂಗಿ "ತ್ರಿವೇಣಿ" ಬಾಯಿ ಬಾರದ, ಕಿವಿ ಕೇಳದ ಕಿವುಡಿ ಹಾಗೂ ಮೂಕಿಯಾಗಿದ್ದಳು. ಇವಳಿಗೆ ಹೊಲಿಗೆ ಕಲಿಸುವ ಉದ್ಧೇಶದಿಂದ ಹೊಟೇಲಿನಲ್ಲಿ

ಸಂಜೆ 1 ಗಂಟೆ ವಿಶ್ರಾಂತಿ ಕೊಡುತ್ತಿದ್ದ ವೇಳೆ ಹೊಲಿಗೆ ಕಾಲೇಜಿಗೆ ಸೇರಿದೆ. **'ಭಾರತ್ ಟೈಲರಿಂಗ್ ಕಾಲೇಜು'** ಇಲ್ಲಿಗೆ ವಿರಾಮದ ವೇಳೆ ಹೋಗುತ್ತಿದ್ದೆ. ಇಲ್ಲಿಯ ಪ್ರಾಂಶುಪಾಲರು ಹೊಟೇಲ್ ಕೆಲಸ ಮಾಡುತ್ತಿದ್ದ ನನ್ನ ಪರಿಸ್ಥಿತಿ ತಿಳಿದು ಫೀಸು ಮಾಫಿ ಮಾಡಿದರು. ಅವರ ಅಣ್ಣ ಹೊಲಿಗೆ ವೃತ್ತಿ ಮಾಡುತ್ತಿದ್ದುದರಿಂದ ಅವರ ಬಳಿ ಧರ್ಮಾರ್ಥವಾಗಿ ಕಟ್ಟಿಂಗ್ ಮತ್ತು ಸ್ಟಿಚಿಂಗ್ ಕಲಿತುಕೊಳ್ಳುವಂತೆ ನನಗೆ ಸೂಚಿಸಿದರು. ನಾನು ಟೈಲರಿಂಗ್ ಕೋರ್ಸ್ ಮುಗಿಯುವ ತನಕ ಬಟ್ಟೆಗಾಗಿಯಾಗಲೀ ವಸ್ತುಗಳಿಗಾಗಲೀ ಒಂದಿಷ್ಟು ಖರ್ಚು ಮಾಡಲಿಲ್ಲ. ಬೆಳಿಗ್ಗೆ 5ಕ್ಕೆ ಎದ್ದು ಸ್ನಾನ, 6 ಗಂಟೆಗೆ ದೇವರ ಪೂಜೆ ಮುಗಿಸಿ ಹೊಟೇಲ್ ಬಾಗಿಲು ತೆಗೆದು 8ರ ತನಕ ಸಪ್ಲೈ ಮಾಡಿ 8ರಿಂದ 12ರ ತನಕ ಚಿತ್ರಕಲಾಭ್ಯಾಸ ಕಲಾಮಂದಿರದಲ್ಲಿ, ಬಳಿಕ ಸಂಜೆ 3ರ ತನಕ ಸಪ್ಲೈ ಮಾಡಿ, 3ರಿಂದ 4ರ ತನಕ ಭಾರತ್ ಟೈಲರಿಂಗ್ ಕಾಲೇಜಿನಲ್ಲಿ ಟೈಲರಿಂಗ್ ಕೋರ್ಸ್ ಮಾಡಿ ಸಂಜೆ 4ರಿಂದ 10ರ ತನಕ ಸಪ್ಲೈ ಮಾಡಿ, ರಾತ್ರಿ 10ರಿಂದ 12ರ ತನಕ ನನ್ನ ಗೆಳೆಯ ಐ.ಎನ್. ಹೆಗ್ಡೆ ಇಟ್ಟಿರುವ ಸ್ಟುಡಿಯೋದಲ್ಲಿ ಫಿಲ್ಮ್ ಟಚ್ಚಿಂಗ್ ಮಾಡಿಕೊಡುವ ಕೆಲಸ ಮಾಡಿಕೊಡುತ್ತಿದ್ದೆ. ಹೀಗೆ ಬಿಡುವಿಲ್ಲದೆ ದ್ವಿತೀಯ ಪೈಂಟಿಂಗ್ ಡಿಪ್ಲೋಮಾ, ಡ್ರಾಯಿಂಗ್ ಟೀಚರ್ಸ್ ಕೋರ್ಸ್, ಟೈಲರಿಂಗ್‌ನಲ್ಲಿ ಕಟ್ಟಿಂಗ್ ಮತ್ತು ಸ್ಟಿಚ್ಚಿಂಗ್ ಟೆಕ್ನಿಕಲ್ ಕೋರ್ಸ್ ಮುಗಿಸಿಕೊಂಡು ಊರಿಗೆ 1967 ಮೇ ತಿಂಗಳಲ್ಲಿ ಬಂದೆ.



**ಅಂದು (ಐ.ಎನ್. ಹೆಗ್ಡೆ) ಇಂದು**



**ಅಂದು (ನಾನು) ಇಂದು**

# 1965ರಿಂದ 1967 ಮೇ ತಿಂಗಳ ತನಕದ ಧಾರವಾಡದ ಮರೆಯಲಾಗದ ನೆನಪುಗಳು

**ಮರೆಯಲಾಗದ ಘಟನೆ:** ರಜಾ ಅವಧಿಯಲ್ಲಿ ನನ್ನ ಚಿಕ್ಕಪ್ಪ ಶ್ರೀನಿವಾಸ ಪದ್ಮಾವತಿಯವರ **ಮಗಳು ಪುಷ್ಪ ಅಕ್ಕ**ನವರಿಗೆ **ಕೇಶವ ಭಟ್** ನಿಂಜೂರು (ಕಾರ್ಕಳ) ಇವರೊಂದಿಗೆ ಮದುವೆ ಎಂಬ ವಿಷಯ ತಿಳಿದು ಊರಿಗೆ ಬಂದೆ. **'ಪುಷ್ಪ ಅಕ್ಕ'** ಅತೀ ಸುಂದರಿಯಾಗಿದ್ದರು. ಮದುವೆ ಪಡು ಮಠದ ವೆಂಕಟೇಶ್ ನಿಲಯದಲ್ಲಿ ಇತ್ತು. ಪುಷ್ಪಕ್ಕನ ಅಣ್ಣ ಕೃಷ್ಣಮೂರ್ತಿಯಣ್ಣ ಗುಲ್ಬರ್ಗಾದಲ್ಲಿ ಡಿಪ್ಲೋಮಾ ಕಲಿಯುತ್ತಿದ್ದರು. ಮೂರ್ತಿಯಣ್ಣನ ಸೂಚನೆಯ ಮೇರೆಗೆ ಹಲವಾರು ಮದುವೆಗೆ ಬೇಕಾದ ನಾಮ ಫಲಕ ನಾನೇ ಬರೆದು ಕೊಟ್ಟೆ. ನಿಂಜೂರು ಕೇಶವ ಭಾವನವರ ಔತಣಕ್ಕೂ ಹಾಜರಾದೆ. ಧಾರವಾಡದಿಂದ ಮದುವೆಗೋಸ್ಕರ ನಾನು ಬಂದುದನ್ನು ನನ್ನ ತಂದೆಯವರು ಇಷ್ಟಪಡದೆ ಧಾರವಾಡದಿಂದ ಬಂದ ನನಗೆ ಹಿಂದೆ ಹೋಗಲು ಬಸ್ಸು ಖರ್ಚಿಗಾಗಿ 10 ರೂ. ಕೇಳಿದ್ದಕ್ಕೆ ಕೊಡದೆ (ಆವಾಗ ಧಾರವಾಡಕ್ಕೆ ಹೋಗಲು ಬಸ್ಸಿಗೆ ರೈಲಿಗೆ 20 ರೂ. ಬೇಕಾಗಿತ್ತು) ಸಿಟ್ಟಾಗಿ ಬೈದರು. ನನಗೆ ದುಃಖ ತಡೆಯಲಾಗದೆ (ಪುಷ್ಪಕ್ಕನವರ ನಿಂಜೂರಿನ ಗಂಡನ) ಮನೆಯ ಒಂದು ಕೋಣೆಯಲ್ಲಿ ಅಳುತ್ತಾ ಕೂತದ್ದನ್ನು ಮದು ಮಗಳಾದ ಪುಷ್ಪಕ್ಕ ನೋಡಿ ಕನಿಕರದಿಂದ 10 ರೂಪಾಯಿ ಕೊಟ್ಟು ಸಮಾಧಾನ ಪಡಿಸಿದ್ದನ್ನು ಜೀವಮಾನದಲ್ಲಿ ಮರೆಯಲು ಸಾಧ್ಯವಿಲ್ಲ.

**ಮರೆಯಲಾಗದ ಘಟನೆ: ನಾನು ಸಪ್ಲಾ ಮಾಡುತ್ತಿದ್ದ ಹೊಟೇಲ್ ಆನಂದ ಭವನದಲ್ಲಿ :** ನಾನು ಸಪ್ಲೈಯರ್ ಆಗಿದ್ದರೂ ಕೆಲವೊಮ್ಮೆ ಸಾಹುಕಾರರು ಇಲ್ಲದಿದ್ದಾಗ ಅವರ ಮಗ **ಶೇಷಗಿರಿ** ಕ್ಯಾಶ್‌ನಲ್ಲಿ ನೋಡಿಕೊಳ್ಳುತ್ತಿದ್ದ ಅವನೂ ನಾನು ಸಾಮಾನ್ಯ ಒಂದೇ ಪ್ರಾಯದವರು. ಶೇಷಗಿರಿಯು ಇಲ್ಲದಿದ್ದರೆ ನಾನೇ ಕ್ಯಾಶ್ ನೋಡಿಕೊಳ್ಳುತ್ತಿದ್ದೆ. ಒಂದು ಮಧ್ಯಾಹ್ನದ ವೇಳೆ ನಾನು ಕ್ಯಾಶ್‌ನಲ್ಲಿದ್ದಾಗ ತಿಂಡಿ ಮಾಡುತ್ತಿದ್ದ **ಕರಿಯ** ತಿಂಡಿ ಕಾಯಿಸುವ ಎಣ್ಣೆ ಮುಗಿದಿದೆ 1 ಡಬ್ಬ ಎಣ್ಣೆಗೆ 80 ರೂ. ಕೊಡಿ ಎಂದು ನನ್ನಲ್ಲಿ ಕೇಳಿ ಕಾಲಿ ಡಬ್ಬ ಹಿಡಿದುಕೊಂಡು ನಮ್ಮ ಖಾಯಂ ಅಂಗಡಿಗೆಂದು ಹೋದ. ಸಂಜೆ 5 ಗಂಟೆಗೆ ಸಾಹುಕಾರರು ಬಂದಾಗ (ನಾನು ಎಣ್ಣೆಗೆ ಕೊಟ್ಟಿರುವ 80 ರೂ.ಯನ್ನು ಚೀಟಿಯಲ್ಲಿ ಬರೆದಿಟ್ಟಿದ್ದೆ) ಚೀಟಿ ನೋಡಿ ಕರಿಯ ಎಲ್ಲಿ? ಎಣ್ಣೆ ಎಲ್ಲಿ? ಎಂದು ಕೇಳಿದಾಗಲೇ ನನಗೆ ಕರಿಯನ ನೆನಪಾದುದು ಕೂಡಲೇ ನನ್ನನ್ನೇ ಸಾಮಾನಿನ ಅಂಗಡಿಗೆ ಕಳುಹಿಸಿದರು. ಅಲ್ಲಿ ಖಾಲಿ ಎಣ್ಣೆ ಡಬ್ಬಿ ಇಟ್ಟು ಕರಿಯ ರೈಲು ಹತ್ತಿ ಪರಾರಿಯಾಗಿದ್ದ. ಈ ವಿಷಯ ತಿಳಿದು ಸಾಹುಕಾರರು ನನಗೆ ತುಂಬ ಬೈದರು.

**ಮರೆಯಲಾಗದ ಘಟನೆ ಒಂದು ಅಷ್ಟಮಿ ದಿನ :** ನನಗೆ ಧಾರವಾಡದ ಕೆಲವು ಹೋಟೇಲಿನ ಮಾಲಕರ ಪರಿಚಯವಾಗಿತ್ತು. ಮಾರ್ಕೆಟ್ ರೋಡಿನಲ್ಲಿ **ದುರ್ಗಾಭವನ ಹೊಟೇಲಿನ** ಮಾಲೀಕರಾದ **ಸರಳಾಯರಿಗೆ** ನನ್ನ ಒಳ್ಳೆಯ ಪರಿಚಯವಾಗಿತ್ತು. ಅವರಿಗೆ ಗಂಡು ಮಕ್ಕಳಿರಲಿಲ್ಲ. ಹಾಗಾಗಿ ಅಷ್ಟಮಿ ದಿನ ರಾತ್ರಿ ಚಂದ್ರೋದಯಕ್ಕೆ ಅರ್ಘ್ಯ ಬಿಡಲು ನನ್ನನ್ನು ಕರೆದಿದ್ದರು. ಅವರಲ್ಲಿ ಎಲ್ಲರಲ್ಲಿಯೂ ಕೃಷ್ಣ ಜನ್ಮಾಷ್ಟಮಿ ಅರ್ಘ್ಯ ಬಿಡಿಸಿ ಊಟ ಮಾಡಿ ಹೋಟೇಲಿಗೆ ನಡಕೊಂಡು ಬರುತ್ತಿದ್ದೆ. ರಾತ್ರಿ 1 ಗಂಟೆಗೆ ಬರುವಾಗ ಇಬ್ಬರು ಪೋಲೀಸರು ನನ್ನನ್ನು ಹಿಡಿದು ಗದರಿಸಿದರು. **"ನೀನು ಕಳ್ಳ ನಿನ್ನನ್ನು ನಾವು ಬಿಡಲಿಕ್ಕೆ ಆಗುವುದಿಲ್ಲ, ಬಾ. ಪೋಲೀಸ್ ಸ್ಟೇಷನ್‌ನಿಗೆ"** ಎಂದು ಕೈ ಹಿಡಿದರು. ನಾನು ಜೋರಾಗಿ ಅಳಲು ಪ್ರಾರಂಭಿಸಿದೆ. ನನ್ನಲ್ಲಿರುವ ಆನಂದ ಭವನದ ಬೀಗದ ಕೈ ತೋರಿಸಿದೆ. ಬೀಗದ ಕೈ ಗೊಂಚಲನ್ನು ನೋಡಿದ ಅವರಿಗೆ ನನ್ನಲ್ಲಿ ಮತ್ತೂ ಹೆಚ್ಚು ಸಂಶಯ ಬಂತು. ನೀನು ಕಳ್ಳ ಸಂಶಯವೇ ಇಲ್ಲ ಎಂದರು. ಬಳಿಕ ನನ್ನ ಜೊತೆಗೆ ನನ್ನನ್ನು ಪರೀಕ್ಷಿಸಲು ಆನಂದ ಭವನಕ್ಕೆ ಬಂದರು. ಹೋಟೇಲ್ ಬಾಗಿಲು ತೆಗೆದ ಬಳಿಕ ಎಲ್ಲ ಸಪ್ಲಾಯರ್‌ಗಳಲ್ಲಿ ಕೆಲಸದವರಲ್ಲಿ ನನ್ನ ಬಗ್ಗೆ ಕೇಳಿದಾಗ ನಾನು ಅಲ್ಲಿಯವನೇ ಎಂದು ತಿಳಿದ ಬಳಿಕ ನನ್ನನ್ನು ಬಿಟ್ಟು ಹೋದರು.

**ಮರೆಯಲಾಗದ ಘಟನೆ "ವಸಂತಿ ಅತ್ತೆ ಮಕ್ಕಳನ್ನು ಊರಿಗೆ ಕಳುಹಿಸಿದ್ದು" :** ಉಪೇಂದ್ರ ಮಾವನ ಮನೆಯಲ್ಲಿ ಸ್ವಲ್ಪ ಸಮಯದಲ್ಲಿ ಇದ್ದಿದ್ದರೂ ಆದಿತ್ಯವಾರ ಹೋಟೇಲ್ ರಜೆ ಇರುವಾಗ ಅವರ ಮನೆಗೆ ತಪ್ಪದೇ ಹೋಗುತ್ತಿದ್ದೆ. ಹಾಗಾಗಿ ಎಪ್ರಿಲ್, ಮೇ ರಜೆಗೆ ಹೆಂಡತಿ ಮಕ್ಕಳನ್ನು ಊರಿಗೆ ಕಳುಹಿಸುವ ಉದ್ದೇಶದಿಂದ ಉಪೇಂದ್ರ ಮಾವ ನನಗೆ ಆ ಜವಾಬ್ದಾರಿ ಕೊಟ್ಟರು. ಬೊಂಬ್ಯಾಯಿಂದ ಶಿವಮೊಗಕ್ಕೆ ಹೋಗುವ ಟ್ರೈನಿನಲ್ಲಿ ಟಿಕೇಟ್ ಮಾಡಿ ಕಳುಹಿಸಿಕೊಡು ಎಂದರು. ಅವರ ಇಬ್ಬರು ಸಣ್ಣ ಮಕ್ಕಳು ಲಗೇಜು ಪೆಟ್ಟಿಗೆ, ಅತ್ತೆ ಇವರನ್ನು ಕರಕೊಂಡು ರೈಲ್ವೇ ಸ್ಟೇಷನಿಗೆ ಹೋದೆ, ರೈಲು ಬಂತು. ರೈಲಿನ ಅನುಭವ ನನಗೆ ಏನೂ ಇರಲಿಲ್ಲ. ಎಲ್ಲಾ ಡಬ್ಬದಲ್ಲೂ ಜನ ತುಂಬಿದ್ದರು. ಒಳಗೆ

ಹೋಗಲೂ ಸಾಧ್ಯವಾಗದಷ್ಟು ಜನ 3 ನಿಮಿಷ ಮಾತ್ರ ಟ್ರೈನ್ ನಿಲ್ಲುವುದು ನಾನು ಗಡಿಬಿಡಿಯಾದೆ. 2–3 ಬಾರಿ ಹಿಂದೆ ಮುಂದೆ ಓಡಾಡಿ ಜನ ತುಂಬಿರುವ ಡಬ್ಬದ ಕಿಟಕಿ ಮೂಲಕ ಲಗ್ಗೇಜು ಮತ್ತು ಎರಡು ಮಕ್ಕಳನ್ನು ಒಳಗೆ ಕೊಟ್ಟೆ, ಆವಾಗ ಟ್ರೈನ್ ಹೊರಡುವ ಸಿಗ್ನಲ್ ಕೊಟ್ಟಿತು. ಅತ್ತೆಯವರು ಹೊರಗೆ ಇದ್ದು ಒಳಗೆ ಹೋಗಲಾಗದೆ ಪ್ಲಾಟ್‌ಪಾರಂನಲ್ಲಿ ನಿಂತಿದ್ದರು.  ಅತ್ತೆಯವರನ್ನು ಆ ಡಬ್ಬಕ್ಕೆ ಹತ್ತಿಸಲಿಕ್ಕೆ ನನಗಾಗಲಿಲ್ಲ. ರೈಲು ಹೊರಟಿತು, ನಾನು ಕಂಗಾಲು ಮಕ್ಕಳು ಡಬ್ಬದಲ್ಲಿ ಅತ್ತೆ ಇಲ್ಲೆ ಉಳಿದರೆ ಗತಿ? ಹಾಗಾಗಿ ರೈಲಿನ ಕಿಟಿಕಿ ಸರಳು ಹಿಡಿದೆ. ರೈಲು ಹೊರಟಿತು ನಾನು ಜೋತಾಡಿದೆ ಏನು ಮಾಡುವುದೆಂದೇ ಗೊತ್ತಾಗದೆ ಬ್ರೇಕ್ ಚೈನ್ ಎಳೆಯಲು ಹೇಳಿದೆ. ಬ್ರೇಕ್ ಚೈನ್ ಎಳೆಯಲು ಹೇಳಿದ ಕೂಡಲೇ ಯಾರೋ ಪುಣ್ಯಾತ್ಮರು ಬ್ರೇಕ್ ಚೈನ್ ಎಳೆದರು. ಮಕ್ಕಳು ಹಾಗೂ ಲಗ್ಗೇಜು ಇದ್ದ ಡಬ್ಬದ ಕಿಟಕಿ ಸರಳು ಹಿಡಿದು ಜೋತಾಡಿಕೊಂಡೆ ಇದ್ದೆ. 100 ಮೀಟರ್‌ಗಳಷ್ಟು ಟ್ರೈನ್ ಸ್ಟೇಷನ್‌ನಿಂದ ಹೊರಬಂದಿತ್ತು. ಅದೇ ಡಬ್ಬದ ಬಳಿಗೆ ವಿಚಾರಣೆ ಮಾಡಲು ಗಾರ್ಡ್ ಮಾಸ್ಟರ್ ಬಂದರು. ನನ್ನನ್ನು ವಿಚಾರಿಸಿದರು, ವಿಷಯ ತಿಳಿಸಿದಾಗ ಅತ್ತೆಯವರನ್ನು ಬೇರೆ ಡಬ್ಬಕ್ಕೆ ಹತ್ತಲು ಹೇಳಿ ನನ್ನನ್ನು ಇದೇ ರೀತಿ ಹುಬ್ಬಳ್ಳಿ ತನಕ ಹೊರಗಡೆ ಜೋತಾಡಿಕೊಂಡೇ ಹೋಗಿ ಎಂದರು. 22 ಕಿಮೀ ದೂರ ಉಗಿಬಂಡಿಯ ಹೊಗೆಯಿಂದಾಗಿ ಹುಬ್ಬಳ್ಳಿ ಮುಟ್ಟಿದಾಗ ನನ್ನ ಉಡುಪು ಕಪ್ಪು ಕಪ್ಪಾಗಿತ್ತು. ನನ್ನ ಬಣ್ಣವೂ ಬದಲಾಗಿತ್ತು. ಅತ್ತೆ ಹಾಗೂ ಮಕ್ಕಳನ್ನು ಹುಬ್ಬಳ್ಳಿಯಲ್ಲಿ ಒಟ್ಟು ಕುಳ್ಳಿರಿಸಿ ಪ್ಲಾಟ್‌ಫಾರಂ ಟಿಕೇಟ್ ಇಲ್ಲದಿದ್ದರೂ ಟಿ.ಸಿಯವರಿಗೆ ನನ್ನ ಪರಿಸ್ಥಿತಿ ತಿಳಿಸಿದ್ದರಿಂದ ನನ್ನನ್ನು ಬಿಟ್ಟರು ಬಳಿಕ ಧಾರವಾಡಕ್ಕೆ ಬಂದು ಸ್ನಾನ ಮಾಡಿದೆ.

**<u>ಮರೆಯಲಾಗದ ಘಟನೆ</u> "ಆನಂದ ಭವನದಲ್ಲಿ ಕ್ಲೀನರ್ ಆಗಿ"** : 'ನಾಮ್ ಕೇ ವಾಸ್ತೇ' ನಾನು ಕೆಲವು ದಿನ **ಮೆನೇಜರ್** ಎಂದು ಕರೆಸಿಕೊಂಡ ಕಾಲ. ಕೆಲಸದವರನ್ನು ನೋಡಿಕೊಳ್ಳಬೇಕು, ಅವರು ತಪ್ಪು ಮಾಡಿದರೆ ಹೇಳಬೇಕು, ಗಿರಾಕಿಗೆ ಬೇಕಾದಂತೆ ವಿಚಾರಿಸುವ ಜವಾಬ್ದಾರಿ ನನ್ನದಾಗಿತ್ತು. ಆಗಾಗ ಕ್ಯಾಶ್ ನೋಡಿಕೊಳ್ಳಬೇಕಾಗಿತ್ತು. ಒಂದು ದಿನ ಕ್ಲೀನರ್ ಸರಿಯಾಗಿ ಕೆಲಸ ಮಾಡಲಿಲ್ಲ. ಅದನ್ನು ಕಂಡ ಸಾಹುಕಾರರು ನನ್ನನ್ನು ವಿಚಾರಿಸಿದರು. ಕ್ಲೀನರ್ ಸರಿಯಾಗಿ ಕೆಲಸ ಮಾಡದಿದ್ದರೆ ಅವರ ಸಂಬಳ ಕೊಟ್ಟು ಕಳುಹಿಸಿ ಎಂದರು. ಸ್ವಲ್ಪ ಸಮಯದ ನಂತರ ಒಂದು ದಿನ ಕ್ಲೀನರ್ ನನ್ನಲ್ಲಿ ಸ್ವಲ್ಪ ಅಸಭ್ಯವಾಗಿ ವರ್ತಿಸಿ ನಾನು ಹೇಳಿದ ಕೆಲಸ ಮಾಡಲಿಲ್ಲ. ಹಾಗಾಗಿ ಅವನನ್ನು ಕೆಲಸದಿಂದ ಸಂಬಳ ನೀಡಿ ಕಳುಹಿಸಿದೆ. ಮರುದಿನವೇ ಇನ್ನೊಬ್ಬ ಕ್ಲೀನರ್‌ಗೆ ಜ್ವರ ಪ್ರಾರಂಭವಾಯ್ತು. ಅವನೇ ಟೇಬಲ್ ಕ್ಲೀನ್ ಮಾಡಬೇಕು ಅಲ್ಲದೆ ಕಪ್ಪು ಬಸಿಗಳನ್ನು ತೊಳೆದು ಹಾಕಬೇಕು. ಗಿರಾಕಿ ಒಮ್ಮೆಲೇ ಬಂದಾಗ ಅವನಿಗೆ ತುಂಬ ಕಷ್ಟವಾಗುತ್ತಿತ್ತು. ಸಾಹುಕಾರರು ಬಂದಾಗ ಟೇಬಲ್ ತುಂಬ ತಿಂಡಿಪ್ಲೇಟ್ ಇತ್ತು. ಇದನ್ನು ಕಂಡು ಸಾಹುಕಾರರು ನನಗೆ ಗದರಿಸಿದರು. ಕ್ಲೀನರ್ ಎಲ್ಲಿ? ಎಂದು. ಒಬ್ಬನಿಗೆ ಜ್ವರ ಬಂದಿದೆ. ಇನ್ನೊಬ್ಬನನ್ನು ನಾನೇ ಕೆಲಸದಿಂದ ತೆಗೆದಿದ್ದೇನೆ ಎಂದೆ. ಇದನ್ನು ಕೇಳಿದ ಸಾಹುಕಾರರು ಹಾಗಾದರೆ ನೀವೇ ಕ್ಲೀನ್ ಮಾಡಿ



ಎಂದು ಬಿಟ್ಟರು. ಸಿಟ್ಟು ಹಾಗೂ ದುಃಖ ತಡೆಯಲಾರದೆ ನಾನೇ ಪ್ಲೇಟ್ ತೊಳೆಯಲು ಒಳಗೆ ಕುಳಿತೆ. ಧಾರವಾಡದಲ್ಲಿ **ವಿಜಯ ರೆಸ್ಟೋರೆಂಟ್** ಎಂಬುದು ವಿಜಯ ಸಿನೇಮಾ ಮಂದಿರಕ್ಕೆ ತಾಗಿಕೊಂಡಿತ್ತು. ಇದರ ಮಾಲಕರು ಉಡುಪಿಯ **ಶ್ರೀನಿವಾಸ ಆಚಾರ್** ಇಲ್ಲಿ ಮೆನೇಜರ್ ಆಗಿ ನನ್ನ ಬಾವ ಅಂದರೆ ಮಾವ ವಿಠಲದಾಸ ಆಚಾರ್ ಮತ್ತು ಜಲಜ ಅತ್ತೆಯವರ 2ನೇ ಮಗ **ಬಾಲಕೃಷ್ಣ ಆಚಾರ್** ಇದ್ದರು. ಅವರು ಕೆಲವೊಮ್ಮೆ ನನ್ನ ಕ್ಷೇಮ ತಿಳಿದುಕೊಳ್ಳಲು ಆನಂದ ಭವನಕ್ಕೆ ಬರುತ್ತಿದ್ದರು. ನಾನು ಪ್ಲೇಟ್ ತೊಳೆಯುವುದನ್ನು ಕಂಡ ಅವರ ಕಣ್ಣಲ್ಲೂ ನೀರು ಬಂತು.

**ಮರೆಯಲಾಗದ ಘಟನೆ "ಟೈಲರಿಂಗ್ ಪ್ರಾಕ್ಟಿಕಲ್ ಪರೀಕ್ಷೆ"** : ಭಾರತ್ ಟೈಲರಿಂಗ್ ಕಾಲೇಜಿನಿಂದ ಟೆಕ್ನಿಕಲ್ ಟೈಲರಿಂಗ್ ಕಟ್ಟಿಂಗ್ ಮತ್ತು ಸ್ಟಿಚಿಂಗ್ ಪರೀಕ್ಷೆಯಲ್ಲಿ ಅಂಬ್ರೆಲ್ಲಾ ಪ್ರಾಕ್ ಹೊಲಿದುಕೊಡಲು ಬಂದಿತ್ತು. ಪರೀಕ್ಷೆ ಎಂದು ಹೆದರುತ್ತಿದ್ದ ನನಗೆ ಗಡಿಬಿಡಿ ಹೆಚ್ಚು ಇತ್ತು. ಅಂಬ್ರೆಲ್ಲಾ ಪ್ರಾಕಿನಲ್ಲಿ 2 ಭಾಗ ಇದೆ. ಮೇಲಿನ ಬಾಡಿ ಬಟ್ಟೆ ಮತ್ತು 2ನೆಯದು ಲಂಗದ ಬಟ್ಟೆ, ಬಾಡಿ ಬಟ್ಟೆ ಅಳತೆ ಹಾಕಿ ಕತ್ತರಿಸಿ ಇಟ್ಟು ಲಂಗದ ಬಟ್ಟೆ, ಟೇಬಲ್ ಮೇಲೆ ಬಿಡಿಸಿಟ್ಟು ಡಾಯಗ್ರಾಂ ಹಾಕಿ ಲಂಗದ ಆಕಾರದಲ್ಲಿ ಕತ್ತರಿಸಿದೆ. ಕತ್ತರಿಸಿದಾಗ ಅಡಿಯಲ್ಲಿ ಇದ್ದ ಬಾಡಿ ಬಟ್ಟೆಯೂ ಕತ್ತರಿಸಿ ಹೋಯ್ತು. ಏನು ಮಾಡುವುದೆಂದು ಗೊತ್ತಾಗದೇ ಇದ್ದಾಗ ಕಣ್ಣಲ್ಲಿ ನೀರು ಬರಲು ಪ್ರಾರಂಭವಾಯ್ತು. ಇದನ್ನು ಕಂಡ ಸುಪರ್ ವೈಸರ್ ಹತ್ತಿರ ಬಂದು ವಿಚಾರಿಸಿದರು ಏನಾಯ್ತು? ಎಂದು. ವಿಷಯ ತಿಳಿದ ಅವರು ಹತ್ತಿರ ಇನ್ನೊಬ್ಬರಲ್ಲಿ ಹೆಚ್ಚಾಗಿ ಇದ್ದ ಬಟ್ಟೆಯನ್ನು ನನಗೆ ತೆಗೆಸಿ ಕೊಟ್ಟದ್ದರಿಂದ ಪ್ರಾಕ್ಟಿಕಲ್ ಪರೀಕ್ಷೆಯಲ್ಲಿ ಪಾಸಾಗುವಂತೆ ಆಯ್ತು.

**ಮರೆಯಲಾಗದ ಘಟನೆ "ಆನಂದ ಭವನ ಬಿಡಲು ಕಾರಣ"** : ಕೆಲವೊಮ್ಮೆ ಕ್ಯಾಶ್ ನೋಡುತ್ತಿದ್ದ ನನ್ನಲ್ಲಿ ಸಾಹುಕಾರರು ಆಗಾಗ ಹೇಳುತ್ತಿದ್ದರು. ವ್ಯಾಪಾರ ಸರಿ ಆಗುತ್ತಿದ್ದರೂ ಕ್ಯಾಶ್ ಸರಿಯಾಗಿ ಸಿಗುತ್ತಿಲ್ಲ ಎಂದು. ಈ ಮಾತು ನನಗೆ ತಂಬಾ ದುಃಖ ಕೊಡುತ್ತಿತ್ತು. ನಾನು ಸಾಹುಕಾರರು ಅಲ್ಲದೇ ಅವರ ಮಗ ಶೇಷಗಿರಿ ಮೂರು ಮಂದಿ ಕ್ಯಾಶ್ ನೋಡುತ್ತಿದ್ದೆವು. ನನಗೆ ಏನು ಮಾಡುವುದೆಂದೇ ತಿಳಿಯಲಿಲ್ಲ. ಚಹಾ ಮಾಡುತ್ತಿದ್ದದವರಲ್ಲಿ **ಭೋಜ** ಸಿ. **ಕಾಂಚನ**ನಲ್ಲಿ ವಿನಂತಿಸಿಕೊಂಡೆ. ಅದಕ್ಕೆ ನೀವು ಚಹಾ ಕುಡಿಯಲಿಕ್ಕೆ ಬರುವಾಗ ಕ್ಯಾಶ್ ಲೆಕ್ಕ ಮಾಡಿಟ್ಟು ಬನ್ನಿ ಚಹ ಕುಡಿದ ಬಳಿಕ ನೀವು ಕೂಡಲೇ ಲೆಕ್ಕ ಮಾಡಿ ನೋಡಿ ಎಂದು ಸಲಹೆ ಕೊಟ್ಟರು. ಅವರು ಹೇಳಿದಂತೆ ಮಾಡಿದೆ. ನಾನು ಚಹಾ ಕುಡಿಯುವ ವೇಳೆ ಸಾಹುಕಾರರ ಮಗ ಕ್ಯಾಶ್ ನೋಡಿದರು. ಬಳಿಕ ನೋಡಿದಾಗ 100 ರೂ. ಕಡಿಮೆ ಇತ್ತು. ಸಾಹುಕಾರರು ಬಂದಾಗ ಅವರಲ್ಲಿ ಎಲ್ಲಾ ವಿಷಯ ಹೇಳಿದೆ. ಅವರಿಗೆ ಶೇಷಗಿರಿಯಲ್ಲಿ ಸಂಶಯ ಬಂದು ಚಡ್ಡಿ ಅಂಗಿ ಕಿಸೆ ನೋಡಿದರು, ಚಡ್ಡಿ ಕಿಸೆಯಲ್ಲಿ 100 ರೂ. ನೋಟು ಇತ್ತು. ಇದರಿಂದ ಸಿಟ್ಟುಗೊಂಡ ಸಾಹುಕಾರರು ಸೇಷಗಿರಿಗೆ ಸಿಕ್ಕಾಬಟ್ಟೆ ಹೊಡೆದರು. ಶೇಷಗಿರಿಯವರು ಹಣವನ್ನು ಅವರ ಅಮ್ಮನಲ್ಲಿ ಕೊಡಲು ತೆಗೆದು ಕೊಂಡದ್ದನ್ನ ಕೂಗಿಕೊಂಡು ಹೇಳಿದಾಗಲೇ ಎಲ್ಲಾ ವಿಷಯ ತಿಳಿಯಿತು. ಇದರಿಂದ ನೊಂದ ನಾನು ಹೋಟೇಲ್ ಬಿಡುವ ನಿರ್ಧಾರ ಮಾಡಿ ರೈಲ್ವೇ ಸ್ಟೇಷನ್ ಬಳಿ ಇದ್ದ ಮಥುರಾ ಭವನಕ್ಕೆ ಕ್ಯಾಶರ್ ಆಗಿ ಕೆಲಸಕ್ಕೆ ಸೇರಿದೆ.

**ಮರೆಯಲಾಗದ ಘಟನೆ – "ಮಥುರಾ ಭವನದಲ್ಲಿ ಒಂದು ದಿನ" :** ಮಥುರಾ ಭವನದ ಸಾಹುಕಾರರ ಹೆಸರು **ಬಲರಾಮ ರಾವ್**. ಧಾರವಾಡ ರೆಸ್ಟೋರೆಂಟ್ ಧಾರವಾಡದ ಜನರೆಲ್ಲರಿಗೂ ಚಿರಪರಿಚಿತ ಹೋಟೇಲ್. ಅಲ್ಲಿಯ ಜನಾರ್ಧನ ರಾವ್, ಪುರುಷೋತ್ತಮ ರಾವ್, ಬಲರಾಮ ರಾವ್ ಇವರೆಲ್ಲಾ ಸಹೋದರರು. ಬಲರಾಮರಾಯರ ಹೋಟೇಲಿನಲ್ಲಿ ಸಪ್ಲೈ ಕೆಲಸಕ್ಕೆ ಸೇರಿದರೂ ನನ್ನನ್ನು ತನ್ನ ಮಕ್ಕಳಂತೆ ಮನೆಗೆ ಕರೆದು ಊಟ ಹಾಕುತ್ತಿದ್ದರು, ಕ್ಯಾಶ್ ನೋಡಿಕೊಳ್ಳಲು ಹೇಳುತ್ತಿದ್ದರು. ಬೆಳಿಗ್ಗೆ 4 ಗಂಟೆಗೆ ಎದ್ದು ಸ್ನಾನ ಮುಗಿಸಿ ಚಹಾ ಮಾಡುವವನ ಮನೆಗೆ ಹೋಗಿ ಅವನನ್ನು ಎಬ್ಬಿಸಿ ಕರಕೊಂಡು ಬಂದು 6 ಗಂಟೆಗೆ ಹೊಟೇಲ್ ಬಾಗಿಲು ತೆರೆದು ಕ್ಯಾಶ್ ನೋಡಿಕೊಳ್ಳುತಿದ್ದೆ. 8ರಿಂದ 12ರ ತನಕ ಸ್ಕೂಲ್ ಆಫ್ ಆರ್ಟ್ಸ್ ಇಲ್ಲಿ ಚಿತ್ರಕಲಾ ಅಭ್ಯಾಸ 12ರಿಂದ ರಾತ್ರಿ 8ರತನಕ ಮೆನೇಜರ್ ಆಗಿ, ಕೆಲವೊಮ್ಮೆ ಕ್ಯಾಶ್‌ಯರ್ ಆಗಿ, ಕೆಲವೊಮ್ಮೆ ಸಪ್ಲೈಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದೆ. ಒಂದು ದಿನ ರಾತ್ರಿ ಊಟ ಮುಗಿಸಿ ಚಡ್ಡಿ ಬನಿಯನ್ ಹಾಕಿಕೊಂಡು ಗೋಣಿ ಹಾಸಿ ಮಲಗಿದೆ. ಬೆಳಿಗ್ಗೆ 4 ಗಂಟೆಗೆ ಎದ್ದು ನೋಡುವಾಗ ಕಲಾ ಮಂದಿರಕ್ಕೆ ಹಾಕಿಕೊಂಡು ಹೋಗುತ್ತಿದ್ದ ನನ್ನ ಬಟ್ಟೆಗಳು, ಪುಸ್ತಕಗಳು, ವಸ್ತುಗಳು ಇಟ್ಟಿದ್ದ ಟ್ರಂಕ್ (ಕಬ್ಬಿಣದ ಪೆಟ್ಟಿಗೆ) ಇರಲಿಲ್ಲ. ಎಲ್ಲಾ ಕಡೆ ಹುಡುಕಿದರೂ ಸಿಗಲಿಲ್ಲ. ಒಬ್ಬ ಕೆಲಸದವನೂ ಕಾಣೆಯಾಗಿದ್ದ. ಆದ್ದರಿಂದ ನನಗೆ ತಿಳಿಯಿತು. ಅವನೇ ಕದ್ದುಕೊಂಡು ಹೋಗಿರಬೇಕು ಎಂದು. 8 ಗಂಟೆಗೆ ಸಾಹುಕಾರ್ ಬಲರಾಮರಾಯರು ನನ್ನ ದುರವಸ್ಥೆಯನ್ನು ಕಂಡು 2 ಜೊತೆ ಬಿಳಿ ಪೈಜಾಮ ಹಾಗೂ 2 ಜೊತೆ ಶರ್ಟ್ಸ್ ತರಿಸಿದರು. ಬಳಿಕ ಕಲಾ ಮಂದಿರಕ್ಕೆ ಹೋದೆ.

**ಮರೆಯಲಾಗದ ಘಟನೆ – "ಡ್ರಾಯಿಂಗ್ ಟೀಚರ್ ಟ್ರೈನಿಂಗ್‌ನಲ್ಲಿರುವಾಗ ಪಾಠ ಮಾಡಿದ ಮೊದಲ ದಿನ" :** ಸಪ್ಲೈಯರಾಗಿದ್ದ ನಾನು ಡಿ.ಟಿ.ಸಿಯಲ್ಲಿರುವಾಗ ನನಗೆ 10ನೇ ತರಗತಿಗೆ ಚಿತ್ರ ಕಲಿಸಲು ಪ್ರಥಮ ಪಾಠ ಬಾಸೆಲ್ ಮಿಷನ್ ಗರ್ಲ್ಸ್ ಹೈಸ್ಕೂಲಿನಲ್ಲಿತ್ತು. ತುಂಬಾ ಹೆದರಿಕೆಯಿಂದಲೇ ತಯಾರು ಮಾಡಿಕೊಂಡು ಬೇಕಾದ ಭೋದನೋಪಕರಣದೊಂದಿಗೆ ಹುಡುಗಿಯರಿರುವ 10ನೇ ತರಗತಿಗೆ ಪ್ರವೇಶ ಮಾಡಿದೆ. ಎಲ್ಲಾ ಹುಡುಗಿಯರು ಗೊಳ್ಳೆಂದು ನಗಾಡಿದರು. ನಾನು ಕಕ್ಕಾಬಿಕ್ಕಿಯಾದೆ. **"ಕುಳಿತುಕೊಳ್ಳಿ"** ಎಂದು ಹೇಳಿದೆ ಆವಾಗಲೂ ಎಲ್ಲರೂ ನಗಾಡಿದರು. ನಾನು ಪಾಠ ಪ್ರಾರಂಭಿಸಿದೆ. ಮುಂದುವರಿಸುತ್ತಾ ಉದ್ದೇಶ ಕರಿಹಲಗೆಯಲ್ಲಿ ಬರೆದೆ. **'ನೀರು ಹೊತ್ತಿರುವ ಹೆಂಗಸು'** ಎಂದು ಆವಾಗ ಪುನಃ ತರಗತಿ ಹುಡುಗಿಯರೆಲ್ಲಾ ನಗಾಡಿದರು. ಆವಾಗಲೂ ನಾನು ಗಡಿಬಿಡಿ, ಪಾಠ ಹೆದರಿಯೇ ಮುಂದುವರಿಸಿದೆ. ನನ್ನ ಕರಿಹಲಗೆ ಚಿತ್ರ ನೋಡಿ ಎಲ್ಲರಿಗೂ ಖುಷಿಯಾಯ್ತು ಎಂದು ಅವರೆಲ್ಲರ ಮುಖದಿಂದ ತಿಳಿಯಿತು. ಪಾಠ ಮುಗಿದ ನಂತರ ತರಗತಿ ಹಿಂದೆ ನನ್ನ ಪಾಠ ನೋಡಲು ಕುಳಿತ್ತಿದ್ದ ಶಿಕ್ಷಕಿಯವರಲ್ಲಿ ವಿದ್ಯಾರ್ಥಿನಿಯರು ನಗಾಡಿದ ಕಾರಣ ಕೇಳಿದೆ. ತರಗತಿ ಪ್ರವೇಶವಾದಾಗ ನನ್ನ ಬಿಳಿವೇಷ್ಟಿ ಮತ್ತು ಕಿವಿಯಲ್ಲಿದ್ದ ಆಭರಣಕ್ಕಾಗಿ ನಗು, **'ಕೂಡ್ರಿ'** ಎನ್ನಬೇಕಿತ್ತು. **'ಕುಳಿತುಕೊಳ್ಳಿ'** ಎಂದದ್ದಕ್ಕೆ ನಗು, 'ನೀರು ಹೊತ್ತಿರುವ ಹೆಣ್ಣುಮಗಳು ಎಂದು ಬರೆಯಬೇಕಾಗಿತ್ತು. ಹೆಂಗಸು ಎಂದು ದ.ಕ. ಜಿಲ್ಲೆಯ ಶುದ್ಧ ಕನ್ನಡದಲ್ಲಿ ಬರೆದೆ ಅದಕ್ಕೆ ನಗು.

## “ಫಲಿಮಾರು ಪ್ರೌಢಶಾಲೆಯಲ್ಲಿ ಚಿತ್ರಕಲಾ ಅಧ್ಯಾಪಕನಾಗಿ – ನನ್ನ ಜೀವನ” (5–6–1967 ರಿಂದ 16–7–1980)

ಉಡುಪಿ ತಾಲೂಕಿನ ತಾಲೂಕು ಬೋರ್ಡ್ ಹೈಸ್ಕೂಲ್‌ಗಳಲ್ಲಿ ಒಂದಾಗಿದ್ದ ಫಲಿಮಾರು ಹೈಸ್ಕೂಲುನಲ್ಲಿ ಚಿತ್ರಕಲೆ ಮತ್ತು ಹೊಲಿಗೆ ಅಧ್ಯಾಪಕನಾಗಿ ಸೇರಿದ ದಿನ. ಆವಾಗ ನನಗೆ 20 ವರ್ಷ. ನಾನು ಪಿಯುಸಿ ಹುಡುಗನಂತೆ ಇದ್ದೆ. ಫಲಿಮಾರು ಜೂನಿಯರ್ ಕಾಲೇಜು ಆದ್ದರಿಂದ ಪಿಯುಸಿ ಹುಡುಗರು ನನ್ನನ್ನು ಪಿಯುಸಿಗೆ ಸೇರಲು ಬಂದಿರುವ ಹುಡುಗನಂತೆ ನನ್ನಲ್ಲಿ ಮಾತನಾಡಿಸಿದರು. ಪ್ರಾರಂಭ ದಿನವಾದದ್ದರಿಂದ ನಾನು 9 ಗಂಟೆಗೆ ಹೋಗಿದ್ದೆ. ಸಿಬ್ಬಂದಿವರ್ಗ, ಶಿಕ್ಷಕ ವರ್ಗ ಯಾರೂ ಇಲ್ಲದ್ದರಿಂದ ವಿದ್ಯಾರ್ಥಿಗಳನ್ನು ಸ್ವಲ್ಪ ತಮಾಷೆಗೊಳಿಸಬೇಕೆಂದು ನಾನು ಪಿ.ಯು.ಸಿಗೆ ಸೇರಲು ಬಂದಿದ್ದೇನೆ ಎಂದೆ. ವಿದ್ಯಾರ್ಥಿಗಳು ನನ್ನ ಎಸ್.ಎಸ್.ಎಲ್.ಸಿ. ಮಾರ್ಕ್ಸ್‌ನ್ನು ನೋಡಿ ಸೀಟು ಸಿಗಬಹುದು ಎಂದು ಅವರೇ ತಿಳಿಸಿದರು. ಈಗ **‘ಪ್ರಾಂಶುಪಾಲರು’** ಬರುತ್ತಾರೆ. ಅವರು ಬಹಳ ಜೋರಿನವರು ಎಂದು ನನ್ನನ್ನು ಹೆದರಿಸಿದರು. 9–30ಕ್ಕೆ ಸರಿಯಾಗಿ (ದೀರ್ಘಕಾಯದ ವ್ಯಕ್ತಿತ್ವ, ಬಿಳಿ ಶರ್ಟ್, ಬಿಳಿ ಪಂಚೆಯ ಕಚ್ಚೆ, ಶರ್ಟ್, ಹೊರಗೊಂದು ಓಪನ್ ಕೋಟು ಕೈಯಲ್ಲಿ ಒಂದು ಕೊಡೆ ಎತ್ತರ ದೇಹ ನೋಡಿದರೆ ಯಾರಾದರೂ ಹೆದರುವ ವ್ಯಕ್ತಿತ್ವ. ಅವರೇ **ಶ್ರೀಯುತ ಗೋಪಾಲಕೃಷ್ಣ ಕೆದ್ಲಾಯರು.) ಪ್ರಾಂಶುಪಾಲರಲ್ಲಿ ನನ್ನ ನೇಮಕಕ್ಕೆ ಬರೆದುಕೊಟ್ಟೆ. 5–6–1967ರಂದು ನಾನು ಫಲಿಮಾರು ಪದವಿ ಪೂರ್ವ ಕಾಲೇಜಿನಲ್ಲಿ ಡ್ರಾಯಿಂಗ್ ಕಮ್ ಕ್ರಾಫ್ಟ್ ಟೀಚರ್ ಆಗಿ ಸೇರಿಕೊಂಡೆ.** ಟೀಚರ್ ರೂಮಿನ ಕುರ್ಚಿಯಲ್ಲಿ ಕುಳಿತ್ತಿದ್ದ ನನ್ನನ್ನು ಕಂಡು ಮೊದಲು ವಿಚಾರಿಸಿದ ವಿದ್ಯಾರ್ಥಿಗಳು ಕಂಗಾಲು. ನನಗೆ ಆವಾಗ 20 ವರ್ಷ, 8, 9 ಮತ್ತು 10ನೇ ತರಗತಿ ಹುಡುಗಿಯರಿಗೆ ಹೊಲಿಗೆ ಕಲಿಸಬೇಕಿತ್ತು. ಹುಡುಗರಿಗೆ ಮತ್ತು ಹುಡುಗಿಯರಿಗೆ ಸೇರಿ ಚಿತ್ರ ಕಲಿಸಬೇಕಿತ್ತು. 3 ಪಿರೇಯ್ಡ್ ಹೊಲಿಗೆ ಹಾಗೂ ಒಂದು ಪಿರೇಯ್ಡ್ ತರಗತಿ ಎಲ್ಲರಿಗೆ ಚಿತ್ರಕಲೆ ಕಲಿಸುತ್ತಿದ್ದೆ. ಇದೇ ರೀತಿ ಸುಮಾರು 13 ವರ್ಷ, 16–7–80ರ ತನಕ ಪಲಿಮಾರು ಶಾಲೆಯಲ್ಲಿ ಚಿತ್ರಕಲೆ ಕಲಿಸುತ್ತಿದ್ದರಿಂದ **‘ಡ್ರಾಯಿಂಗ್ ಮಾಸ್ಟ್ರ’** ಎಂಬ ಹೆಸರಿನಲ್ಲಿಯೇ ಎಲ್ಲರಿಂದ ಕರೆಸಿಕೊಳ್ಳುತ್ತಿದ್ದೆ.

ಫಲಿಮಾರಿನಲ್ಲಿ ವಸತಿಗಾಗಿ ಶ್ರೀಯುತ ವಾಸು ಶೆಟ್ರ ಮನೆಯ ಎದುರಿನಲ್ಲಿದ್ದ 7 ಕೊಠಡಿಗಳುಳ್ಳ ಕಟ್ಟಡದಲ್ಲಿ ಒಂದು ಕೊಠಡಿಯಲ್ಲಿ ನಾನಿದ್ದೆ. ಒಂದು ಅಂತಸ್ತಿನ ಆ ಕಟ್ಟಡದ ಮಾಳಿಗೆಯಲ್ಲಿ 7 ಕೊಠಡಿಗಳು ಸಾಲಾಗಿ ಇತ್ತು. ಆ 7 ಕೊಠಡಿಯಲ್ಲಿ ನಮ್ಮ ಸಂಸ್ಥೆಯ ಸಹೋದ್ಯೋಗಿ ಬಂಧುಗಳೇ ಇದ್ದುದು. ಎಲ್ಲರ ಹೆಸರು ನೆನಪಿಗೆ ಬಾರದಿದ್ದರೂ ಅತೀ ಆತ್ಮೀಯರಾಗಿದ್ದ ಬಹು ವರ್ಷ ಅಲ್ಲಿ ನೆಲೆಸಿದ್ದ 25 ವರ್ಷಕ್ಕಿಂತಲೂ ಹೆಚ್ಚು ವರ್ಷ **ಡ್ರಿಲ್ ಮಾಸ್ಟ್ರಾಗಿ** ಕೆಲಸ ನಿರ್ವಹಿಸಿದ **ಶ್ರೀಯುತ ಕೆ. ಗಣಪಯ್ಯ ಶೆಟ್ಟಿ** ಇವರು ಮೂಲತಹ ಕುಂದಾಪುರ ತಾಲೂಕಿನ ಕೋಟೇಶ್ವರದವರು. ಇವರ ಶಿಸ್ತುಬದ್ಧ ಜೀವನ ನನ್ನನ್ನು ತುಂಬ ಆಕರ್ಷಿಸಿತ್ತು.

**ಶ್ರೀ ಮಂದಾರ ಶೆಟ್ಟಿ ಕಟ್ಟೆ** ಇವರು ಸಾಯನ್ಸ್ ಕಲಿಸುತ್ತಿದ್ದರು. ವಾಸು ಶೆಟ್ರ ಮಗಳು ಕುಸುಮ ಎಂಬವರನ್ನು ಇವರು ಫಲಿಮಾರಿನಲ್ಲಿ ಅಧ್ಯಾಪಕರಾಗಿದ್ದಾಗಲೇ ಮದುವೆ ಆದರು. ಇವರು ಒಂದು ಕೊಠಡಿಯಲ್ಲಿದ್ದರು. **ಶ್ರೀ ನೀಲಯ್ಯ ಆಚಾರ್ಯರು**

ಮೂಲತಹ ಕಾರ್ಕಳ ತಾಲೂಕಿನ ನಿಟ್ಟೆ ಎಂಬ ಊರಿನವರು. ಇವರು ಎಂ.ಕಾಂ. ಆಗಿ ಕಾಮರ್ಸ್ ಕಲಿಸುತ್ತಿದ್ದರು. ಇವರು ನಿವೃತ್ತಿ ಆಗುವಾಗ ಬೆಳ್ಮಣ್ಣು ಪದವಿ ಪೂರ್ವ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ಇವರು ಒಂದು ಕೊಠಡಿಯಲ್ಲಿದ್ದರು. ಆವಾಗ ಮದುವೆ ಆಗಿರಲಿಲ್ಲ. ಇನ್ನೊಬ್ಬರು **ಚಂದ್ರಶೇಖರ ಶೆಟ್ಟಿ** ಇವರೂ ಮದುವೆ ಆಗಿರದ ಸಾಯನ್ಸ್ ಅಧ್ಯಾಪಕರು. ಇನ್ನು ಹಲವು ಮಂದಿ ಶಿಕ್ಷಕರು 5–6 ತಿಂಗಳಲ್ಲಿ ಇದ್ದು ವರ್ಗವಾಗಿ ಹೋಗುತ್ತಿದ್ದರು. ಅಂತವರಲ್ಲಿ **ಶ್ರೀಯುತ ಕರಲಿಂಗಣ್ಣವರ್, ಶ್ರೀಯುತ ಉಮೇಶರು, ಕೃಷ್ಣಪ್ಪರು** ನೆನಪಿನಲ್ಲಿ ಇದ್ದಾರೆ. ನಾನು ಇವರೆಲ್ಲರ ಜೊತೆಗೆ ಸಂತೋಷವಾಗಿ ಕಳೆದ ಅಂದಿನ ಜೀವನ ಬಹಳ ಆನಂದಮಯವಾಗಿತ್ತು.

ನನ್ನ ಸಹೋದ್ಯೋಗಿ ಬಂಧುಗಳನ್ನು ಸದಾ ನೆನಪಿಸಿಕೊಳ್ಳುತ್ತಾ ಇದ್ದೇನೆ. ನನ್ನ ಫಲಿಮಾರು ಶಾಲಾ ಶಿಕ್ಷಕನಾಗಿ ನೇಮಕವಾದ ಪತ್ರದಲ್ಲೇ ಬಿ.ಎ., ಬಿ.ಎಡ್ ಆಗಿದ್ದ **ಶ್ರೀಯುತ ಸಾಂತೂರು ಸದಾಶಿವರಾಯರು** ನೇಮಕವೂ ಆಗಿತ್ತು. ಸಾಂತೂರು ಸದಾಶಿವ ರಾಯರು ತುಂಬಾ ವಿದ್ವಾಂಸರು. ಇವರು ಪಡುಬಿದ್ರೆ ಬಳಿ ಪಾದೆಬೆಟ್ಟು ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಪುರಾಣ ವಾಚನ ಮಾಡಲು ಹೋಗುತ್ತಿದ್ದರು. ಅಲ್ಲದೆ ದಕ್ಷಿಣ ಕನ್ನಡದ ಶ್ರೇಷ್ಠ ಜಾನಪದ ಕಲೆ ಯಕ್ಷಗಾನದಲ್ಲಿ ರಾತ್ರಿ ವೇಳೆ ವೇಷ ಹಾಕಿ ವೇಷಧಾರಿಯಾಗಿ ಹಾಗೂ ತಾಳಮದ್ದಲೆಯಲ್ಲಿ ಅರ್ಥದಾರಿಯಾಗಿ ಆಸುಪಾಸಿನ ಊರಿನಲ್ಲಿ ಪ್ರಖ್ಯಾತಿ ಪಡೆದಿದ್ದಾರೆ.

**ಶ್ರೀ ಎಸ್. ಅರುಣಾಚಲ ಶೆಟ್ಟಿ** : ಇವರು ಮೂಲತಃ ಶಿರ್ವ ಮಂಚಕಲ್ಲಿನವರು. ದಿನಾ ಮಂಚಕಲ್ಲಿನ ತನ್ನ ಮನೆಯಿಂದ ಫಲಿಮಾರಿಗೆ ಬಂದು ಉಪನ್ಯಾಸಕರಾಗಿ ಕೆಲಸ ನಿರ್ವಹಿಸುತ್ತಿದ್ದರು. ಬಹಳ ಸಾದು ಸ್ವಭಾವದವರು. ಇಂಗ್ಲೀಷ್ ವಿಷಯ ಬೋಧಿಸುತ್ತಿದ್ದರು.

**ಶ್ರೀ ರಾಮ ಶೆಟ್ಟಿ** : ಶ್ರೀರಾಮ ದೇವರಂತೆ ಇವರು ಬಹಳ ಸಾಧು ಸ್ವಭಾವದವರು. ಚರಿತ್ರೆ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದವರು, ವಿದ್ಯಾರ್ಥಿಗಳ ಮನಸ್ಸನ್ನು ಎಂದೂ ನೋಯಿಸಿದವರಲ್ಲ.

**ಶ್ರೀ ಪಾಡುರಂಗ ಶೆಟ್ಟಿ** : ಬಪ್ಪನಾಡು ಗುತ್ತಿನವರಾದ ಇವರು ಮುಲ್ಕಿಯಿಂದ ದಿನಾ ಬರುತ್ತಿದ್ದರು. ಶಿಸ್ತಿನ ಸಿಪಾಯಿಯಂತೆ ಪ್ರೌಢ ಶಾಲಾ ಮಕ್ಕಳಿಗೆ ಸಾಯನ್ ಬೋಧಿಸುತ್ತಿದ್ದರು. ಅಲ್ಲದೆ ಇವರು ಯನ್.ಸಿ.ಸಿಯಲ್ಲೂ ಇದ್ದರು.

**ಶ್ರೀ ಸದಾಶಿವ ನಾಯ್ಕರ**ವರು ಮತ್ತು **ಶ್ರೀಮತಿ ಸುಗಂಧಿ**ಯವರು ಗಂಡ ಹೆಂಡತಿಯಾಗಿದ್ದು, ನಾಯ್ಕರು ಹಿಂದಿಯನ್ನೂ ಬೋಧಿಸುತ್ತಿದ್ದರೆ, ಸುಗಂಧಿ ಬಿ.ಎ.ಬಿ.ಎಡ್ ಶಿಕ್ಷಕಿ.

**ಶ್ರೀ ಮಹಾಬಲ ಅಡಿಗರು** ಕನ್ನಡ ಪಂಡಿತರಾಗಿದ್ದು ಅವರ **ಶ್ರೀಮತಿ ಸುವಾಸಿನಿ** ಬಿ.ಎ.ಬಿ.ಎಡ್ ಆಗಿ ಸಮಾಜ ಅಭ್ಯಾಸ ಬೋಧಕಿಯಾಗಿದ್ದರು.

**ಶ್ರೀ ಹಮೀದರು** ರಾಜಕೀಯ ವಿಷಯವನ್ನು ಪಿ.ಯು.ಸಿ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಇವರ ಮನೆ ಮುಲ್ಕಿಯಲ್ಲಿತ್ತು.

## ಚೂರಿಯಿಂದಾದ ಗಾಯ ಮಾಸಬಹುದು ಮಾತಿನಿಂದ ಮನಸ್ಸಿಗಾದ ಗಾಯ ಮಾಸಲಾರದು

ಶ್ರೀ **ವಿ.ಕೆ ಹೆಜಮಾಡಿ**ಯವರು ಹೆಜಮಾಡಿಯಿಂದ ದಿನಾ ಅವರಾಲಿಗಾಗಿ ನಡಕೊಂಡು ಬರುತ್ತಿದ್ದರು. ವಿದ್ಯಾರ್ಥಿಗಳು ಇವರನ್ನು ಕಂಡರೆ ತುಂಬಾ ಹೆದರುತ್ತಿದ್ದರು. ಇವರು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಗಣಿತಪಾಠ ಬೋಧಿಸುತ್ತಿದ್ದರು. **ತುಂಬಾ ಶಿಕ್ಷೆ ಕೊಡುತ್ತಿದ್ದರು. ಶ್ರೀಕರ ಲಿಂಗಣ್ಣವರ್, ಶ್ರೀ ಉಮೇಶ್, ಶ್ರೀ ತಿಮ್ಮಪ್ಪ, ಶ್ರೀ ಜಯರಾಮ್ ಶೆಟ್ಟಿ** ಸ್ವಲ್ಪ ಸ್ವಲ್ಪ ಸಮಯ ಕೆಲಸ ನಿರ್ವಹಿಸಿ ವರ್ಗವಾಗಿ ಹೋದವರು.

ಶ್ರೀ **ರಮಾನಂದ ಕಿಣಿ :** ಇವರು ಪಿ.ಯು.ಸಿ ತರಗತಿಗಳಿಗೆ ಕಾಮರ್ಸ್ ಕಲಿಸುತ್ತಿದ್ದರು, ಬೆಳ್ಮಣಿನಲ್ಲಿ ನಿವೃತ್ತರಾಗಿ ಈಗ ಹಾಸನದಲ್ಲಿದ್ದಾರೆ.

ಶ್ರೀ **ಸತ್ಯನಾರಾಯಣ ಭಟ್** ಇವರು ಮುಂಡ್ಕೂರಿನವರು ಉಪನ್ಯಾಸಕರಾಗಿ ಇದ್ದರು. ಅಲ್ಲೇ ಪ್ರಾಂಶುಪಾಲರಾಗಿ ನಿವೃತ್ತರಾದರು.

ಶ್ರೀ **ಭಾಸ್ಕರ ಶೆಟ್ಟಿ** : ಇವರು ಸ್ವಲ್ಪ ಸಮಯ ನಮ್ಮ ಶಾಲೆಯಲ್ಲಿ ಶಿಕ್ಷಕರಾಗಿ ಇದ್ದರೂ ಇವರನ್ನು ನಾವೆಲ್ಲ ಮರೆಯಲು ಸಾಧ್ಯವಿಲ್ಲ. ಯಾಕೆಂದರೆ ಇವರು ಒಳ್ಳೆಯ ನಾಟಕಕಾರರಾಗಿ, ನಿರ್ದೇಶಕರಾಗಿ ಇದ್ದು ನಮ್ಮೆಲ್ಲರನ್ನು ಉತ್ತೇಜನಗೊಳಿಸಿ ಸಂಸ್ಥೆಯ ಎಲ್ಲಾ ಸಹೋದ್ಯೋಗಿಗಳು ಸೇರಿ **"ಮಣ್ಣ್‌ದ ಮಗೆ"** ಎಂಬ ತುಳು ನಾಟಕ ಆಡಿದ್ದೆವು. ಈ ನಾಟಕದಲ್ಲಿ ಮುಖ್ಯ ಸ್ತ್ರೀ ಪಾತ್ರ ನನ್ನದಾಗಿತ್ತು. ಮುಖ್ಯ ಪುರುಷ ಪಾತ್ರ ಶ್ರೀ ರಾಮ ಶೆಟ್ಟಿ ಮಾಡಿದ್ದರು.

ಶ್ರೀ **ರಾಜೀವ ಶೆಟ್ಟಿ** : ಕರ್ನಿರೆಯಿಂದ ಬರುತ್ತಿದ್ದ ಬಿ.ಎ.ಬಿ.ಎಡ್ ಅಧ್ಯಾಪಕರು ಸಾಧು ಸ್ವಭಾವದವರು.

ಶ್ರೀ **ರಮಾನಂದ ಶೆಟ್ಟಿ** : ಇವರೂ ಕರ್ನಿರೆಯವರೇ ಇವರೂ ಸರಳ ಸಜ್ಜನರಾಗಿದ್ದರು.

ಶ್ರೀ **ಗುಂಡಾಲಗುತ್ತು ಮಹಾಬಲ ಶೆಟ್ಟರು** : ಪ್ರಾಂಶುಪಾಲರಾಗಿ ಕೆಲವು ವರ್ಷ ಕೆಲಸ ನಿರ್ವಹಿಸಿದ ಸಾಧು ಸ್ವಭಾವದ ಸೌಜನ್ಯಯುತರಾದ ವ್ಯಕ್ತಿ. ಬಸ್ಸಿನಲ್ಲಿ ಮುಲ್ಕಿಯಿಂದ ಫಲಿಮಾರಿಗೆ ಬರುತ್ತಿದ್ದರು.

ಶ್ರೀ **ಬಾಲಕೃಷ್ಣ ರಾವ್** : ನನ್ನ 36 ವರ್ಷದ ಸೇವೆಯಲ್ಲಿ ಇವರಂತಹ ಪ್ರಾಂಶುಪಾಲರನ್ನು ಕಾಣಲಿಲ್ಲ. ದೇವತಾ ಮನುಷ್ಯ. ಇವರು ಸಾಧು ಸ್ವಭಾವದವರಾಗಿದ್ದು, ನಿಷ್ಠಾವಂತರಾಗಿದ್ದು, ಮಕ್ಕಳ ಬೋಧನೆಯಲ್ಲಿಯೂ ಆಸಕ್ತಿ ತೋರಿಸುತ್ತಿದ್ದರು. ರಾತ್ರಿ 12 ಗಂಟೆ ತನಕ ಕ್ಲಾರ್ಕ್ ಇಲ್ಲದಿದ್ದರೂ ಕಛೇರಿಯ ತನ್ನ ಕೆಲಸವನ್ನು ದೇವರ ಕೆಲಸವೆಂದು ಜೀವನಪರ್ಯಂತ ನಿರ್ವಹಿಸಿಕೊಂಡು ಬಂದವರು. ಪ್ರಾಂಶುಪಾಲರಾಗಿ ಇದ್ದರೂ 10ನೇ ತರಗತಿಗೆ ತಾನೇ ಗಣಿತ ಬೋಧನೆ ಮಾಡಿ ಮಕ್ಕಳೆಲ್ಲರ ಪ್ರೀತಿಗೆ ಪಾತ್ರರಾಗಿದ್ದರು. ಆದರೆ ಪೂರ್ವ ಜನ್ಮದ ಫಲವೋ ಎಂಬಂತೆ ಜೀವನಪೂರ್ತಿ ತನ್ನ ಸಂಸಾರದಲ್ಲಿ ದುಃಖವನ್ನೇ ಅನುಭವಿಸಿದರು.

ಶ್ರೀ **ರಾಮ ಭಂಡಾರಿ**ಯವರು ಅಟೆಂಡರ್ ಆಗಿದ್ದರೂ ನಿವೃತ್ತಿಯಾಗುವಾಗ ಗುಮಾಸ್ತರಾಗಿ ಬಡ್ತಿ ಹೊಂದಿದರು. ನನ್ನ ಆತ್ಮೀಯ ಗೆಳೆಯರಾಗಿದ್ದರು.

## ಜಿ.ಆರ್. ಉಪಾಧ್ಯಾಯರ (ವಿ)ಚಿತ್ರ ಜೀವನ

**ಶ್ರೀ ಕೃಷ್ಣಪ್ಪ ಉಪ್ಪೂರ್ :** ಇವರು ಗುಮಾಸ್ತರಾಗಿದ್ದರು. ನಮ್ಮ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ವೇಳೆ ಇವರ ವಿವಾಹ ಸಾಸ್ತಾನದಲ್ಲಿಯ ದೇವಸ್ಥಾನವೊಂದರಲ್ಲಿ ನಡೆಯಿತು. ನಾನು ಹೋಗಿದ್ದೆ, ಒಳ್ಳೆಯ ನಾಟಕಕಾರ, ನಿರ್ದೇಶಕರಾಗಿದ್ದರು. ಹಿಂದಿಯಲ್ಲಿ ಪದವೀಧರರಾಗಿದ್ದರು. ಬದ್ರಿಯಾ ಕಾಲೇಜಿನಲ್ಲಿ ಹಿಂದಿ ಉಪನ್ಯಾಸಕರಾಗಿ ಕೆಲಸ ನಿರ್ವಹಿಸಿದ್ದರು. ಇವರು ರಚಿಸಿ ನಿರ್ದೇಶಿಸಿದ ತುಳು ಸಿನೆಮಾ 'ಮಾರಿಬಲೆ' ಪ್ರಶಸ್ತಿ ಪಡೆದಿತ್ತು.

**ಶ್ರೀ ಕಮಾಲಾಕ್ಷರು :** ನಮ್ಮ ಸಂಸ್ಥೆಯ ಲ್ಯಾಬ್ ಅಸಿಸ್ಟೆಂಟ್ ಆಗಿದ್ದರು. ಶ್ರೀ ಪಾಂಡುರಂಗ ಶೆಟ್ರಗೆ ಲ್ಯಾಬ್ ಕೆಲಸಕ್ಕೆ ಸಹಕರಿಸುತ್ತಿದ್ದರು. ಇವರು ಕೂಡ ನಮ್ಮೊಂದಿಗೆ ವಾಸು ಶೆಟ್ರ ಕಟ್ಟಡದಲ್ಲಿ ಒಂದು ಕೊಠಡಿಯಲ್ಲಿ ಬಾಡಿಗೆಗೆ ಇದ್ದರು.

**ಶ್ರೀಹರಿಯವರು :** ನಮ್ಮ ಸಂಸ್ಥೆಯ ಅಟೆಂಡರ್ ಆಗಿದ್ದರು. ಇವರು ತಂಬಾ ಶರಾಬು ಕುಡಿಯುತ್ತಿದ್ದರು. ಮೇಲಿನ ಹೆಸರು ಸೂಚಿಸಿದ ಪ್ರಾಂಶುಪಾಲರುಗಳು, ಅಧ್ಯಾಪಕರುಗಳು, ಸಿಬ್ಬಂದಿ ವರ್ಗದೊಂದಿಗೆ ಹೆಚ್ಚಿನ ವರ್ಷಗಳಲ್ಲಿ ನಾನು ಇದ್ದೆ. ಕೆಲವರು ಕೆಲವೇ ದಿನ ತಿಂಗಳು ಇದ್ದು ವರ್ಗವಾಗಿ ಹೋಗಿದ್ದಾರೆ. **ಶ್ರೀ ಶೇಷಗಿರಿ ನಾಯ್ಕ**ರು 1978–79ರಲ್ಲಿ ಸಾಗರದಿಂದ ಫಲಿಮಾರಿಗೆ ಹಿಂದಿ ಉಪನ್ಯಾಸಕರಾಗಿ ವರ್ಗವಾಗಿ ಬಂದಿದ್ದರು.

ವಾಸು ಶೆಟ್ರ ಬಾವಿಕಟ್ಟೆಯಲ್ಲಿ ನನ್ನ ತಣ್ಣೀರು ಸ್ನಾನ ಪ್ರಥಮವಾಗಿ ಬೆಳಗಾಗುವ ಮುಂಚೆಯೇ ನಡೆಯುತ್ತಿತ್ತು. ತಣ್ಣೀರನ್ನು ತಲೆಗೆ ಹೊಯ್ದುಕೊಂಡಾಗ ಆಗುತ್ತಿದ್ದ ಆನಂದ ವರ್ಣಿಸಲಾದ್ಯ. ಬಳಿಕ ಒಬ್ಬೊಬ್ಬರಾಗಿ ಬಂದು ಬಾವಿಕಟ್ಟೆಯಲ್ಲಿ ಸ್ನಾನ ಅದೆಷ್ಟು ಆನಂದ. ಎಲ್ಲರೂ ಬೆಳಿಗ್ಗೆ ಸ್ನಾನ ಮಾಡುತ್ತಿರಲಿಲ್ಲ. ಕೆಲವರು ಸಂಜೆ 7–8 ಗಂಟೆಗೆ ಮಾಡುತ್ತಿದ್ದರು. ಬೆಳಿಗ್ಗೆ 9 ಗಂಟೆಗೆ ಎಲ್ಲರೂ ಜೊತೆಯಾಗಿ ಶಾಲೆಗೆ ಹೊರಡುತ್ತಿದ್ದೆವು. ಫಲಿಮಾರು ಪೇಟೆಯ ಮಧ್ಯದಲ್ಲಿ ಎರಡು ಹೋಟೇಲುಗಳಿದ್ದವು. ಒಂದು **ಶ್ರೀಯುತ ಮೋಹನದಾಸರು** ನಡೆಸುತ್ತಿದ್ದ **'ಮೋಹಿನಿ ವಿಲಾಸ'**. ಎಲ್ಲರೂ ಟಿಫಿನ್ ಮಾಡಲು ಮೋಹಿನಿ ವಿಲಾಸಕ್ಕೆ ಹೋಗುತ್ತಿದ್ದರೆ ನಾನು ಮಾತ್ರ **ಬಾಬುರಾಯರ ಹೋಟೇಲಿ**ನಲ್ಲಿ ಟಿಫಿನ್ ಮಾಡುತ್ತಿದ್ದೆ. ಖಾಯಂ ಆಗಿ ಗಣಪಯ್ಯ ಶೆಟ್ಟ್ರು ಮೋಹಿನಿ ವಿಲಾಸದಲ್ಲಿ ಕುಚ್ಚಲು ಅಕ್ಕಿ ಗಂಜಿ ಊಟ ಮಾಡುತ್ತಿದ್ದರು.

ಫಲಿಮಾರು ಹಿ.ಪ್ರಾ. ಶಾಲಾ ಶಿಕ್ಷಕರಾಗಿ ಇದ್ದ **ಶ್ರೀಯುತ ಕುರಾಡಿ ಸೀತಾರಾಮ ಅಡಿಗರು** ನನ್ನ ಆತ್ಮೀಯರಾದರು. ಇವರು ಕೂಡಾ ಬಾಬುರಾಯರ ಹೋಟೇಲಿಗೆ ಟಿಫಿನ್ ಮಾಡಲು ಬರುತ್ತಿದ್ದರು. ಹಾಗಾಗಿ ದಿನಾ ಹೆಚ್ಚಾಗಿ ಒಟ್ಟಾಗಿ ಹೋಟೇಲಿನ ಒಳಗೆ ಮಣೆ ಹಾಕಿಕೊಂಡು ಕುಳಿತು ಇಡ್ಲಿ ಟಿಫಿನ್ ಮಾಡುತ್ತಿದ್ದೆವು. ಬಾಬು ರಾಯರು ನಮ್ಮ ಇಡ್ಲಿಗೆ ಎಣ್ಣೆ ಹಾಕಿ ಕೊಡುತ್ತಿದ್ದರು. ಮಧ್ಯಾಹ್ನ ಕೂಡ ಬಾಬುರಾಯರಲ್ಲಿ ಬಾಳೆಎಲೆ ಹಾಕಿ ಊಟ ಆಗುತ್ತಿತ್ತು. ಸಂಜೆ ಚಹಾ ತಿಂಡಿ ಕೂಡ ಬಾಬುರಾಯರಲ್ಲಿ ನಡೆಯುತ್ತಿತ್ತು. ಅಡಿಗರ ಜೀವನ ಶೈಲಿ ನನಗೆ ಬಹಳ ಇಷ್ಟವಾಯ್ತು. ಹಾಗಾಗಿ ಶಾಲೆಬಿಟ್ಟ ಬಳಿಕ ಟಿಫಿನ್ ಮುಗಿಸಿ ಅಡಿಗರ ಮನೆಗೆ ಹೋಗಿ ಕುಳಿತು ರಾತ್ರಿಊಟ ಬಾಬುರಾಯರಲ್ಲಿ ಮುಗಿಸಿ ವಾಸು ಶೆಟ್ರ ರೂಮಿನಲ್ಲಿ ಹೋಗಿ ಮಲಗುತ್ತಿದ್ದೆ. ಶ್ರೀಯುತ ಕುರಾಡಿ ಸೀತಾರಾಮ

ಅಡಿಗರ ವ್ಯಕ್ತಿತ್ವ ಜೀವನ ಶೈಲಿ ಒಂದು ಅದ್ಭುತ. ಫಲಿಮಾರಿನ ಅತೀ ಎತ್ತರದ ಸ್ಥಳ ಕರಣೀಕರ ಕಟ್ಟೆ. ಅದಕ್ಕೆ ಹೋಗುವ ಮಾರ್ಗದ ಬಲ ಬದಿಯಲ್ಲಿ ಫಲಿಮಾರು ಮಠದ ಅಧಿಕಾರದಲ್ಲಿದ್ದ ಮನೆಯಲ್ಲಿ ಒಬ್ಬರೇ ಅಡಿಗರು ಜೀವನ ಸಾಗಿಸುತ್ತಿದ್ದರು. ಇವರು ಕೇವಲ ಅಧ್ಯಾಪಕರು ಆಗಿರದೆ ಕವಿ, ಸಾಹಿತಿಯೂ ಆಗಿದ್ದರು ಎನ್ನುವುದಕ್ಕೆ ಅವರ ಮನೆಯಲ್ಲಿ ಪುಸ್ತಕಗಳಿಂದ ತುಂಬಿದ್ದ 7–8 ದೊಡ್ಡ ದೊಡ್ಡ ಕಪಾಟುಗಳು ಸಾಕ್ಷಿ. 3–4 ದಿನಪತ್ರಿಕೆಗಳು – ವಾರಪತ್ರಿಕೆಗಳು, ಮಾಸಪತ್ರಿಕೆಗಳು ತುಂಬಿದ್ದವು. ಇವರ ಮನೆಯ ಹೆಸರು **'ಕನ್ನಡ ಕುಟೀರ'** ತನ್ನ ಸಂಬಳದ ಅರ್ಧಾಂಶವನ್ನು ಪುಸ್ತಕ ಕಾದಂಬರಿಗಳನ್ನು ಖರೀದಿಸಲು ವಿನಿಯೋಗಿಸುತ್ತಿದ್ದರು ಎಂದರೆ ನಿಮಗೆ ನಂಬಿಕೆ ಬರಲಿಕ್ಕಿಲ್ಲ. ದೊಡ್ಡ ಪುಸ್ತಕ ಭಂಡಾರವೇ ಇವರ ಮನೆಯಲ್ಲಿ ಇತ್ತು. 3–4 ಸಾವಿರದಷ್ಟು ಪುಸ್ತಕಗಳನ್ನು ಕಬಾಟಿನೊಳಗೆ ವ್ಯವಸ್ಥಿತವಾಗಿ ಸುಂದರವಾಗಿ ಜೋಡಿಸಿಟ್ಟ ರೀತಿ ಯಾವ ಲೈಬ್ರೆರಿಗೂ ಕಡಿಮೆ ಇರಲಿಲ್ಲ. ಇಲ್ಲಿಗೆ ನಮ್ಮ ದೇಶದಲ್ಲೇ ಪ್ರಖ್ಯಾತಿ ಪಡೆದ ಸಂಸ್ಕೃತ ವಿದ್ವಾಂಸ ಶಿರೋಮಣಿಗಳಾದ **ಶ್ರೀಯುತ ಬನ್ನಂಜೆ ಗೋವಿಂದ ಆಚಾರ್ಯರು** ಆಗಾಗ ಬರುತ್ತಿದ್ದರು. ಅಲ್ಲದೆ ಇಲ್ಲೇ ಉಳಿದುಕೊಂಡ ರಾತ್ರಿಗಳೂ ಇವೆ. ಇಲ್ಲಿಗೆ **ಶ್ರೀಯುತ ಅಂಬಾ ತನಯರು, ಶ್ರೀಯುತ ಮುದ್ರಾಡಿ ಕಲ್ಕೂರರು** ಬರುತ್ತಿದ್ದರು.

ಶಾಲೆ ಬಿಟ್ಟ ನಂತರ ಕೆಲವು ಸಹೋದ್ಯೋಗಿಗಳೊಂದಿಗೆ ವಿದ್ಯಾರ್ಥಿಗಳೊಂದಿಗೆ ಬ್ಯಾಡ್ಮಿಂಟನ್ ಆಡಿ $6–6^1/_2$ಗೆ ಹೊತ್ತು ಮುಳುಗಿದ ನಂತರ ಎಲ್ಲರ ಜೊತೆಗೆ ಪೇಟೆಗೆ ಹೋಗಿ ಬಾಬು ರಾಯರಲ್ಲಿ ಟಿಫಿನ್ ಮಾಡಿ ಅಡಿಗರಲ್ಲಿ ಇದ್ದು ಪೇಪರ್ ಓದುತ್ತಾ ಮಾತನಾಡುತ್ತಾ ರಾತ್ರಿ 9ರ ತನಕ ಇದ್ದು ಪೇಪರ್ ಓದುತ್ತಾ ಮಾತನಾಡುತ್ತಾ ರಾತ್ರಿ ಬಾಬುರಾಯರಲ್ಲಿ ಊಟಕ್ಕೆ ಜೊತೆಯಾಗಿ ಹೋಗಿ ಉಂಡು ನಾನು ವಾಸುಶೆಟ್ರಲ್ಲಿಗೆ, ಅಡಿಗರು ಕನ್ನಡ ಕುಟೀರಕ್ಕೆ ಹೋಗುತ್ತಿದ್ದೆವು. ಇದು ನನ್ನ ದಿನಚರಿಯಾಗಿತ್ತು.

**1971ರಲ್ಲಿ ಆರ್ಟ್ ಮಾಸ್ಟರ್ ಪರೀಕ್ಷೆಯಲ್ಲಿ ರಾಜ್ಯದಲ್ಲಿ ದ್ವಿತೀಯ ರ್‍ಯಾಂಕ್.** ಚಿತ್ರಕಲಾ ವಿಷಯದಲ್ಲಿ ಅತ್ಯುನ್ನತ ಶಿಕ್ಷಣ ತರಬೇತಿ ಕೋರ್ಸ್ **ಆರ್ಟ್ ಮಾಸ್ಟರ್** (ಎ. ಎಂ). 1971ನೇ ವರ್ಷದಲ್ಲಿ ನಾನು ನನ್ನ ಸಂಸ್ಥೆಯಲ್ಲಿ ಸಂಬಳಸಹಿತ ರಜೆ ಹಾಕಿ ದಾರವಾಡಕ್ಕೆ ಹೋಗಿದ್ದೆ. ಚಿತ್ರಕಲಾ ಶಿಕ್ಷಕರಾಗಲು ಡ್ರಾಯಿಂಗ್ ಮಾಸ್ಟರ್ ಹಾಗೂ ಆರ್ಟ್ ಮಾಸ್ಟರ್ ಕೋರ್ಸ್‌ಗಳಿದ್ದವು. 1967 ಡಿ.ಟಿ.ಸಿ ಆಗಿತ್ತು. ಎ.ಎಮ್.ಸಿ ಮಾಡಬೇಕಾಗಿದ್ದರೆ ಕನಿಷ್ಠ 3 ವರ್ಷ ಶಿಕ್ಷಕರಾದ ಬಳಿಕ 3 ತಿಂಗಳು ಕಲಾ ಮಂದಿರದಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡಿದರೆ ಮಾತ್ರ ಅದರ ಪರೀಕ್ಷೆಗೆ ಕುಳಿತುಕೊಳ್ಳುವ ನಿಯಮವಿತ್ತು. ಹಾಗಾಗಿ ನಾನು ಧಾರವಾಡ ಕಲಾಮಂದಿರದಲ್ಲಿ 3 ತಿಂಗಳು ಕಲಾ ಉಪನ್ಯಾಸಕನಾಗಲು ಹೋದೆ. ಆ ವರ್ಷ ಪ್ರಾಥಮಿಕ ಶಿಕ್ಷಕರು ಕಡ್ಡಾಯ ಚಿತ್ರಕಲೆ ಕಲಿಯಬೇಕೆಂಬ ಕಾಯಿದೆ ಬಂದುದರಿಂದ 30 ಪ್ರಾಥಮಿಕ ಶಿಕ್ಷಕರಿಗೆ ಮೂರು ತಿಂಗಳು ಭೋದಿಸುವ ಅವಕಾಶ ಸಿಕ್ಕಿತ್ತು. ಫಲಿಮಾರಿನ ಸಂಸ್ಥೆಯಿಂದ ಸಂಬಳ ಸಿಗುತ್ತಿದ್ದರೂ 8ರಿಂದ 12ರ ತನಕದ ಸಮಯ ಬೋಧನೆ ಮಾಡಿ ಉಳಿದ ಬಿಡು ಸಮಯ ಸೋಮಾರಿಯಾಗಬಾರದೆಂದು ಧಾರವಾಡದ ಮಾರ್ಕೆಟ್ ರೋಡಿನಲ್ಲಿದ್ದ **ದುರ್ಗಾ ನಿವಾಸದಲ್ಲಿ ಸಪ್ಲೈಯ**ರಾಗಿ ಕೆಲಸಕ್ಕೆ ಸೇರಿದೆ. ಇದರ ಮಾಲಕರು ಆವಾಗ **ಚಿಟ್‌ಫಂಡ್ ಸರಳಾಯರು.** ನಾನು ಕಾಲೇಜಿನಲ್ಲಿ

ಕಲಿಸುತ್ತಿದ್ದ ನನ್ನ ಅಧ್ಯಾಪಕ ವಿದ್ಯಾರ್ಥಿಗಳು ಸಪ್ಲೈಯರಾಗಿ ಕೆಲಸ ಮಾಡುತ್ತಿದ್ದ ನನ್ನನ್ನು ಕಂಡು ದಿಗ್ಭ್ರಮೆಗೊಳಗಾಗುತ್ತಿದ್ದರು. **3 ತಿಂಗಳ ಬಳಿಕ ಎ.ಎಂ.ಸಿ. ಪರೀಕ್ಷೆಗೆ ಕುಳಿತು ಕರ್ನಾಟಕ ರಾಜ್ಯದಲ್ಲೇ ದ್ವಿತೀಯ ರ್‍ಯಾಂಕ್ ಗಳಿಸಿ ಪಾಸಾದೆ.**

**ಫಲಿಮಾರಿನ ಮರೆಯಲಾಗದ ಘಟನೆ : ಪರೀಕ್ಷೆ ಮುಗಿಸಿ ಊರಿಗೆ ಬಂದಾಗ**

1965ರಿಂದ 1967ರ ತನಕ ನಾನು ದಾರವಾಢದಲ್ಲಿ ಹೋಟೇಲ್ ಸಪ್ಲೈಯರ್ ಆಗಿ ಕಲಿಯುತ್ತಿದ್ದಾಗ ನನಗೆ ತುಂಬಾ ಉಪಕಾರ ಮಾಡಿದ್ದ **ಶ್ರೀ ಉಪೇಂದ್ರ ಮಾವನನ್ನು** ಮತ್ತು **ವಸಂತಿ ಅತ್ತೆಯನ್ನು** ಮರೆಯಲು ಸಾಧ್ಯವಿಲ್ಲ. ಅವರಲ್ಲಿ 1971ರ ಪರೀಕ್ಷೆ ಮುಗಿಸಿ ಊರಿಗೆ ಹೋಗುವ ಬಗ್ಗೆ ತಿಳಿಸಿದೆ. ಹೋಗುವ ಮುಂಚಿನ ದಿನ ನಮ್ಮ ಮನೆಗೆ ಬಂದು ಮಗ ಶ್ರೀನಿವಾಸ (8 ವರ್ಷ)ನನ್ನು ಊರಿಗೆ ಕರಕೊಂಡು ಹೋಗು ಎಂದರು. ಸರಿ ಎಂದು ಮುಂಚಿನ ದಿನ ರಾತ್ರಿ ಅವರ ಮನೆಯಲ್ಲಿ ಮಲಗಿದೆ. ಶ್ರೀನಿವಾಸನಿಗೆ ರಾತ್ರಿ ಇಡೀ ನಿದ್ರೆ ಬರಲೇ ಇಲ್ಲ, ಯಾಕೆಂದರೆ ಊರಿಗೆ ಹೋಗುವ ಸಂತೋಷದಲ್ಲಿ ಆಗಾಗ ಎಬ್ಬಿಸಿ ನನಗೂ ನಿದ್ರೆ ಮಾಡಲು ಬಿಡುತ್ತಿರಲಿಲ್ಲ. 3 ಗಂಟೆಗೆ ಕುದುರೆ ಟಾಂಗಾ ಬಂತು. ನಿದ್ರೆ ಕಣ್ಣಿನಲ್ಲೆ ಸ್ನಾನ ತೀರಿಸಿ ಹೊರಟೆವು. ರೈಲ್ವೇ ಸ್ಟೇಷನ್ 3–30ಕ್ಕೆ ಸೇರಿ ಟ್ರೈನಿಗಾಗಿ ಕಾದೆವು. ಆ ದಿನ 4ಕ್ಕೆ ಬರಬೇಕಾದ ಟ್ರೈನ್ ಬಂದದ್ದು 5 ಗಂಟೆಗೆ ಟಿಕೇಟ್ ಮಾಡುವಾಗ ಪರಿಚಯದ ಸ್ಥೂಲಕಾಯದ ಒಬ್ಬರು ತನ್ನ ಟಿಕೇಟನ್ನು ನನ್ನಲ್ಲಿ ಮಾಡಲು ಹೇಳಿದರು. ಟಿಕೇಟ್ ಮಾಡಿದ ಬಳಿಕ ಮೂರು ಟಿಕೇಟನ್ನು ಪ್ಯಾಂಟ್ ಕಿಸೆಗೆ ತುರುಕಿಕೊಂಡೆ. ಪ್ರಯಾಣದಲ್ಲಿ ಕಿಸೆಯಲ್ಲಿ ಹೆಚ್ಚು ಹಣ ಹಿಡಿದುಕೊಳ್ಳಬಾರದೆಂದು ರೂ.15.50 ಪರ್ಸಿನಲ್ಲಿ ಹಿಡಿದುಕೊಂಡೆ. ಉಳಿದ ಹಣ ನನ್ನ ಅಭ್ಯಾಸಕ್ಕಾಗಿ ಕೊಂಡು ಹೋದ ಪುಸ್ತಕಗಳು, ನನ್ನ 3 ತಿಂಗಳ ಅವಧಿಗಾಗಿ ಬೇಕಾದ ಉಡುಪುಗಳು ನನ್ನ ಕಬ್ಬಿಣದ ಟ್ರಂಕಿನಲ್ಲಿ ಇಟ್ಟು–ಕೊಂಡಿದ್ದೆ. ಹರಿಹರ ರೈಲ್ವೇ ಸ್ಟೇಷನಿನಲ್ಲಿ ಇಳಿದು ನೋಡುವಾಗ ಗೇಟಿನ ಬಳಿ ಟಿ.ಸಿ.ಯ ಬಳಿ ತುಂಬಾ ಜನ ಸೇರಿದ್ದರು. ಶ್ರೀನಿವಾಸ ಹಾಗೂ ಸ್ಥೂಲಕಾಯದ ಗಂಡಸು ನನ್ನ ಜೊತೆಯಲ್ಲಿದ್ದರು. ಟ್ರಂಕ್ ನನ್ನ ಕೈಯಲ್ಲಿತ್ತು. ಕೂಲಿಯವ **"ಟ್ರಂಕ್" ಕೊಡಿ ಸಾರ್...** ನನಗೆ ಉಡುಪಿ ಬಸ್ ಗೊತ್ತು ಅಲ್ಲಿ ತನಕ ಕೊಂಡುಹೋಗುತ್ತೇನೆಂದು ಹೇಳಿದ. ಮಜೂರಿ 0–50 ಪೈಸೆ ಕೊಡುತ್ತೇನೆಂದು ಹೇಳಿದೆ. ಅದಕ್ಕೆ ಅವ 1–00 ರೂಪಾಯಿ ಕೊಡಿ ಸಾರ್ ಎಂದು ಟ್ರಂಕ್ ತಲೆ ಮೇಲೆ ಏರಿಸಿಯೇ ಬಿಟ್ಟ. ಸರಿ ಎಂದು ಎರಡೇ ನಿಮಿಷದಲ್ಲಿ ನುಸುಳಿ ಗೇಟಿನ ಬಳಿ ಹೋದ. ತೋರದ ನನ್ನ ಜೊತೆಗಿದ್ದ ಗಂಡಸು ಹರಿಹರದ ಕೂಲಿಗಳನ್ನು **'ನಂಬಬೇಡಿ'** ಎಂದು ಹೇಳಿದರು. ನಾನು ಹೆದರಿದೆ. ನಾನು ಸಪೂರ ಇದ್ದುದರಿಂದ ನಾನು ನುಸುಳಿ ಮುಂದೆ ಹೋಗುತ್ತೇನೆ, ನೀವೂ ಶ್ರೀನಿವಾಸ ಜೊತೆಯಾಗಿ ಬನ್ನಿ ಎಂದು ಮುಂದೆ ಹೋಗಿ ಟಿ.ಸಿ. ಬಳಿ 3 ಟಿಕೇಟ್ ಕೊಟ್ಟು ಗೇಟ್ ದಾಟಿ ಬಸ್ಸಿನ ಬಳಿ ಓಡಿದೆ. ಅಲ್ಲಿ ಕೂಲಿ ಬಸ್ಸಿನ ಟಾಪಿನಲ್ಲಿ ಟ್ರಂಕ್ ಹಾಕುವುದು ನೋಡಿದೆ. ಬಳಿಕ ಧೈರ್ಯ ಆಯ್ತು. ಬಸ್ಸು ಪ್ರಯಾಣಿಕರಿಂದ ತುಂಬಿತ್ತು. ಕೂಲಿ ನನ್ನನ್ನು ಕರೆದರೂ ಶ್ರೀನಿವಾಸ ಏನು ಬರಲಿಲ್ಲ ಎಂದು ಟಿ.ಸಿ. ಇದ್ದಲ್ಲಿಗೆ ಓಡಿ ಬಂದೆ. ಬಂದಾಗ ಟಿಕೇಟ್ ಇಲ್ಲ ಎಂಬ ಕಾರಣಕ್ಕಾಗಿ ಒಂದು ಬೆಂಚಿನಲ್ಲಿ ಶ್ರೀನಿವಾಸನನ್ನು ಮತ್ತು ತೋರದ ಗಂಡಸನ್ನು ಕುಳ್ಳಿರಿಸಿದ್ದರು. ಟಿ.ಸಿ.ಯಲ್ಲಿ ನಾನು 3 ಟಿಕೇಟ್ ಕೊಟ್ಟಿದ್ದೇನೆ ಎಂದರೆ ಕೇಳಲೇ ಇಲ್ಲ. ಧಾರವಾಡದಿಂದ

ಹರಿಹರಕ್ಕೆ ಬಂದ ಡಬ್ಬಲ್ ಚಾರ್ಜ್ ಕಟ್ಟಬೇಕೆಂದು ಹಟ ಹಿಡಿದರು. ಕೂಲಿ ಓಡಿ ಬಂದು ನಿಮ್ಮ ಬಸ್ಸು ಹೋಯ್ತು ಅಂದು ಬಿಟ್ಟ. ನನ್ನ ಕಣ್ಣಲ್ಲಿ ನೀರು ಬರಲು ಪ್ರಾರಂಭವಾಗಿ ಕೂಗುತ್ತ ಬಳಿ ಇದ್ದ ಪೊಲೀಸಿಗೆ ನನ್ನ ಅಳಲನ್ನು ಹೇಳಿಕೊಂಡೆ. ಪೊಲೀಸ್‌ರವರಿಗೆ ಕನಿಕರವಾಗಿ ನನ್ನನ್ನು ಕಳುಹಿಸಲು ಟಿ.ಸಿ.ಯಲ್ಲಿ ಹೇಳಿದರು. ಬಳಿಕ ದಫೂತಿ ಗಂಡಸು ಹರಿಹರದವರೇ ಆದ್ದರಿಂದ ಅವರನ್ನು ಬಿಟ್ಟು ಶ್ರೀನಿವಾಸನ ಜೊತೆಗೆ ಬಸ್ ನಿಲ್ದಾಣದ ಬಳಿ ಹೋದೆ. ಆವಾಗ ಶಿವಮೊಗ್ಗ – ಆಗುಂಬೆ – ಸೋಮೇಶ್ವರ – ಉಡುಪಿ ಎಂದು ಬರೆದಿದ್ದ ಬಸ್ಸು ಪ್ರಯಾಣಿಕರಿಂದ ತುಂಬಿ ಹೊರಡಲು ಸಿದ್ಧವಾಗಿತ್ತು. ಕೂಲಿಗೆ 1.00 ಕೊಡಬೇಕಾಗಿತ್ತು. ಆದರೆ ನನ್ನ ಕೈಯಲ್ಲಿ 10 ರೂ. 5 ರೂ. 50 ಪೈಸೆ ಇತ್ತು. 1.00 ರೂ. ನೋಟು ಇರಲಿಲ್ಲ. ಹಾಗಾಗಿ ಕೂಲಿ ನನ್ನೊಂದಿಗೆ ಇದ್ದ. ನನ್ನ ಟ್ರಂಕ್ ಬೇರೆ ಬಸ್ಸಿನಲ್ಲಿ ಹೋದ ಬಗ್ಗೆ ನಾನು ಚಿಂತೆಯಲ್ಲಿದ್ದೆ. ಆದರೂ ಪ್ರಯಾಣಿಕರಿಂದ ತುಂಬಿದ್ದ ಇನ್ನೊಂದು ಬಸ್ಸಿನಲ್ಲಾದರೂ ಉಡುಪಿ ತಲಪಲೇಬೇಕಲ್ಲಾ. ಹಾಗಾಗಿ ಆ ಬಸ್ಸಿಗೆ ಶ್ರೀನಿವಾಸನನ್ನು ಹತ್ತಿಸಿ ನಾನು ಹತ್ತಿರವಿದ್ದ ಬಸ್ ನಿಲ್ದಾಣದವರಲ್ಲಿ ಹೋಗಿ ಮೊದಲು ಹೋದ ಬಸ್ಸಿಗೆ ಈ ಬಸ್ಸು ಎಲ್ಲಿಯಾದರೂ ಸಿಗುವ ಸಾಧ್ಯತೆ ಇದೆಯಾ? ಕೇಳಲು ಹೋದೆ. ಅದೇ ಸಮಯ ಈಗ ಈ ಬಸ್ಸು ಹೊರಡಲು ಪ್ರಾರಂಭವಾಯ್ತು. ಶ್ರೀನಿವಾಸ ಬಸ್ಸಿನಲ್ಲಿದ್ದ. ಓಡಿ ಹೋಗಿ ಬಸ್ಸನ್ನು ಏರುವ ಅವಸರದಲ್ಲಿ ಬಸ್ಸಿನ ಭಾಗ ಎಡಕೈಗೆ ತಾಗಿ ಎಡಕೈಯಲ್ಲಿದ್ದ ವಾಚು ತುಂಡಾಗಿ ವಾಚು ಕೆಳಗೆ ಬಿತ್ತು. ಚೈನ್ ಮಾತ್ರ ನನ್ನ ಬಲಕೈಗೆ ಸಿಕ್ಕಿತು. ಇಷ್ಟೆಲ್ಲಾ ಘಟನೆ ನಡೆಯುತ್ತಿದ್ದರೂ ಚಿಲ್ಲರೆ ಇಲ್ಲದ ಕಾರಣ 1.00 ರೂ. ಕೂಲಿ ಹಣಕ್ಕಾಗಿ ನನ್ನೊಂದಿಗೆ ಬರುತ್ತಿದ್ದ. ಅವನು ವಾಚು ಕೆಳಗೆ ಬಿದ್ದುದನ್ನು ಕಂಡು ವಾಚನ್ನು ಹೆಕ್ಕಿ ನನಗಿತ್ತ. ಬಸ್ಸಿನ ಪ್ರಯಾಣಿಕರಲ್ಲಿ 5ರೂ. ಚಿಲ್ಲರೆಗಾಗಿ ವಿನಂತಿಸಿಕೊಂಡೆ. 1.00 ರೂ. ಕೂಲಿಯ ಕೈಗಿತ್ತು ಅವನು ಮಾಡಿದ ಉಪಕಾರಕ್ಕೆ ಮನಸ್ಸಿನಲ್ಲೇ ಅಭಿನಂದಿಸಿದೆ. ಬಳಿಕ ನನ್ನ ಪರ್ಸಿನಲ್ಲಿ ಉಳಿದ ಹಣ 14.50 ರೂ. ಮಾತ್ರ. ಕಂಡೆಕ್ಟರ್ ಟಿಕೇಟ್ ವಿಚಾರಿಸಿಕೊಂಡು ಬಂದಾಗ ನಾನು ಹರಿಹರದಿಂದ ಉಡುಪಿಗೆ $1^1/_2$ ಟಿಕೇಟಿಗೆ 12.00 ರೂ. ಕೊಡಬೇಕಾಯ್ತು. ಬಳಿಕ ನನ್ನಲ್ಲಿ ಉಳಿದ ಹಣ ಕೇವಲ 2.50 ರೂ. ಬಸ್ಸು ಚಾಲಕರ ಬಳಿ ಹೋಗಿ ಮೊದಲು ಹೋಗಿದ್ದ ಹುತೇಶ್ ಬಸ್ಸನ್ನು ಶಿವಮೊಗ್ಗ ಬರುವ ಮೊದಲೇ ನಮ್ಮ ಬಸ್ಸು ತಲುಪುವಂತೆ ವೇಗವಾಗಿ ಓಡಿಸಲು ನನ್ನ ಪರಿಸ್ಥಿತಿ ವಿವರಿಸಿ ವಿನಂತಿಸಿಕೊಂಡೆ. ಅಲ್ಲದೆ ಕಂಡೆಕ್ಟರ್ ಇನ್ನೊಂದು ಸಲಹೆ ನೀಡಿದ. ಈ ಬಸ್ಸು ಆಗುಂಬೆಗೆ ಹೋಗಿ ನಿಲ್ಲುತ್ತೆ. ಬಳಿಕ ನಿಮಗೆ ಸಿಗುವ ಸೋಮೇಶ್ವರ ಎಂಬಲ್ಲಿ ಅಂಚೆ ಕಚೇರಿಯಲ್ಲಿ ದೂರವಾಣಿಯಲ್ಲಿ ಉಡುಪಿ ಬಸ್ ನಿಲ್ದಾಣಕ್ಕೆ ಫೋನ್ ಮಾಡಿ ಎಂದರು. ಅದಕ್ಕೆ 2.00 ರೂಪಾಯಿ ಬೇಕಾದೀತು ಎಂದರು. ಶಿವಮೊಗ್ಗ ಬಸ್ ನಿಲ್ದಾಣದಲ್ಲಿ ಇನ್–ಔಟ್ ಎರಡು ಗೇಟ್‌ಗಳು ಇವೆ. ನಮ್ಮ ಬಸ್ ನಿಲ್ದಾಣದಲ್ಲಿ ಒಳಗೆ ಹೋಗಲು ತಿರುಗುವ ಮೊದಲೇ ಹುತೇಶ್ ಬಸ್ ಹೊರಗೆ ಬರುವ ರಸ್ತೆಯಲ್ಲಿ ಹೊರಗೆ ಬಂದು ತಿರುಗುತ್ತಿತ್ತು. ಇದನ್ನು ಕಂಡು ನಮ್ಮ ಚಾಲಕ ಅದನ್ನು ಬೆಂಬತ್ತಿ ಬಸ್ ಚಲಾಯಿಸಿದನಾದರೂ ಟ್ರಾಫಿಕ್ ಜಾಮ್ ಆಗಿ ಸರ್ಕಲ್‌ನಲ್ಲಿ ಸಿಗ್ನಲ್ ಬಿದ್ದ ಕಾರಣ ನಮ್ಮ ಬಸ್ ವಾಪಾಸು ಶಿವಮೊಗ್ಗ ಬಸ್‌ಸ್ಟಾಂಡಿಗೆ ಬರಬೇಕಾಯಿತು. **"ಊಟಕ್ಕೆ ಹೋಗುವವರೆಲ್ಲಾ ಹೋಗಿ"** ಎಂದು ಕಂಡೆಕ್ಟರ್ ಗಟ್ಟಿಯಾಗಿ ಹೇಳಿದ. ಇಷ್ಟರತನಕ ನಿದ್ದೆಯಲ್ಲಿದ್ದ ಶ್ರೀನಿವಾಸ ಎಚ್ಚತ್ತು ಮಾಮ ಊಟಕ್ಕೆ ಹೋಗುವ

ಎಂದಾಗ ನನ್ನ ಪರಿಸ್ಥಿತಿ ಹೇಗಾಗಬೇಡ! ಕಣ್ಣಲ್ಲಿ ನೀರು ಬಂತು, ಮಗು ಹಸುವಿನಲ್ಲಿ ಕೂಗುತ್ತಿದೆ, ನನ್ನಲ್ಲಿ 2.50 ರೂ. ಇದೆ. ಆದರೂ ಫೋನ್ ಮಾಡಿ ಟ್ರಂಕಿನ ಬಗ್ಗೆ ತಿಳಿದುಕೊಳ್ಳುವ ಆಸೆ. ಅದಕ್ಕೆ 2.00 ರೂ. ಬೇಕು. 0.50 ಪೈಸೆಯಲ್ಲಿ ಹೊಟ್ಟೆಗೆ ಏನು ಮಾಡಲಿ ? ಎಲ್ಲರೂ ಊಟ ಮಾಡಿದರೆ ನಾನು ಮತ್ತು ಶ್ರೀನಿವಾಸ ನೀರು ಕುಡಿದು ಹೊಟ್ಟೆ ತುಂಬಿಸಿಕೊಂಡು ಬಸ್ಸಿನಲ್ಲಿ ಕುಳಿತೆವು. ಆಗುಂಬೆಯಲ್ಲಿ ಬಸ್ ಇಳಿದು ಘಾಟಿಯನ್ನು ವ್ಯಾನ್‌ನಲ್ಲಿ ದಾಟಿ ಸೋಮೇಶ್ವರ ಬಸ್ ನಿಲ್ದಾಣಕ್ಕೆ ಬಂದೆವು. ಶಂಕರ್ ವಿಠಲ್ ಬಸ್ ಉಡುಪಿ ಡೈರೆಕ್ಟ್ ಪ್ರಯಾಣಿಕರಿಗಾಗಿ ಕಾಯುತ್ತಿತ್ತು. ಶ್ರೀನಿವಾಸನನ್ನು ಅಲ್ಲಿಯೇ ನಿಲ್ಲಿಸಿ, 100 ಮೀಟರ್ ದೂರವಿದ್ದ ಅಂಚೆ ಕಛೇರಿಗೆ 100 ಮೀಟರ್ ಓಟದಂತೆ ಓಡಿದೆ. ಓಡುವ ರಭಸಕ್ಕೆ ನನ್ನ ಕಾಲಿನ ಹೆಬ್ಬೆರಳಿನ ಉಗುರು ಕಿತ್ತು ಹೋಗಿ ರಕ್ತಸ್ರಾವ ಆಗಲು ಪ್ರಾರಂಭವಾಯಿತು. ಯಾವುದನ್ನೂ ಗಮನಿಸದೆ ಅಂಚೆ ಕಛೇರಿಯಲ್ಲಿ ಹುತೇಶ್ ಬಸ್‌ಗಾಗಿ ಉಡುಪಿಗೆ ದೂರವಾಣಿ ಸಂಪರ್ಕಕ್ಕಾಗಿ ವಿನಂತಿಸಿದೆ. ದೂರವಾಣಿ ಕೆಟ್ಟು ಹೋದುದರಿಂದ ಸಂಪರ್ಕಿಸಲು ಸಾಧ್ಯವಾಗಲಿಲ್ಲ. ಬಳಿಕ ನನ್ನ ಟ್ರಂಕಿನ ಆಸೆ ಬಿಟ್ಟು 2.00 ರೂ.ಗೆ 2 ಬಿಸ್ಕಿಟ್ ಪ್ಯಾಕೆಟ್ ಹಾಗೂ 0.50 ಪೈಸೆಯಲ್ಲಿ 8 ಬಾಳೆಹಣ್ಣು ತೆಗೆದುಕೊಂಡು ಉಡುಪಿಗೆ ಹೊರಟು ನಿಂತಿದ್ದ ಶಂಕರ್‌ವಿಠಲ್ ಬಸ್ ಏರಿದೆವು. ಬಸ್ಸಿನಲ್ಲಿ ಕುಳಿತು ಬಿಸ್ಕಿಟ್ ಬಾಳೆಹಣ್ಣು ತಿಂದು ಹೊಟ್ಟೆ ತುಂಬಿಸಿಕೊಂಡೆವು. ಉಡುಪಿಗೆ ಬಸ್ ಬಂದಾಗ ಸಂಜೆ ಘಂಟೆ 7.00 ಆಗಿತ್ತು. ಬಸ್‌ಸ್ಟ್ಯಾಂಡ್‌ನಲ್ಲಿ ಹುತೇಶ್ ಬಸ್ಸಿಗಾಗಿ ವಿಚಾರಿಸಿದಾಗ ಹುತೇಶ್ ಬಸ್ 5.00 ಘಂಟೆಗೆ ಬರಬೇಕಾಗಿತ್ತು. ಅದು ಇನ್ನೂ ಬರಲಿಲ್ಲ ಎಂದು ಅದಕ್ಕೆ ಸಂಬಂಧಪಟ್ಟವರು ಹೇಳಿದರು. 7.15ಕ್ಕೆ ಹುತೇಶ್ ಬಸ್ಸು ಬಸ್ ನಿಲ್ದಾಣಕ್ಕೆ ಬಂದಾಗ ಆದ ಆನಂದ ಹೇಳತೀರದು. ನನ್ನ ಟ್ರಂಕನ್ನು ನಾನು ತೆಗೆದುಕೊಂಡು ಬಳಿಕ ನನ್ನ ಸೋದರ ಮಾವ ಬಿಟ್ಟಾಡಿ **ಕೆ. ಗುರುರಾಜ್ ಭಟ್** ಅವರ ಮನೆಯಲ್ಲಿ ರಾತ್ರಿ ಉಳಿದೆ. **ದುಡ್ಡಿಗಾಗಿ ನಾನು ಪಟ್ಟ ಕಷ್ಟ ಎಂದಿಗೂ ಯಾರಿಗೂ ಬರಬಾರದು ಎಂದು ಇಂದಿಗೂ ನೆನಪಿಸುತ್ತಾ ಇರುತ್ತೇನೆ.**

1972ರಲ್ಲಿ ಪೈಂಟಿಂಗ್ ಡಿಪ್ಲೊಮಾ ಪರೀಕ್ಷೆಗೆ ಪ್ರೈವೆಟಾಗಿ ಕುಳಿತು ಪಾಸಾದೆ. ಹಾಗಾಗಿ ಎ.ಎಂ.ಜಿ.ಡಿ ಎಂಬ ಎರಡು ಪದವಿ ಪಡೆದೆ. **ಎ.ಎಂ** ಅಂದರೆ ಆರ್ಟ್‌ಮಾಸ್ಟರ್ **ಜಿ.ಡಿ** ಎಂದರೆ ಗವರ್ಮೆಂಟ್ ಡಿಪ್ಲೋಮಾ ಇನ್ ಆರ್ಟ್ ಎಂದು. ಈ ಎರಡು ಡಿಗ್ರಿಗಳು ಚಿತ್ರಕಲೆಯಲ್ಲಿ ಅತ್ಯುನ್ನತ ವಿದ್ಯಾಭ್ಯಾಸವಾಗಿತ್ತು.

ನನ್ನ ದೊಡ್ಡ ಅಕ್ಕ ಸುಮತಿ ಅಕ್ಕ ಸ್ವಲ್ಪ ಸಮಯಕ್ಕಾಗಿ ತಾನು ಫಲಿಮಾರಿಗೆ ಸಂಸಾರಸಮೇತ ಬಂದು ನೆಲೆಸುವುದಾಗಿ ಹೇಳಿದರು. ಮುಂಡ್ಕೂರಿನಲ್ಲಿದ್ದ ಎಂ. ಪದ್ಮನಾಭ ಭಟ್‌ರವರು ನನ್ನ ಪ್ರೀತಿಯ ಭಾವ ಬಹಳ ಸೌಮ್ಯ ಸ್ವಭಾವದ ಸದ್ಗುಣ ಸಂಪನ್ನರಾದ ಅತೀ ಸಾಧು ಸ್ವಭಾವದ ಭಾವನವರಿಗಾಗಿ ಫಲಿಮಾರಿಗೆ ಬರುವಂತೆ ತಿಳಿಸಿದೆ. ಅವರಿಗೆ ಶ್ರೀಕಲಾ, ಶ್ರೀಲತಾ, ರಾಘವೇಂದ್ರ, ನಾರಾಯಣರೆಂಬ ನಾಲ್ಕು ಮಕ್ಕಳಿದ್ದರು. ಶ್ರೀಕಲಾ ಹಾಗೂ ಶ್ರೀಲತಾರವರನ್ನು ಫಲಿಮಾರಿನ ಪ್ರೈಮರಿ ಶಾಲೆಗೆ ಸೇರಿಸಿದೆ. ನನಗೆ ಆವಾಗ ಮದುವೆಯಾಗಿರಲಿಲ್ಲ. **ಕಮಲಕ್ಕ** ಎನ್ನುವವರ ಬಾಡಿಗೆ ಮನೆಯಲ್ಲಿ ಅಕ್ಕನವರೊಂದಿಗೆ 2–3 ವರ್ಷ ಕಳೆದೆ. ನಮ್ಮ ಬಾಡಿಗೆ ಮನೆಯ ಇನ್ನೊಂದು ಪಾರ್ಶ್ವದಲ್ಲಿ ಹೋಟೇಲ್

ಬಾಬುರಾಯರ ತಮ್ಮ **ದೋಜರ** ಹೆಂಡತಿ **ಪದ್ಮಾಕ್ಷಮ್ಮ** ಬಾಡಿಗೆಗೆ ಇದ್ದರು. ಅವರಿಗೆ **ಸುಮತಿ, ಪ್ರಭಾ, ಜಯಲಕ್ಷೀ (ಅಮ್ಮಿ), ಗುರುರಾಜ, ಸುರೇಶ** ಎಂಬ ಐದು ಮಕ್ಕಳಿದ್ದರು. ತುಂಬಾ ಬಡತನ ಅವರನ್ನು ಬಾಧಿಸುತ್ತಿತ್ತು. ಮಕ್ಕಳು ದೊಡ್ಡವರಾದಾಗ ಸುಖ ಪಡೆಯುವಂತಾಯ್ತು.

**ಮರೆಯಲಾಗದ ಘಟನೆ : ಪ್ರಥಮ ವಧೂ ಅನ್ವೇಷಣೆಯಲ್ಲಿ ಕಹಿ ಅನುಭವ.**

ನನ್ನ ತಂದೆಯ ಅಕ್ಕನ ಮಗ (ಜಲಜ ವಿಠಲದಾಸಾರ್ಯರ ಮಗ) **ಬೆಳ್ಳೆ ಗುರುರಾಜ ಆಚಾರ್ಯರು** ಆವಾಗ ಹೊಳೆನರಸೀಪುರದಲ್ಲಿ ನನ್ನ ಚಿಕ್ಕಪ್ಪ ನಾರಾಯಣ ಉಪಾಧ್ಯಾಯರ ಹೋಟೆಲ್ ನಡೆಸಿಕೊಂಡು ಹೋಗುತ್ತಿದ್ದರು. ಹಾಸನ ಜಿಲ್ಲೆಯಲ್ಲಿ ಹೊಳೆನರಸೀರಪುರ ತಾಲೂಕು ಕೇಂದ್ರ. ನನಗೆ ಎಪ್ರಿಲ್ 10ನೇ ತಾರೀಕಿನಿಂದ ಮೇ 30ರ ತನಕ ಶಾಲೆಗೆ ಬೇಸಿಗೆ ರಜೆ ಇತ್ತು. ಈ ರಜೆಯಲ್ಲಿ ತಿರುಗಾಡಿಗೊಂಡು ಹೊಳೆ ನರಸೀಪುರಕ್ಕೆ ಹೋಗಿದ್ದೆ. ಆವಾಗ ಅಲ್ಲಿ ಗುರುರಾಜ ಭಾವನ ಒತ್ತಾಯಕ್ಕೆ ಪ್ರಥಮವಾಗಿ ತಂದೆ ತಾಯಿಯವರ ಒಪ್ಪಿಗೆ ಪಡೆಯದೆ ಹುಡುಗಿ ನೋಡುವ ಸಂಭವ ಬಂತು. ಗುರುರಾಜ ಭಾವನ ಗೆಳೆಯರೊಬ್ಬರ **"ಲಂಚ್ ಹೋಂ"** ಎಂಬ ಹೋಟೇಲಿತ್ತು. ಅವರಿಗೆ ಒಬ್ಬಳು ಮಗಳು ಇದ್ದಳು. ಅವರಲ್ಲಿ ಬಾವ ಮಾತನಾಡಿ ನನ್ನನ್ನು ಒತ್ತಾಯ ಪೂರ್ವಕವಾಗಿ ಒಪ್ಪಿಸಿ ಸಂಜೆ 5 ಗಂಟೆಗೆ ಬರುವುದಾಗಿ ಹೇಳಿದರು. ನಾನು ಗಡ್ಡ ಎಲ್ಲ ತೆಗೆದು ರೆಡಿಯಾದೆ. ಬಟ್ಟೆಗೆ ಇಸ್ತ್ರಿ ಹಾಕಿಸಿ ತಂದು ಕೊಟ್ಟರು. ಮನಸ್ಸಿಲ್ಲದ ಮನಸ್ಸಿನಿಂದ ಹೆದರಿ ಹೆದರಿ ಬಾವ ಅಕ್ಕನವರ ಜೊತೆಗೆ ಅಲ್ಲಿಗೆ ಹೋದೆವು. ಮನೆ ಒಳಗೆ ಕಾಲು ಇಟ್ಟಾಗ ಕಾಲು ಗಡಗಡ ನಡುಗುತ್ತಿತ್ತು. ನನ್ನನ್ನು ಅವರು ವಿಚಾರಿಸಿದರು. ಮಾತು ಮುಗಿದ ಬಳಿಕ ಹುಡುಗಿ ಬಂದು ನಮಸ್ಕರಿಸಿದಳು. ಹುಡುಗಿ ನೋಡಿದ ನನಗೆ ಒಪ್ಪಿಗೆ ಆಯ್ತು. ಆದರೆ ಒಪ್ಪಿಗೆಯ ಬಗ್ಗೆ ಅವರಲ್ಲಿ ಯಾರಲ್ಲೂ ಹೇಳಲಿಲ್ಲ. ಹೊರಗೆ ಬಂದ ನಂತರ ಬಾವನವರಲ್ಲಿ ಜಾತಕ ಘಟನೆಯಾದರೆ ನೋಡೋಣ ಎಂದೆ.

ಬಳಿಕ ನನಗೆ ಧಾರವಾಡದಲ್ಲಿ 1972ರಲ್ಲಿಯ ಡಿಪ್ಲೋಮಾ ಪರೀಕ್ಷೆಗೆ ಹಾಜರಾಗಬೇಕಾಗಿತ್ತು. ದಾರವಾಡಕ್ಕೆ ಹೋದ ನಂತ್ರ ಅಲ್ಲಿಂದ ತಂದೆಯವರಿಗೆ ಹುಡುಗಿ ನೋಡಿದ ವಿಷಯ ಕಾಗದ ಬರೆದೆ. ನಮಗೆ ಡಿಪ್ಲೋಮಾ ಪರೀಕ್ಷೆ ಸಾಮಾನ್ಯ ಒಂದು ತಿಂಗಳು ಇರುತ್ತಿತ್ತು. 15 ದಿವಸದ ಒಂದು ಪೇಪರ್ 75 ಘಂಟೆ ಇದಕ್ಕೆ **"ಕೋಂಪೋದೀಶನ್"** ವಿಷಯ ಎಂದು ಹೆಸರು. ನಾಲ್ಕೈದು ವಿಷಯಗಳಲ್ಲಿ ನಾವು ಒಂದನ್ನು ಆಯ್ಕೆ ಮಾಡಬೇಕು. ನಾನು ಆಯ್ಕೆ ಮಾಡಿದ್ದು "In the Temple" ದೇವಸ್ಥಾನದ ಒಳಗೆ ಎನ್ನುವ ವಿಷಯ. ಒಂದು ದಿನ ಸ್ಕೆಚ್ ಮಾಡಬೇಕು. 3 ದಿನ ಅದನ್ನು ವಾಟರ್ ಕಲ್ಲರ್‌ನಲ್ಲಿ 15"*22" ಅಳತೆಯಲ್ಲಿ ಬಿಡಿಸಬೇಕು. ಬಳಿಕ 11 ದಿನ ಎಂದರೆ 55 ಗಂಟೆಗಳಲ್ಲಿ ಅದೇ ಚಿತ್ರವನ್ನು ತೈಲ ಚಿತ್ರವಾಗಿ ಬಿಡಿಸಬೇಕಿತ್ತು. 3 ಅಡಿ 4 ಅಡಿ ಬೋರ್ಡ್ ಕೊಡುತ್ತಿದ್ದರು. ಈ ಸಮಯದಲ್ಲಿ ಹನ್ನೊಂದು ದಿನಗಳಲ್ಲಿ ನಮಗೆ ಮನಸ್ಸಾದಾಗ ಚಿತ್ರ ಮಾಡಬಹುದು. ರೆಸ್ಟ್ ತೆಗೆದುಕೊಳ್ಳಬಹುದು. ರಜೆ ಹಾಕಬಹುದು. ಇದಕ್ಕೆಲ್ಲಾ ಅವಕಾಶವಿತ್ತು. ಕೆಲವು ಕಲಾವಿದ್ಯಾರ್ಥಿಗಳು ಸಿಗರೇಟು ಸೇದುತ್ತಿದ್ದರು. ಒಂದು ದಿನ ನನ್ನ ತಂದೆಯವರಿಂದ ಸುದೀರ್ಘವಾದ ಪತ್ರ ಬಂತು. ಆ ಪತ್ರದ ಕೆಲವು

ಒಕ್ಕಣೆಗಳು ಈಗಲೂ ನನ್ನ ಕಣ್ಣ ಮುಂದೆ ಇದೆ. **"ನಿನಗೆ ಈಗ 25-26 ವರ್ಷ, ಮದುವೆಗೆ ಅವಸರವೇನು? ನಿನ್ನ ತಂಗಿಗೆ ಬಾಯಿ ಬರುವುದಿಲ್ಲ. ಬಾಯಿ ಬಾರದ ತಂಗಿಯ ಮದುವೆ ಬಗ್ಗೆ ನಿನಗೆ ಜವಾಬ್ದಾರಿಯೇ ಇಲ್ಲ. ಒಕ್ಕಲು ಮಸೂದೆ ಬಂದಿದೆ ಒಕ್ಕಲಿನವರು ಗೇಣಿ ಕೊಡದಿದ್ದರೆ ನಾವು ಗಂಜಿ ಉಂಡು ಜೀವಿಸಬೇಕಾದೀತು. ನಿನಗೆ 10 ಸಾವಿರಕ್ಕಿಂತ ಹೆಚ್ಚು ವರದಕ್ಷಿಣೆ ಕೊಟ್ಟು ಹುಡುಗಿ ಕೊಡುವವರು ಇದ್ದಾರೆ. ಗುರುರಾಜ (ಅಂದರೆ ನನ್ನ ಬಾವ ಅವರಿಗೆ ಅಳಿಯ ಆಗಬೇಕು) ಮದುವೆಯ ದಲ್ಲಾಳಿಯೇ ? ಅವನಿಗೆ ಈ ಮದುವೆ ಮಾಡಿಸಿದರೆ ಎಷ್ಟು ಕಮಿಷನ್ ಸಿಗುತ್ತದೆಯಂತೆ? ಅವನಿಗೂ ನಿನಗೆ ಬರೆದಂತೆ ಪತ್ರ ಬರೆದಿದ್ದೇನೆ.** ಎಂದು ಬರೆದಿದ್ದರು. ಮನಸ್ಸಿಗೆ ನೋಯುವಂತೆ ಎಂದೂ ಮರೆಯಲಾಗದಂತಹ ಶಬ್ದದಿಂದ ಬರೆದ ಸುದೀರ್ಘ ಪತ್ರ ಕೈ ಸೇರಿತು. 11 ದಿನದ ಪರೀಕ್ಷೆಯಲ್ಲಿ 3 ದಿನ ಹಾಜರಾಗಿದ್ದೆ. 4ನೇ ದಿನಕ್ಕೆ ಈ ಪತ್ರ ಬಂತು. ಬಳಿಕ ತಲೆ ಮೇಲೆ ಕೈ ಇಟ್ಟುಕೊಂಡು ಕುಳಿತೆ. ಒಂದೆರಡು ದಿನ ಪರೀಕ್ಷೆಗೂ ಹಾಜರಾಗಲಿಲ್ಲ. ನನ್ನ ಗೆಳೆಯನೊಬ್ಬನಲ್ಲಿ ಈ ವಿಷಯ ತಿಳಿಸಿದೆ. ಅವನ ಅಭಿಪ್ರಾಯದಂತೆ ತಂದೆಯವರಿಗೆ ನಾನೂ ಒಂದು ಪತ್ರ ಬರೆದೆ. **"ಬಾಯಿ ಬಾರದ ತಂಗಿಗಿಂತಲೂ ತಂದೆಯಾದ ನಿಮಗೆ ಜವಾಬ್ದಾರಿ ಹೆಚ್ಚಲ್ಲವೇ. 10 ಸಾವಿರ ವರದಕ್ಷಿಣೆ ತೆಗೆದುಕೊಂಡು ಹುಡುಗಿಯನ್ನು ಗಂಜಿ ಹಾಕಿ ಸಾಕುವುದೆ ?"** ಹೀಗೆ ಗೆಳೆಯ ಹೇಳಿದಂತೆ ನಾನೂ ಒಂದು ಪ್ರತ್ಯುತ್ತರ ಬರೆದು ತಂದೆಯವರಿಗೆ ಕಳುಹಿಸಿದೆ.

"ಹುಡುಗನ ತಂಗಿಗೆ ಬಾಯಿ ಬರುವುದಿಲ್ಲ ಅವಳಿಗೆ ಮದುವೆ ಆದ ನಂತ್ರ ಮದುವೆ ಆಗುವುದರಿಂದ ಬೇರೆ ಹುಡುಗನನ್ನು ನೋಡಲಿ" ಹುಡುಗಿಯ ಮನೆಯವರಿಗೆ ತಿಳಿಸಿ ಎಂದು ಗುರುರಾಜ ಬಾವನವರಿಗೆ ತಂದೆಯವರ ಈ ಅಭಿಪ್ರಾಯಕ್ಕೆ ಕ್ಷಮೆಯಾಚಿಸಿ ಒಂದು ಪತ್ರ ಬರೆದೆ.

ಅಂತೂ ನನಗೆ ಹೊಳೆ ನರಸೀಪುರದಲ್ಲಿ ನೋಡಿದ ಹುಡುಗಿಯ ಕೈ ಹಿಡಿಯುವ ಯೋಗವಿರಲಿಲ್ಲ. ಪರೀಕ್ಷೆ ಮುಗಿಸಿ ಊರಿಗೆ ಬಂದವ ಫಲಿಮಾರಿನಿಂದ ಮಾಣಿಬೆಟ್ಟಿಗೆ ಹೋಗಲೇ ಇಲ್ಲ. 3 ತಿಂಗಳು ಹೋಗಲಿಲ್ಲ. ನನ್ನ ತಂದೆಯ ತಾಯಿ ನನ್ನ ಅಜ್ಜಿಗೆ ನಾನೆಂದರೆ ಬಹಳ ಇಷ್ಟ. ಮನೆಗೆ ಹೋದಾಗಲೆಲ್ಲಾ ನನ್ನನ್ನು ತುಂಬಾ ಪ್ರೀತಿಯಿಂದ ಮಾತನಾಡಿಸುತ್ತಿದ್ದರು, ತಿಂಡಿ ಕೊಡುತ್ತಿದ್ದರು. ಬೇರೆ ಯಾರಿಗೂ ತಿಳಿಯದಂತೆ ಗುಟ್ಟಾಗಿ ಬಿಸಿಬಿಸಿ ದೋಸೆ ಕೊಟ್ಟು ತಿನ್ನು ಎಂದು ಕೊಟ್ಟಿಗೆಗೆ ಕತ್ತಲಿಗೆ ಕಳುಹಿಸುತ್ತಿದ್ದರು. ನನಗೆ ಬೆಣ್ಣೆ ಎಂದರೆ ಇಷ್ಟ ಎಂದು ಬೆಣ್ಣೆ ಹಾಕಿ ಕೊಡುತ್ತಿದ್ದರು. ಅಮ್ಮನಿಗಿಂತಲೂ ನನಗೆ ಅಜ್ಜಿ ಎಂದರೆ ಬಹಳ ಪ್ರೀತಿ. 3 ತಿಂಗಳು ಮನಗೆ ಹೋಗದಿದ್ದಾಗ ಅಜ್ಜಿ ನನಗಾಗಿ ಹಂಬಲಿಸುತ್ತಿದ್ದರಂತೆ, ಕೂಗುತಿದ್ದರಂತೆ. ಇದನ್ನು ನನ್ನ ಸುಮತಿ ಅಕ್ಕ ಮಾಣಿಬೆಟ್ಟಿಗೆ ಹೋಗಿ ಬಂದಾಗ ತಿಳಿಸಿದರು. ತಂದೆಯ ಪತ್ರದಿಂದ ನೊಂದ ನಾನು ಅಜ್ಜಿಯ ಪ್ರೀತಿಗೆ ಸೋತು ಮಾಣಿಬೆಟ್ಟಿನ ನಮ್ಮ ಮನೆ ಮೂಡುಮಠಕ್ಕೆ 3 ತಿಂಗಳ ಬಳಿಕ ಹೋಗಲೇ ಬೇಕಾಯ್ತು. ಅಜ್ಜಿಯ ಅಭಿಪ್ರಾಯದಂತೆ ತಂದೆಯವರಿಗೆ ಕ್ಷಮೆಯಾಚಿಸಿ ಉದ್ದಂಡ ನಮಸ್ಕರಿಸಿದೆ. ಬಳಿಕ ನನ್ನ ಬಾಯಿಬಾರದ ತಂಗಿಗೆ ವರಾನ್ವೇಷಣೆಗೆ ತೊಡಗಿದೆ. ಫಲಿಮಾರಿನ ಹತ್ತಿರದ ನಂದಿಕೂರಿನಲ್ಲಿ ನನ್ನ ಆತ್ಮೀಯರಾದವರು **ಶ್ರೀ ಅನಂತಣ್ಣ ಮುಚ್ಚಿಂತಾಯರು** ಇದ್ದರು. ಇವರು ಫಲಿಮಾರು ಮಠದ ಮೆನೇಜರ್ ಆಗಿದ್ದರು. ಇವರ

ತಮ್ಮ **ಶ್ರೀ ರಾಘವೇಂದ್ರ** ನನ್ನ ವಿದ್ಯಾರ್ಥಿ. ನನ್ನ ತಂಗಿಯ ಬಗ್ಗೆ ತಿಳಿದ ಅನಂತಣ್ಣ ಅವರ ದೂರದ ಕುಟುಂಬದ ಒಬ್ಬರು ಹುಡುಗ ಬಾಯಿ ಬಾರದ ಹುಡುಗಿಯೇ ಬೇಕು ಎಂದಿದ್ದ ಕಾರಣ ನನ್ನನ್ನು ಭೇಟಿ ಮಾಡಿಸಿದರು. ಮಾಣಿಬೆಟ್ಟಿನಲ್ಲಿ ನಮ್ಮ ಮನೆಗೆ ಒಮ್ಮೆ ಅವರನ್ನು ಅನಂತಣ್ಣನವರ ಜೊತೆಗೆ ಕರಕೊಂಡು ಹೋಗಿ ನನ್ನ ತಂಗಿ **ತ್ರಿವೇಣಿ**ಯನ್ನು ತೋರಿಸುವ ವ್ಯವಸ್ಥೆ ಆಯಿತು. ಹುಡುಗನ ಹೆಸರು **ಗೋಪಾಲ್ ಮುಚ್ಚಿಂತ್ತಾಯ** ಎಂದು. ತಂದೆಯವರು ಕೂಡಲೇ ಒಪ್ಪಿಗೆ ಕೊಡಲಿಲ್ಲ. ಹುಡುಗನ ಬಗ್ಗೆ ಸರಿಯಾಗಿ ತಿಳಿದುಕೊಂಡು ಕರಕೊಂಡು ಬಾ ಎಂದರು. ಅನಂತಣನವರಲ್ಲಿ ಗೋಪಾಲ್ ಮುಚ್ಚಿಂತಾಯರ ಬಗ್ಗೆ ತಿಳಿದು ಅವರ ಗುಣನಡತೆ ಎಲ್ಲಾ ತಿಳಿದು ಹೇಗೂ ಮದುವೆಗೆ ತಂದೆಯವರನ್ನು ಒಪ್ಪಿಸಿದೆ. ಗೋಪಾಲ್ ಮುಚ್ಚಿಂತಾಯರು ಮೂಕಿಯನ್ನೇ ಮದುವೆಯಾಗಲು ಒಂದು ಕಾರಣವಿತ್ತು. ಗೋಪಾಲ್ ಮುಚ್ಚಿಂತಾಯರ ತಾಯಿ ಮಾತಿನಲ್ಲಿ ಜಗಳ ಗಂಟಿಯಂತೆ. ಗೋಪಾಲ್ ಮುಚ್ಚಿಂತಾಯರ ಅಣ್ಣ–ತಾಯಿ ಇವರು ಒಟ್ಟಾಗಿ **"ಬೋಡಿ"** ಎಂಬಲ್ಲಿ ಹೊಟೇಲ್ ಉದ್ಯಮದಲ್ಲಿದ್ದರು. ಮದುವೆಯಾದ ಮರುದಿನದಿಂದ ಅಣ್ಣನ ಹೆಂಡತಿಯಲ್ಲಿ ಇವರ ಅಮ್ಮ ದಿನಾ ಜಗಳ ಮಾಡುತ್ತಿದ್ದರಂತೆ. ಜಗಳ ಮಾಡಿ ಮಾಡಿ ಒಂದು ದಿನ ಅಣ್ಣ ಅತ್ತಿಗೆಯಿಂದಾಗಿ ಬೇರೆ ಮನೆ ಮಾಡುವಂತಾಯ್ತು. ಬೇರೆ ಬೇರೆ ಮನೆಯಲ್ಲಿ ಇದ್ದರು. ತಾಯಿಯ ಈ ವರ್ತನೆಯಿಂದ ನೊಂದ ಗೋಪಾಲ್ ಮುಚ್ಚಿಂತಾಯರು ಮದುವೆಯೇ ಬೇಡವೆಂದು 40 ವರ್ಷ ಕಾದರು. ಅಮ್ಮನ ಒತ್ತಾಯಕ್ಕೆ ಮದುವೆಗೆ ಒಪ್ಪಿಕೊಂಡು ಬಾಯಿ ಬಾರದ ಹೆಂಡತಿಯಾದರೆ ತನ್ನ ಅಮ್ಮನಲ್ಲಿ ಜಗಳ ಮಾಡಲು ಸಾಧ್ಯವಿಲ್ಲ ಎಂದು ಮನವರಿಕೆ ಮಾಡಿಕೊಂಡು ಮೂಕಿಯನ್ನೇ ಮದುವೆ ಮಾಡಿಕೊಳ್ಳುವುದಾಗಿ ನಿಶ್ಚಯಿಸಿಕೊಂಡರು.

ನನ್ನ ತಂಗಿಗೆ ಮದುವೆಯ ಕಂಕಣ ಬಲವಿದ್ದುದರಿಂದ ಹೀಗೊಂದು ಸಂಬಂಧ ಕೂಡಿ ಬಂತು. ನಮ್ಮ ಮಾಣಿಬೆಟ್ಟಿನ ಮೂಡುಮಠದಲ್ಲಿ ಮದುವೆ ಸಮಾರಂಭ ನಡೆಯಿತು. ನಮ್ಮ ಒಕ್ಕಲಿನಲ್ಲಿದ್ದ **ಸೀತಾ–ಗಿರಿಯಾಚಾರಿ** ಪಾಲೆಯ ಮರದ ರೀಪುಗಳಿಂದ ಮಂಟಪ ಮಾಡಿಕೊಟ್ಟ. ನಾನು ಮತ್ತು ತಂದೆಯವರು ಸೇರಿ ಬೆಗಡೆ ಪೇಪರ್–ಬಣ್ಣ–ಕಾಗದಗಳಿಂದ ಮಾಲೆ ತೋರಣಗಳಿಂದ ನಮ್ಮ ಪಡುಬದಿಯ ಚೌಕಿಯಲ್ಲಿ ಮಂಟಪ ಹಾಕಿದೆವು. 80–100 ಜನರ, ಹೆಚ್ಚು ವಿಜ್ರಂಭಣೆ ಇಲ್ಲದ ಸಾಮಾನ್ಯ ವಿವಾಹ. ಮೂಕಿ ಹುಡುಗಿಗೆ ಮದುವೆಯಾದುದು ನಮ್ಮ ಸಂಬಂಧಿಗಳಿಗೆಲ್ಲಾ ತುಂಬಾ ಸಂತೋಷ.

## "ಕಟೀಲು ಪ್ರಾಥಮಿಕ ಶಾಲೆಯಲ್ಲಿ ಸತ್ಯಭಾಮಳೊಂದಿಗೆ ನನ್ನ (ಗೋಪಾಲಕೃಷ್ಣ) ಮದುವೆ"

ನನ್ನ ಪ್ರೀತಿಯ ಅಜ್ಜಿಗೆ 83 ವರ್ಷ. ಅಷ್ಟರತನಕ ಅಡುಗೆಕೋಣೆ ಒಳಗೆ ತನ್ನದೇ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಕಣ್ಣು ಸರಿಯಾಗಿ ಕಾಣುತ್ತಿರಲಿಲ್ಲ. ಆದರೂ ಅಡುಗೆಯಲ್ಲಿ ನನ್ನ ಅಮ್ಮನ ಸಹಾಯ ಪಡೆದುಕೊಳ್ಳುತ್ತಿದ್ದ ಅಜ್ಜಿ ಒಮ್ಮೆ ಅನಾರೋಗ್ಯದಲ್ಲಿ ಬಿದ್ದರು. ಆ ಕಾರಣದಿಂದ ಅಡುಗೆ ಜವಾಬ್ದಾರಿ ಅಮ್ಮ ವಹಿಸಿಕೊಂಡರು. ಅಜ್ಜಿ ಹಾಸಿಗೆ ಹಿಡಿದರು. ನನಗೆ ಅಡುಗೆ ಮಾಡಲಿಕ್ಕೆ ಆಗುವುದಿಲ್ಲ. ಆದ್ದರಿಂದ ನಾನು ಬೇಗ ಸಾಯುವುದು ಒಳ್ಳೆಯದು ಎಂದು ಅಜ್ಜಿ ಹೇಳುತ್ತಿದ್ದರು. 15 ದಿನಗಳಲ್ಲಿ ಹಾಸಿಗೆಯಲ್ಲಿದ್ದರು. ಆ ಸಮಯ

ನಮ್ಮ ಹತ್ತಿರದ ಬಂಧುಗಳು ಸಂಬಂಧಿಕರು ಬರುತ್ತಿದ್ದರು. ಅಜ್ಜಿಯವರನ್ನು ನೋಡಲು ಬಂದವರಲ್ಲಿ ನನ್ನ ತಂದೆಯ ತಂಗಿ ಲಕ್ಷ್ಮೀ ಅತ್ತೆಯ ಮಗಳೂ ಬಬ್ಬಳು. ಅವಳ ಹೆಸರು **ಸತ್ಯಭಾಮ** ಆದರೆ ಎಲ್ಲರೂ ಅವಳನ್ನು **"ಸತ್ಯ"** ಎಂದೇ ಕರೆಯುತ್ತಿದ್ದರು. ನನ್ನ ತಂದೆಯ ತಂಗಿ **ಲಕ್ಷ್ಮೀ** ಎನ್ನುವವರನ್ನು ಶಿಬರೂರು ಮಠದ **ಶ್ರೀ ಅನಂತ ತಂತ್ರಿಗಳಿಗೆ** 2ನೇ ಮದುವೆ ಮಾಡಿಕೊಟ್ಟಿದ್ದರು. ಅನಂತ ಮಾವನವರ ಸುರುವಿನ ಪತ್ನಿಯಲ್ಲಿ 2 ಹುಡುಗಿಯರು ಒಬ್ಬ ಮಗ. ಕಟೀಲು **ಕೃಷ್ಣ ಅಸ್ರಣ್ಣರ** ಹೆಂಡತಿ **ಕಮಲ** ಮತ್ತು **ಕುತ್ತೆತ್ತೂರಿನ** ಭುಜಂಗ ರಾಯರ ಪತ್ನಿ ರತ್ನ ಎಂಬ ಹೆಸರಿನ ಹುಡುಗಿಯರು. ಶಿಬರೂರು ಮಠದಲ್ಲಿ ಅನಂತ ತಂತ್ರಿಗಳ ಮಗ **ಸುಬ್ರಾಯ ತಂತ್ರಿಗಳು** ವಾಸವಾಗಿದ್ದರು. ಅನಂತ ತಂತ್ರಿಗಳ ಮೊದಲ ಹೆಂಡತಿ ನಿಧನದ ಬಳಿಕ 2ನೇ ಮದುವೆಯಾದುದು ನನ್ನ ತಂದೆಯವರ ತಂಗಿ ಲಕ್ಷ್ಮೀಯನ್ನು. ಲಕ್ಷ್ಮೀ ಅತ್ತೆಯವರಿಗೆ 5 ಜನ ಗಂಡು ಮಕ್ಕಳು, ಒಂದು ಹೆಣ್ಣು. **ಪದ್ಮನಾಭ, ರಾಮಚಂದ್ರ, ವಿಠಲ, ನಾರಾಯಣ, ಗಣಪತಿ,** ಎಂದು ಐದು ಜನ. **ಸತ್ಯಭಾಮ** ಎನ್ನುವ ಒಬ್ಬಳು ಮಗಳು, ಅನಂತ ತಂತ್ರಿಗಳು, ಕೃಷ್ಣ ತಂತ್ರಿಗಳು, ಅಣ್ಣ ತಮ್ಮಂದಿರು. ಶಿಬರೂರು ಮಠದಲ್ಲಿ ಒಂದೇ ಮನೆಯಲ್ಲಿ ಇದ್ದರು. ಕೃಷ್ಣ ತಂತ್ರಿಗಳಿಗೆ **ಶ್ರೀ ಹಯಗ್ರೀವ ತಂತ್ರಿಗಳು** ಮಾತ್ರ ಒಬ್ಬ ಮಗ. ಶ್ರೀಮಂತ ಮನೆತನ ಅಲ್ಲದಿದ್ದರೂ ವಿದ್ವಾಂಸರು ಹಾಗೂ ಗೌರವಸ್ಥ ಮನೆತನದವರು. ಇಬ್ಬರಿಗೂ ಕಟೀಲು ಆಸುಪಾಸಿನ ಕೆಲವೆಲ್ಲಾ ದೇವಸ್ಥಾನದ ತಂತ್ರಿಗಳ ಕೆಲಸ ಇರುತ್ತಿತ್ತು. ಶ್ರೀಯುತ **ಹಯಗೀವ** ತಂತ್ರಿಗಳಿಗೆ ವೇದವ್ಯಾಸ, ರಮೇಶ, ಮಹಾಲಕ್ಷ್ಮೀ, ಪದ್ಮಾಕ್ಷಿ ಎಂಬ ನಾಲ್ಕು ಮಕ್ಕಳು. 2ನೇ ಮಗ ರಮೇಶ ಎಂಬವರೇ ಈಗಿನ **ಪಲಿಮಾರು ಮಠದ ಶ್ರೀ ಶ್ರೀ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು**.



ಹಯಗ್ರೀವ ತಂತ್ರಿಗಳು ಮತ್ತು ಸತ್ಯಭಾಮ ನನ್ನ ಅಜ್ಜಿಗೆ ಸೌಖ್ಯವಿಲ್ಲದ್ದನ್ನು ಕೇಳಿ ಅಜ್ಜಿಯನ್ನು ನೋಡಲು ಮಾಣಿಬೆಟ್ಟಿಗೆ ಬಂದಿದ್ದರು. ಅಂದು ಭಾನುವಾರ ಆದುದರಿಂದ ನಾನು (ಫಲಿಮಾರಿನ ಶಾಲೆಯಲ್ಲಿ ಡ್ರಾಯಿಂಗ್ ಮಾಸ್ಟರ್ ಆಗಿದ್ದೆ) ಮಾಣಿಬೆಟ್ಟಿಗೆ ಬಂದಿದ್ದೆ. ಮಧ್ಯಾಹ್ನ ಊಟವಾದ ಬಳಿಕ ನಾನು ಫಲಿಮಾರಿಗೆ ಹಾಗೂ ಹಯಗ್ರೀವ ತಂತ್ರಿಗಳು ಶಿಬರೂರಿಗೆ ಹೊರಟೆವು. ಮಾಣಿಬೆಟ್ಟಿನಿಂದ ಮಂಚಕಲ್ಲಿಗೆ ಬಸ್ಸು ಇರಲಿಲ್ಲ ನಡೆದುಕೊಂಡೇ ಹೋಗಬೇಕು. ನಡಕೊಂಡು ಹೋಗುವಾಗ ಕಾಲಿಗೆ ಮೆಟ್ಟು ಹಾಕದೆ ನಡೆಯುತ್ತಿರುವ ಸತ್ಯಭಾಮನ ಕಷ್ಟದ ಪರಿಸ್ಥಿತಿಯನ್ನು ನೋಡಿದ ನನಗೆ ಇವಳನ್ನೇ ಮದುವೆ ಮಾಡಿಕೊಳ್ಳಬಹುದಲ್ಲಾ ಎಂದನಿಸಿತು. ನನ್ನ ಕೆಲವು ಆಸೆ ಆಕಾಂಕ್ಷೆಗಳಿತ್ತು. ನಮಗಿಂತ ಬಡವರಾಗಿರಬೇಕು. ನನಗಿಂತ ಕಡಿಮೆ ಕಲಿತ ಹುಡುಗಿಯಾಗಬೇಕು. ನನಗೊಪ್ಪುವ ರೂಪ ಇರಬೇಕು. ಈ ಎಲ್ಲಾ ಆಕಾಂಕ್ಷೆಗಳಿಗೆ ಸರಿಯಾಗಿರುವ ಹುಡುಗಿ **ಸತ್ಯಭಾಮ** ಆಗಿದ್ದಳು. ಜಾತಕ ಘಟನೆ ಕೂಡಿ ಬಂದರೆ ಮಾತ್ರ ಮದುವೆ ಆಗುವುದೆಂದು ನಿರ್ಧರಿಸಿದೆ.

ಮನೆಯಲ್ಲಿ ಈ ವಿಷಯ ಅಮ್ಮನಲ್ಲಿ ಹೇಳಿದೆ. ಅಮ್ಮ ಒಪ್ಪಿಗೆ ಕೊಟ್ಟರು. ತಂದೆಯವರು ತನ್ನ ಮಗನಿಗೆ ಶ್ರೀಮಂತರ ಹುಡುಗಿ ತರಬೇಕೆಂದಿದ್ದರು. ನಾನು ಸತ್ಯಭಾಮನ ಬಗ್ಗೆ ತಿಳಿಸಿದಾಗ ಹುಡುಗಿ ಮನೆಯಿಂದ ನಿನಗೆ ಏನೂ ಸಿಗಲಿಕ್ಕಿಲ್ಲ. ನನ್ನಿಂದ ಮದುವೆ ಖರ್ಚಿಗೆ ಏನೂ ಕೊಡುವುದಿಲ್ಲ ಎಂದುಬಿಟ್ಟರು. ನನಗೆ ವರದಕ್ಷಿಣೆ ಇಲ್ಲದೆ ಬಡವರ ಹುಡುಗಿಯನ್ನು ಮದುವೆ ಮಾಡಿಕೊಳ್ಳಬೇಕೆಂದಿತ್ತು. ತಂದೆಯವರು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಗೆ ಕೊಟ್ಟರು. ಸತ್ಯಭಾಮ ಅವರ ತಂಗಿಮಗಳು ಆದರೂ ಬಡವರು ಎನ್ನುವ ವಿಚಾರ ಅವರ ತಲೆಯಲ್ಲಿತ್ತು. ಕೃಷ್ಣ ಅಸ್ರಣ್ಣರಲ್ಲಿ ಹೇಳಿ ಜಾತಕ ತರಿಸಿಕೊಂಡು ಫಲಿಮಾರಿನಲ್ಲಿ **ಕೃಷ್ಣ ಉಡುಪರಲ್ಲಿ** (ಪುರೋಹಿತರು) ತೋರಿಸಿದೆ. ಅವರು ಈ ಜಾತಕ ಘಟನೆ ಆಗುವುದಿಲ್ಲ ಎಂದರು. ಫಲಿಮಾರಿನಲ್ಲಿದ್ದ ಪ್ರಖ್ಯಾತ ಆಯುರ್ವೇದ **ಡಾಕ್ಟರ್ ಹರಿ ಭಟ್** ಎನ್ನುವವರು ಜಾತಕ ಘಟನೆ ನೋಡುತ್ತಾರೆಂದು ತಿಳಿಯಿತು. ಅವರಲ್ಲಿಗೆ ಹೋಗಿ 2 ಜಾತಕ ಘಟನೆಯ ಬಗ್ಗೆ ವಿಚಾರಿಸಿದೆ. ಅವರು ಹುಡುಗಿಯ, ನನ್ನ ಜಾತಕ ತಾಳಿಮಾಡಿ ನೋಡಿ ಈ ಹುಡುಗಿಯೊಂದಿಗೆಯೇ ನಿಮಗೆ ಮದುವೆಯಾಗಲಿದೆ ಎಂದು ಬಿಟ್ಟರು. ಸತ್ಯಭಾಮಳ ತಂದೆ ಅನಂತ ತಂತ್ರಿಗಳು ಪಕ್ಷವಾತ ಖಾಯಿಲೆಯಿಂದ ಆವಾಗಲೇ 21 ವರ್ಷ ಕಳೆದಿದ್ದರು. ಹಾಸಿಗೆ ಹಿಡಿದಿದ್ದರು, ಬಲಕೈ, ಬಲಕಾಲಿನ ಶಕ್ತಿಯನ್ನು ಕಳೆದುಕೊಂಡಿದ್ದರು. ಅವರ ಆರೈಕೆಯನ್ನು ಲಕ್ಷ್ಮಿ ಅತ್ತೆಯವರೇ ಮಾಡುತ್ತಿದ್ದರು. ಇಂತಹ ಕಷ್ಟದ ಪರಿಸ್ಥಿತಿಯಲ್ಲಿರುವವರ ಮಗಳನ್ನು ನಾನು ಮದುವೆ ಮಾಡಿಕೊಂಡರೆ ಅವರಿಗೆ ತುಂಬಾ ಸಂತೋಷವಾಗುತ್ತದೆ. ಎಂಬ ಧೈರ್ಯದಿಂದ ಸತ್ಯಭಾಮಳನ್ನೇ ಮದುವೆ ಮಾಡಿಕೊಳ್ಳುವುದಾಗಿ ನಿರ್ಧರಿಸಿದೆ. ತಂದೆಯವರೂ ಮನಸ್ಸಿಲ್ಲದ ಮನಸ್ಸಿನಿಂದ ಒಂದು ದಿನ ನಾನು ಮತ್ತು ತಂದೆಯವರು ಶಿಬರೂರು ಮಠಕ್ಕೆ ಹೋಗಿ ಅಲ್ಲಿ ಯಾರೂ ಇರದ ಕಾರಣ ಪಟೇಲರ ಮನೆಗೆ ಹೋಗಿ ಕೃಷ್ಣ ಅಸ್ರಣ್ಣರ, ಶ್ರೀನಿವಾಸ ಅಸ್ರಣ್ಣರ ಪಟೇಲರ ಸಮ್ಮುಖದಲ್ಲಿ ನಿಶ್ಚಯ ತಾಂಬೂಲಕ್ಕೆ ಬರುವುದಾಗಿ ತಿಳಿಸಿದೆವು.





ನಿಶ್ಚಿತಾರ್ಥಕ್ಕೆ ಮದುಮಗನಾದ ನಾನು ಹೋಗುವ ಕ್ರಮ ಇರಲಿಲ್ಲ. ತಂದೆ ತಾಯಿಯವರೆಲ್ಲಾ ಹೋಗಿ ಹುಡುಗಿಗೆ ಉಂಗುರ, ಸೀರೆ ಕೊಟ್ಟು ಮದುವೆ ದಿನ ನಿಶ್ಚಯಿಸಿ ಬಂದರು. **ಶಿಬರೂರು ಶ್ರೀ ಅನಂತ ತಂತ್ರಿ ಮತ್ತು ಶ್ರೀಮತಿ ಲಕ್ಷ್ಮೀ ತಂತ್ರಿಯವರ ಮಗಳು ಸತ್ಯಭಾಮಳೊಂದಿಗೆ ಮಾಣಿಬೆಟ್ಟು ಶ್ರೀ ಎಂ. ರಾಮ ಉಪಾಧ್ಯಾಯರ ಮತ್ತು ಶ್ರೀಮತಿ ಕೃಷ್ಣವೇಣಿಯವರ ಮಗ ಗೋಪಾಲಕೃಷ್ಣನೊದಿಗೆ 12.05.1974ರಂದು ಕಟೀಲು ದುರ್ಗಾಪರಮೇಶ್ವರೀ ಸನ್ನಿಧಿಯಲ್ಲಿ** ವಿವಾಹ ಎಂಬುದಾಗಿ ಗುರುಹಿರಿಯರಿದ್ದು ನಿಶ್ಚಯವಾಯ್ತು. ನನ್ನಲ್ಲಿ ಮದುವೆ ಖರ್ಚಿಗೆ ಹಣ ಇರಲಿಲ್ಲ. ನನ್ನ ಆತ್ಮೀಯ ಗೆಳೆಯ ಬೆಳ್ಳೆ ಜಲಜ ಅತ್ತೆ ಮಗ **ಹಯವದನ** (ಕಂದು) ನನಗೆ 4 ಸಾವಿರ ಖರ್ಚಿಗಾಗಿ ಸಾಲ ನೀಡಿದ. ಮಣಿಪಾಲ ಪವರ್‌ಪ್ರೆಸ್ಸಿನಲ್ಲಿ ಅತೀ ಸರಳ ರೀತಿಯ ಆಮಂತ್ರಣ ಪತ್ರಿಕೆ ಮಾಡಿಸಿದೆ. ನನ್ನ



ಬಂಧು ಬಳಗದವರ ಮನೆಗೆ ನಾನೇ ಹೋಗಿ ಆಮಂತ್ರಿಸಿದೆ. 12.05.1974ರಂದು ಬೆಳಿಗ್ಗೆ ಮಾಣಿಬೆಟ್ಟುನಿಂದ ಮಸೀದಿ ತನಕ ಕಾರಿನಲ್ಲಿ ಬಂದೆವು. ಉಡುಪಿ, ಕಟೀಲು, ಮಂಗಳೂರು, ಹನುಮಾನ್ ಬಸ್ಸನ್ನು ನಮ್ಮ ದಿಬ್ಬಣಕ್ಕಾಗಿ ಬುಕ್ ಮಾಡಿಸಿದ್ದೆ. ಅದರಲ್ಲಿ ಕಟೀಲಿಗೆ 10 ಗಂಟೆಗೆ ಬಂದೆವು. ಅಸ್ರಣ್ಣರ ವಿಶ್ರಾಂತಿಗಾಗಿ ಇದ್ದ ತೇರ ಕೊಟ್ಟಿಗೆಯಲ್ಲಿ ಮದುಮಗನಾದ ನನಗೆ ಡ್ರೆಸ್ ಮಾಡಲಾಯ್ತು. (ಹಳೆ ಅಂಗಿ ತೆಗೆಯುವ ಗಡಿಬಿಡಿಯಲ್ಲಿ ಯಜ್ಞೋಪವೀತ ಆದರೊಂದಿಗೆ ಹೋಗಿ ಸ್ವಲ್ಪ ಹೊತ್ತು ಗಲಿಬಿಲಿಯಾಯ್ತು). ತಂದೆಯವರು ತನ್ನಲ್ಲಿದ್ದ ಯಜ್ಞೋಪವೀತದಲ್ಲಿ 3 ಎಳೆ ನನಗೆ ಹಾಕಿದರು.

ಕಟೀಲು ಹಾಯರ್ ಪ್ರೈಮರಿ ಶಾಲೆಯಲ್ಲಿ ವಿಜ್ರಂಭಣೆಯಿಂದ ವಿವಾಹ ನಡೆಯಿತು. ದೇವಸ್ಥಾನದಲ್ಲಿ ಊಟ. ಅನಂತ ತಂತ್ರಿಗಳು ಕಟೀಲಿನಲ್ಲಿ ಪ್ರಖ್ಯಾತ ತಂತ್ರಿಗಳು ಆದ ಕಾರಣದಿಂದ ಎಲ್ಲರಿಗೂ ಆತ್ಮೀಯರಾದುದರಿಂದ ಸುಮಾರು 1 ಸಾವಿರದಷ್ಟು ಜನ ಸೇರಿದ್ದರು. ಅಂದಿನ ದಿನಗಳಲ್ಲಿ ಅತೀ ವಿಜ್ರಂಭಣೆಯ ವಿವಾಹವೆಂದರೂ ತಪ್ಪಾಗದು. 14–5–1974 ನಮ್ಮ ಮನೆಯಲ್ಲಿ ಔತಣದ ಊಟ ಇತ್ತು. ಮದುಮಗನಾದ ನಾನು ಮನೆಯ ಯಾವುದೇ ವ್ಯವಸ್ಥೆಯಲ್ಲಿ ತಲೆ ಹಾಕದ ಕಾರಣ – ತಂದೆಯವರಿಗೆ ನನ್ನಲ್ಲಿ ಸಿಟ್ಟು ಇದ್ದ ಕಾರಣ (ಅವರ ಒಪ್ಪಿಗೆ ಇದ್ದ ಹುಡುಗಿ ಅಲ್ಲದ ಕಾರಣ) ಔತಣದ ದಿನವೇ ನನಗೆ ಮತ್ತು ತಂದೆಯವರಿಗೆ ಸ್ವಲ್ಪ ಸಿಟ್ಟಿನಿಂದ ಮಾತುಕತೆ ನಡೆಯಿತು. ನಮ್ಮ ದಾಂಪತ್ಯ ಪ್ರಾರಂಭವಾದದ್ದು ಮೂಡುಮಠದ ದೇವರ ಕೋಣೆಯಲ್ಲಿ.

**ಮರೆಯಲಾಗದ ಘಟನೆ – ಟಿ.ಬಿ. ಡ್ಯಾಂ ನೋಡಿದ್ದು:** ಶಾಲೆಗೆ ರಜೆ ಇದ್ದ ಕಾರಣ ಹೊಸ ಹುರುಪಿನಿಂದ ನವದಂಪತಿಗಳಾಗಿ ಹೆಚ್ಚಿನ ಸಂಬಂಧಿಕರ ಮನೆಗೆಲ್ಲಾ ಹೋದೆವು. ಮದುವೆನಂತ್ರ ಮಂತ್ರಾಲಯಕ್ಕೆ **ಶ್ರೀ ರಾಘವೇಂದ್ರ ಸ್ವಾಮಿಗಳ** ದರ್ಶನಕ್ಕೆ ಹರಕೆ ಹೇಳಿಕೊಂಡಿದ್ದೆನಾದ್ದರಿಂದ ಜೊತೆಯಾಗಿ ಬಳ್ಳಾರಿಯಾಗಿ ಮಂತ್ರಾಲಯಕ್ಕೆ ಹೋದೆವು. ಹೊಸಪೇಟೆಯಲ್ಲೊಂದು ವಸತಿಗೃಹದಲ್ಲಿ ಒಂದು ರಾತ್ರಿ ಕಳೆಯಬೇಕಾದ ಸಂದರ್ಭ ಬಂತು. ಬೆಳಿಗ್ಗೆ ಎದ್ದು ಟಿಫಿನ್ ಮುಗಿಸಿ ತುಂಗಭದ್ರಾ ಅಣೆಕಟ್ಟು ನೋಡಲು ಸತ್ಯಭಾಮಳನ್ನು ಹೊರಡು ಎಂದೆ. ಮುಂಚಿನ ದಿನ ಹಂಪೆ ವಿರೂಪಾಕ್ಷ ದೇವಸ್ಥಾನ ಅಲ್ಲಿಯ ರಥ, ಸಭಾಮಂಟಪ, ಕೊಳ, ಕೃಷ್ಣದೇವರಾಯನ ರಾಜ ದರ್ಬಾರ್, ಸಂದರ್ಭದ ಹಾಳಾಗಿ ಹೋಗುತ್ತಿರುವ ಸ್ಥಳಗಳನ್ನು ಸತ್ಯಭಾಮ ಮತ್ತು ನಾನು ನೋಡಿ ತಿರುಗಾಡಿ ಸೋತು ಹೋಗಿರುವುದರಿಂದ ಬರುವುದಿಲ್ಲ ಎಂದು ಬಿಟ್ಟಳು. ನನಗೆ **ಟಿ.ಬಿ. ಡ್ಯಾಂ** ನೋಡಬೇಕೆಂಬ ಬಯಕೆ ಹಾಗೂ ಇವಳನ್ನು ಬಿಟ್ಟು ಹೋಗಬೇಕಾದ ಪ್ರಸಂಗ. ಮದುವೆಯಾಗಿ ಹೊಸ ದಾಂಪತ್ಯದಲ್ಲಿ ಹೆಂಡತಿ ಬಿಟ್ಟು ಹೋಗುವುದಕ್ಕೆ ಹೆದರಿದ ನಾನು ರೂಂಗೆ ಬೀಗ ಹಾಕಿ ಹೊರಟೆ. ಬಸ್ಸಿನಲ್ಲಿ ಹೋಗುತ್ತಿರುವಾಗ ಎತ್ತರದ ಬೆಟ್ಟ ಕಂಡಿತು. ಈ ಬೆಟ್ಟ ಏರಬೇಕೆಂಬ ಆಸೆ ಆಯ್ತು. ಬಸ್ ಸ್ಟಾಪ್ ಬಂತು ಇಳಿದೇ ಬಿಟ್ಟೆ. ಆ ಬೆಟ್ಟ ಹತ್ತಿದರೆ ಟಿಬಿ ಡ್ಯಾಂ ಚೆನ್ನಾಗಿ ಕಾಣಿಸುತ್ತದೆ ಎಂದು ಅಲ್ಲಿ ಇದ್ದವರು ತಿಳಿಸಿದರು. ಕಪ್ಪು ಪ್ಯಾಂಟ್ ಬಿಳಿ ಶರ್ಟು ಶೂ ಹಾಕಿಕೊಂಡಿದ್ದ ನಾನು ಬೆಟ್ಟದ ಬುಡದ ತನಕ

ನಡಕೊಂಡು ಹೋಗಿ ದಾರಿಗಾಗಿ ಜಾಗ ಹುಡುಕಿದೆ. ದಾರಿ ಏನೋ ಸಿಕ್ಕಿತು ತುಂಬಾ ಸಂತೋಷವಾಯ್ತು. 200–300 ಅಡಿಯಷ್ಟು ಉತ್ತರದ ಬೆಟ್ಟ. ಹತ್ತಲು ಪ್ರಾರಂಭಿಸಿದೆ. ಅರ್ಧ ಹೋಗಲು ಹೆಚ್ಚು ಕಷ್ಟ ಆಗಲಿಲ್ಲ. ಮತ್ತೆ ದಾರಿ ಕಾಣಿಸಲಿಲ್ಲ. 'ಶೂ' ಇದ್ದ ಕಾರಣ ದಾರಿ ಇಲ್ಲದ ಕಾರಣ ಕಲ್ಲು ಮುಳ್ಳು ದಾರಿ – ಕೆಳಗೆ ಹಿಂದು ಕಡೆ ನೋಡಿದರೆ ಎದೆ ಡಬಡಬ ಎಂದು ಬಡಿಯತೊಡಗಿತು, ಕಾಲು ಜಾರ ತೊಡಗಿತು, ಮೈ ಬೆವರಿತು ಹೆದರಿಕೆ ಶುರುವಾಯ್ತು. ಏನು ಮಾಡಬೇಕೆಂದೇ ತಿಳಿಯಲಿಲ್ಲ. ಹಿಂದೆ ಹೋಗಲು ಸಾಧ್ಯವೇ ಇಲ್ಲ. ಪಾತಾಳದಷ್ಟು ತಗ್ಗು ಪ್ರದೇಶ. ಮುಂದೆ ಹೋಗೋಣವೆಂದರೆ ತುಂಬಾ ಎತ್ತರವಿದೆ. ಕಾಲು ಜಾರುತ್ತಿದೆ. ಅಲ್ಲೆ ಸ್ವಲ್ಪ ಕುಳಿತು ಡೊಗ್ಗಲು ಕಾಲಲ್ಲಿ ಬಾಲಕೃಷ್ಣನಂತೆ ಸಣ್ಣ ಸಣ್ಣ ಗಿಡಗಳನ್ನು ಆಧಾರವಾಗಿ ಹಿಡಿದುಕೊಂಡು ಮೇಲಕ್ಕೆ ಹೋಗಲು ಪ್ರಾರಂಭಿಸಿದೆ. ಅತೀ ನಿಧಾನವಾಗಿ ಸ್ವಲ್ಪ ಸ್ವಲ್ಪವೇ ಹೋಗಿ ತುತ್ತ ತುದಿಗೆ ಬಂದಾಗ ಒಬ್ಬರು ಕಂಡರು. ಬಹಳ ದಣಿದು ಬೆವತು ಹೆದರಿದ ನನ್ನನ್ನು ಕೈ ಹಿಡಿದು ಎತ್ತಿದರು. ಐದು ನಿಮಿಷ ಏನು ಮಾಡಲೂ ತೋಚದೆ ಕುಳಿತೆ. ವಿಶಾಲವಾದ ಪ್ರಾಂಗಣ ಅದು. ವಿಚಾರಿಸಿದಾಗ ತಿಳಿಯಿತು. ಅದು **ಶಂಕರ ಪರ್ವತ** ಎಂದು. ಅದು ಒಂದು ದೇವಸ್ಥಾನದ ಹೊರಾಂಗಣ. ವಿಶಾಲವಾದ ಪ್ರದೇಶ. ತಂಪಾಗಿ ಬೀಸುತ್ತಿರುವ ಗಾಳಿಯಿಂದಾಗಿ ನನಗೆ ಸ್ವರ್ಗ ಸುಖಾನಂದವಾಯ್ತು. ಒಂದು ಸುತ್ತು ಬಂದು ನೋಡಿದೆ. ಒಂದು ಬದಿಯಲ್ಲಿ **ಟಿ.ಬಿ. ಡ್ಯಾಂ** ನೂರಾರು ಎಕ್ರೆ ಜಮೀನಿನಲ್ಲಿ ತಂಪಾದ ನೀರನ್ನು ತುಂಬಿಕೊಂಡು ಅಡ್ಡಕ್ಕಿದ್ದ ದೊಡ್ಡ ಗೆರೆಯ ಹಾಗೆ ಕಾಣಿಸುತ್ತಿತ್ತು. ತುಂಬಾ ಸಂತೋಷವಾಯ್ತು. ಕಣ್ಣಿನಲ್ಲಿ ಆನಂದವನ್ನು ತುಂಬಿಕೊಂಡು ಎದುರು ಭಾಗದಲ್ಲಿದ್ದ 200–300 ಮೆಟ್ಟಿಲನ್ನು ಇಳಿದು ಆರಾಮವಾಗಿ ಇಳಿಯುತ್ತಿರುವಾಗ ತಿಳಿಯಿತು. ಇಷ್ಟೊಂದು ಅನುಕೂಲದ ಮೇಲಕ್ಕೆ ಹತ್ತಲು ಇಳಿಯಲು ಮೆಟ್ಟಲು ಇದ್ದರೂ ಸುಸೈಡ್ ಸ್ಪಾಟ್‌ನ ಜಾಗದಲ್ಲಿ ಹತ್ತಿದ ನನ್ನ ಮೂರ್ಖತನಕ್ಕೆ ನಾನೇ ನಾಚಿಕೊಂಡೆ. ನನ್ನ ಹೆಂಡತಿ ನೆನಪಾಗಿ ಹೋಟೇಲಿನ ಕೊಠಡಿಯ ಬೀಗ ತೆಗೆದಾಗ ಹಸಿವೆ ತಾಳಲಾರದೆ ಸತ್ಯಭಾಮ ಒದ್ದಾಡುತ್ತಿದ್ದಳು.

**ಊರಿನವರೆಲ್ಲರಿಗೂ ನಾನು "ಡ್ರಾಯಿಂಗ್ ಮಾಸ್ಟರ್"** ಆಗಿದ್ದೆ. ಫಲಿಮಾರಿನಲ್ಲಿ 1967ರಿಂದ ಚಿತ್ರಕಲೆ ಹಾಗೂ ಹೊಲಿಗೆ ವಿಷಯವನ್ನು ಸರಕಾರಿ ಪ್ರೌಢ ಶಾಲೆಯಲ್ಲಿ ಕಲಿಸುತ್ತಿದ್ದ ನನ್ನನ್ನು ವಿದ್ಯಾರ್ಥಿಗಳು ತುಂಬಾ ಪ್ರೀತಿಸುತ್ತಿದ್ದರು. ಆ ವಿದ್ಯಾರ್ಥಿಗಳೊಡನೆ ನಾನು ಒಬ್ಬ ಅಧ್ಯಾಪಕನಾಗಿ ವರ್ತಿಸುತ್ತಿರಲಿಲ್ಲ. ಎಲ್ಲರನ್ನೂ ನನ್ನ ಮನೆಯ ಮಕ್ಕಳಂತೆ ಪ್ರೀತಿಯಿಂದ ಮಾತನಾಡಿಸುತ್ತಿದ್ದೆ. ಹಾಗಾಗಿ ಫಲಿಮಾರಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಯರಿಗೆ, ಊರಿನವರಿಗೆ **ಡ್ರಾಯಿಂಗ್ ಮಾಸ್ಟರ್** ಎಂದೇ ಕರೆಸಿಕೊಳ್ಳುತ್ತಿದ್ದೆ. 8ನೇ ತರಗತಿಯಿಂದ 10ನೇ ತರಗತಿ ತನಕದ ಹುಡುಗಿಯರಿಗೆ ಹೊಲಿಗೆ ಕಲಿಸುತ್ತಿದ್ದುದರಿಂದ **"ಕ್ರಾಫ್ಟ್ ಮಾಸ್ಟರ್"** ಎಂದು ಕೆಲವರು ಕರೆಯುತ್ತಿದ್ದರು. ಎಲ್ಲಾ ಮಕ್ಕಳಿಗೆ ಡ್ರಾಯಿಂಗ್ ವಿಷಯ ಕಲಿಸುತ್ತಿದ್ದುದರಿಂದ ಡ್ರಾಯಿಂಗ್ ಮಾಸ್ಟರ್ ಎಂದೇ ನನ್ನ ಹೆಸರಾಯ್ತು. ನನ್ನ ಹೆಸರು ಯಾರಿಗೂ ತಿಳಿದಿರಲಿಲ್ಲ. ಫಲಿಮಾರಿನಲ್ಲಿ ಯಾರ ಮನೆಯಲ್ಲಿ ಕಾರ್ಯಕ್ರಮಗಳಿದ್ದರೂ ನಾನು ಅವರಲ್ಲಿ ಹೋಗಿ ನನ್ನಿಂದಾದಷ್ಟು ಸಹಾಯ ಮಾಡುತ್ತಿದ್ದೆ. ಊಟ ಉಪಹಾರಗಳಿದ್ದರೆ ಮೊದಲ ಪಂಕ್ತಿಗೆ ಬಡಿಸದೆ ಊಟಕ್ಕೆ ಕುಳಿತುಕೊಳ್ಳುತ್ತಿರಲಿಲ್ಲ.

ಹಾಗಾಗಿ ನನ್ನನ್ನು ಎಲ್ಲರೂ ಸಂಬಂಧಿಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಶಾಲೆಯ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಮರ್ಥನಾಗಿ ಭಾಗವಹಿಸುತ್ತಿದ್ದೆ. ನಾಟಕ ವಾರ್ಷಿಕೋತ್ಸವದ ಸಂದರ್ಭದಲ್ಲಿ ಡೆಕೊರೇಷನ್ ಮಾಡುವಲ್ಲಿ ರಂಗ ಸಜ್ಜಿಕೆ ವೇದಿಕೆ, ತಯಾರು ಮಾಡುವುದು ಅಲ್ಲದೆ ಮಕ್ಕಳ ನಾಟಕ ಕಾರ್ಯಕ್ರಮದಲ್ಲಿ ಮೇಕಪ್ ಮಾಡುವುದು ನನ್ನ ಕರ್ತವ್ಯ ಎಂದು ಮಾಡುತ್ತಿದ್ದೆ. 2–3 ವರ್ಷ ಹವ್ಯಾಸಿ ಯಕ್ಷಗಾನ ಕಲಾವಿದರ ಯಕ್ಷಗಾನಗಳಿದ್ದರೆ ಅಲ್ಲಿಗೆ ಮೇಕಪ್ ಮಾಡಲು ಶಾಲೆ ಬಿಟ್ಟ ನಂತರ ಹೋಗುತಿದ್ದೆ. ರಾತ್ರಿ ಇಡೀ ನಿದ್ದೆ ಕೆಟ್ಟು ಮೇಕಪ್ ಮಾಡಿ ಮರುದಿನ ಶಾಲೆಯಲ್ಲಿ ಪಾಠ ಮಾಡಲು ಕಷ್ಟವಾಗುತ್ತಿತ್ತು. ಅದನ್ನು ಸಂಪಾದನೆಗಾಗಿ ಮಾಡುತ್ತಿದ್ದೆ. 20, 30 ರೂ. ಒಂದು ರಾತ್ರಿ ಮೇಕಪ್ ಮಾಡಿದ್ರೆ ಕೊಡುತ್ತಿದ್ದರು. ಇದರಿಂದ ನನಗೆ ತುಂಬಾ ಅನುಕೂಲವಾಗುತ್ತಿತ್ತು.

ವಾರ್ಷಿಕೋತ್ಸವದ ಸಂದರ್ಭ ಪ್ರತೀ ವರ್ಷ ಮಕ್ಕಳು ಮಾಡಿದ ಚಿತ್ರಗಳ ಪ್ರದರ್ಶನದ ವ್ಯವಸ್ಥೆ ಮಾಡುತ್ತಿದ್ದೆ. ವರ್ಷ ಇಡೀ ಮಾಡಿದ ಚಿತ್ರಗಳಲ್ಲಿ ಉತ್ತಮವಾದ ಚಿತ್ರ ಆಯ್ಕೆ ಮಾಡಿ ಪ್ರತೀ ತರಗತಿಯಲ್ಲಿ ಪ್ರದರ್ಶನಕ್ಕೆ ಇರಿಸುತ್ತಿದ್ದೆ. ವಾರ್ಷಿಕೋತ್ಸವದ ಮುಂಚಿನ ದಿನ ಮಕ್ಕಳಲ್ಲಿ ರಂಗೋಲೆ ಹಾಕುವ ಆಸಕ್ತಿ ಇರುವವರು ಬಂದು ರಾತ್ರಿ ಇಡೀ ರಂಗೊಲೆ ಹಾಕಲು ಹೇಳುತ್ತಿದ್ದೆ. ಗಂಡು–ಹೆಣ್ಣು ಎಂಬ ಭೇದವಿಲ್ಲದೆ ಹೆಚ್ಚಿನ ಮಕ್ಕಳು, ನಿದ್ದೆಗೆಟ್ಟು ಅತ್ಯುತ್ತಮ ರಂಗೋಲೆ ಹಾಕುತ್ತಿದ್ದದು 7–8 ಕೊಠಡಿಗಳಲ್ಲಿ ನೆಲದಲ್ಲಿ ರಂಗೋಲೆ ಪ್ರದರ್ಶನ ಇದ್ದರೆ ಗೋಡೆಗಳಲ್ಲಿ ಚಿತ್ರಗಳ ಪ್ರದರ್ಶನ ನಡೆಯುತ್ತಿತ್ತು. ಪ್ರದರ್ಶನ ನೋಡಲು ಊರಿನವರೆಲ್ಲಾ ಪ್ರೇಕ್ಷಕರಾಗಿ ವಾರ್ಷಿಕೋತ್ಸವದ ದಿನ ಬೆಳಿಗ್ಗೆನಿಂದ ಸಂಜೆಯ ತನಕ ಬರುತ್ತಿದ್ದರು. ಎಲ್ಲರೂ ತಮ್ಮ ಮಕ್ಕಳ ಪ್ರತಿಭೆಗಳನ್ನು ನೋಡಿ ಸಂತೋಷಪಡುತ್ತಿದ್ದರು. ನೂರಾರು, ಸಾವಿರಾರು ಪ್ರೇಕ್ಷಕರು ತಮ್ಮ ಮಕ್ಕಳ ಪ್ರತಿಭೆಗಳನ್ನು ನೋಡಲು ಬರುವುದನ್ನು ಕಂಡು ನಾನು ತುಂಬಾ ಸಂತೋಷಪಡುತ್ತಿದ್ದೆ. ಫಲಿಮಾರಿನಲ್ಲಿ ಒಂದು ಯುವಕಮಂಡಲವಿತ್ತು. ಅದರಲ್ಲಿ ಚಕ್ಕಿಂಗ್ ಇನ್‌ಸ್ಪೆಕ್ಟರಾಗಿ ಕೆಲಸ ನಿರ್ವಹಿಸುತ್ತಿದ್ದ ರಮೇಶ್, ಭಾಸ್ಕರ್, ಸಂಜೀವರಾಯರು, (ನಂದಿಕೂರು) ಇವರೆಲ್ಲಾ ಏಳೆಂಟು ಜನ ಸದಸ್ಯರು ಸೇರಿ ವಾರ್ಷಿಕೋತ್ಸವ ಮಾಡುತ್ತಿದ್ದರು. ಅತೀ ಉತ್ತಮವಾದ ಮೂರು–ನಾಲ್ಕು ಗಂಟೆಯ ನಾಟಕ ಕಾರ್ಯಕ್ರಮ ನೀಡುತ್ತಿದ್ದರು. ಈ ನಾಟಕಗಳಲ್ಲಿ ವೇದಿಕೆ ಸಜ್ಜುಗೊಳಿಸುವ (ರಂಗ ಸಜ್ಜಿಕೆ) ಕೆಲಸ ನಾನು ನಿರ್ವಹಿಸುತ್ತಿದ್ದೆ. ಅತೀ ಅದ್ಭುತವಾಗಿ ನಾಟಕದ ಸಂದರ್ಭ ತೋರಿಸುವ ಪ್ರಯತ್ನ ನನ್ನದಾಗಿತ್ತು. ಮಾವಿನ ಹಣ್ಣುಗಳು ಒಮ್ಮೆಲೆ ಬೀಳುವುದು, ಕೆಲವು ಹಣ್ಣು ಇದಕ್ಕಿದ್ದಂತೆ ಮೇಲಕ್ಕೆ ಹೋಗುವುದು.



ವೇದಿಕೆಯಲ್ಲಿ ಕೆಂಪುಕಲ್ಲು ಜೋಡಿಸಿ ಬಾವಿಕಟ್ಟೆ ರಾಟೆ ತಯಾರಿಸಿದ್ದು, ಪಾರ್ಥಸಾರಥಿ ನಾಟಕದಲ್ಲಿ ನಾಲ್ಕು ಕುದುರೆ ಹಾಗೂ ರಥ, ಇದೆಲ್ಲಾ ವೇದಿಕೆಯಲ್ಲಿ ತೋರಿಸಲು ಪ್ರಯತ್ನಿಸಿದ್ದೆ. ಸಹಜವಾಗಿ ಕಾಣಿಸುವಂತೆ ಮಾಡುತ್ತಿದ್ದೆ. **ಸ್ಕೌಟ್‌ಮಾಸ್ಟರ್** ಆಗಿ **ಶ್ರೀಯುತ ರಾಮ ಶೆಟ್ಟಿ** ಎಂಬವರು ನಮ್ಮಲ್ಲಿ ಉಪನ್ಯಾಸಕರಾಗಿದ್ದರು. ರಾಮನ ಹೆಸರಿಗೆ ತಕ್ಕಂತೆ

## ಸ್ವ ಪ್ರಯತ್ನದಿಂದ ಮಾತ್ರ ಪ್ರತಿಭೆ ಬೆಳೆಯಲು ಸಾಧ್ಯ

ಸೌಜನ್ಯ ವ್ಯಕ್ತಿತ್ವದ ಇವರಿಗೆ ಏಳೆಂಟು ವರ್ಷದಲ್ಲಿ ಒಮ್ಮೆಯೂ ಸಿಟ್ಟು ಬಂದುದನ್ನು ನೋಡಲಿಲ್ಲ. ಅಂತವರು **"ಮಾರುತಿ ಸ್ಕೌಟ್ ಟ್ರೂಪ್'** ನಮ್ಮಲ್ಲಿ ನಡೆಸುತ್ತಿದ್ದರು. ಮಂಗಳೂರಿನ **ಬೋಂದೆಲ್** ಎಂಬಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ ಕ್ಯಾಂಪ್ ಇತ್ತು. 32 ಮಕ್ಕಳ ಮಾರುತಿ ಸ್ಕೌಟ್ ಟ್ರೂಪ್ ಮಕ್ಕಳನ್ನು ಶ್ರೀಯುತ ರಾಮ ಶೆಟ್ರ ಅಭಿಪ್ರಾಯದಂತೆ ನಾನು ಕರಕೊಂಡು ಬರಬೇಕಾಯ್ತು. 4–5 ದಿನದ ಕ್ಯಾಂಪಲ್ಲಿ ಭಾಗವಹಿಸಿದ ಬಳಿಕ ಸ್ಕೌಟ್ ತರಬೇತಿ ನಾನೂ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ. ಸ್ಕೌಟ್ ನಿಯಮಗಳು ನನ್ನನ್ನು ತುಂಬಾ ಆಕರ್ಷಿಸಿದವು. 10 ದಿನಗಳ ಅಧಮಾರು ಶಾಲೆಯಲ್ಲಿ ನಡೆದ ಸ್ಕೌಟ್ ತರಬೇತಿಯಲ್ಲಿ ಅತೀ ಉತ್ಸಾಹದಿಂದ ಭಾಗವಹಿಸಿ ಎಲ್ಲರೊಂದಿಗೆ ಬೆರೆತು ಅತ್ಯಾನಂದ ಪಟ್ಟುಕೊಂಡವರಲ್ಲಿ ನಾನೂ ಒಬ್ಬನಾಗಿದ್ದೆ. ಸ್ಕೌಟಿನ ಎಲ್ಲಾ ವಿಷಯಗಳು ನನ್ನನ್ನು ತುಂಬಾ ಆಕರ್ಷಿಸಿದವು. **ಗುಂಪು ಸ್ಪರ್ಧೆಗಳು, ಗುಂಪಿನಾಟ, ಸ್ಮರಣದಾಟ, ಸ್ಮೆಲ್‌ಗೇಮ್, ಟಚ್ಚಿಂಗ್‌ಗೇಮ್, ಸೌಂಡ್‌ಗೇಮ್, ಹಲವಾರು ವಿಧದ ಗಂಟುಗಳು, ನಿಯಮಗಳು, ಹೊರ ಸಂಚಾರವಂತೂ ಮರೆಯಲಾರದ ಆನಂದ ನೀಡುವ ವಿಷಯ. ಈ ಎಲ್ಲಾ ವಿಷಯಗಳು ನನ್ನನ್ನು ಓರ್ವ ಸ್ಕೌಟ್ ಅಧ್ಯಾಪಕನನ್ನಾಗಿ ಮಾಡಿತು.** ಶ್ರೀಯುತ ರಾಮ ಶೆಟ್ರು ನನಗೆ ಸ್ಕೌಟ್ ಟ್ರೂಪಿನ ಜವಾಬ್ದಾರಿ ಕೊಟ್ಟರು. ನಾನು ಸ್ಕೌಟ್ ಜವಾಬ್ದಾರಿ ತೆಗೆದುಕೊಂಡ ನಂತರ ನನ್ನ ಜೀವನದಲ್ಲಿ ತುಂಬಾ ಪರಿಣಾಮ ಬೀರಿತು. **ಅದರ ನಿಯಮಗಳು ನನ್ನನ್ನು ಉತ್ತಮ ಪ್ರಜೆಯನ್ನಾಗಿ ರೂಪಿಸಿದವು ಎಂದು ಖಂಡಿತವಾಗಿ ಹೇಳಬಲ್ಲೆ.**

**ಸ್ಕೌಟ್ ನಿಯಮಗಳು ಮನುಷ್ಯನನ್ನು ಮಾನವನನ್ನಾಗಿ ರೂಪಿಸುವಲ್ಲಿ ಬಹಳ ಪರಿಣಾಮ ಬೀರುತ್ತದೆ. ಭಾರತೀಯರೆಲ್ಲರೂ ಸ್ಕೌಟ್ಸ್‌ಗಳಾಗಿದ್ದರೆ ಪ್ರಪಂಚದಲ್ಲೇ ಅತ್ಯುನ್ನತ ಸ್ಥಾನದ ದೇಶವಾಗುವುದರಲ್ಲಿ ಸಂದೇಹವೇ ಇಲ್ಲ. ಒಮ್ಮೆ ಒಬ್ಬ ಸ್ಕೌಟ್ ಆದರೆ ಅವನು ಜೀವನ ಪರ್ಯಂತ ಸ್ಕೌಟ್ ಆಗಿರಬೇಕು ಎಂಬ ನಿಯಮವಿದೆ.**

**ಸ್ಕೌಟ್ ಆದವನು ಗೌರವಕ್ಕೆ ಅರ್ಹನು, ನಿಷ್ಠಾವಂತನು, ಎಲ್ಲರ ಸ್ನೇಹಿತ, ವಿನಯ ಶೀಲನು, ಪ್ರಾಣಿಗಳ–ಪ್ರಕೃತಿಯ ಪ್ರಿಯನೂ, ಶಿಸ್ತುಬದ್ಧ, ಸಾರ್ವಜನಿಕ ಸ್ವತ್ತುಗಳ ರಕ್ಷಕ, ಸಹಾಯ ಹಸ್ತವುಳ್ಳವ, ಮಿತವ್ಯಯಿ, ಧೈರ್ಯವಂತ, ಕಾಯಾವಾಚಾ ಮನಸಾ ಪರಿಶುದ್ಧನು ಹಾಗೂ ಸದಾ ಹಸನ್ಮುಖಿಯಾಗಿರಬೇಕು. ಯಾವ ಕೆಲಸ ತಿಳಿಸಿದರೂ ಎಷ್ಟು ಕಷ್ಟವಾದರೂ ಮಾನಸಿಕವಾಗಿ ಕಾರ್ಯರೂಪದಲ್ಲಿ ಸದಾ ಸಿದ್ಧನಾಗಿರಬೇಕು ಎಂಬುದು ಸ್ಕೌಟ್ ಧ್ಯೇಯ ವಾಕ್ಯ.**

ಮೇಲಿನ ಸ್ಕೌಟ್ ನಿಯಮದಂತೆ ನಾನು ಜೀವಿಸಬೇಕೆಂದು ತೀರ್ಮಾನಿಸಿ ಮನಸ್ಸಿನಲ್ಲಿ ಪ್ರತಿಜ್ಞೆ ಮಾಡಿಕೊಂಡೆ. ಬಳಿಕ ನನ್ನ ಮಾರುತಿ ಸ್ಕೌಟ್ ಟ್ರೂಪನ್ನು ಸಜ್ಜುಗೊಳಿಸಿ ತರಬೇತಿ ನೀಡಿದೆ. 8 ಮಕ್ಕಳ ನಾಲ್ಕು ಗ್ರೂಪ್‌ಗಳನ್ನು ಸೇರಿಸಿ ಚಟುವಟಿಕೆ ಪ್ರಾರಂಭಿಸಿದೆ. ಪ್ರತೀ ಶನಿವಾರ ಮಧ್ಯಾಹ್ನದ ನಂತರ 1–2 ಗಂಟೆ ಸ್ಕೌಟ್ ಚಟುವಟಿಕೆ ಮಾಡಿಸುತ್ತಿದ್ದೆ. ಮಕ್ಕಳು ಸ್ಕೌಟ್ ತರಬೇತಿಯಲ್ಲಿ ತುಂಬಾ ಆನಂದ ಪಡೆಯುತ್ತಿದ್ದರು. ಎಲ್ಲಾ ಚಟುವಟಿಕೆಗಳಲ್ಲಿ ಸಮರ್ಥರಾಗಿ ಭಾಗವಹಿಸುತ್ತಿದ್ದರು. ಸ್ಕೌಟಿನಲ್ಲಿರುವ ಸ್ಪರ್ಧಾ ಆಟಗಳು ಗುಂಪುಗಳಾಗಿ ಆಡುವ ಎಲ್ಲಾ ಆಟಗಳು ಸ್ಕೌಟಿನಲ್ಲಿರುವ ಒಗ್ಗಟ್ಟಿನ ಶಕ್ತಿಯನ್ನು ಪ್ರತಿಬಿಂಬಿಸುತ್ತಿತ್ತು. ಹಾಗಾಗಿ 32 ಮಕ್ಕಳನ್ನು ಸೇರಿಸಿಕೊಂಡು ಫಲಿಮಾರಿನಲ್ಲಿ

ಹಲವಾರು ಶ್ರಮದಾನ ಮಾಡಿಸಿದ್ದು ಈಗಲೂ ನೆನಪಿಗೆ ಬರುತ್ತದೆ. ನಂದಿಕೂರು ಪೇಟೆಯಿಂದ ನಂದಿಕೂರು ದೇವಸ್ಥಾನದ ತನಕದ ರಸ್ತೆ ಸರಿಪಡಿಸಿದ್ದು, ಊರಿನವರ ಸಹಕಾರ, ಸಹಾಯದಿಂದ ಶ್ರಮದಾನದ ಮಕ್ಕಳಿಗೆ ಬೇಕಾದ ಹಾರೆ, ಗುದ್ದಲಿ, ಶರ್ಬತ್ ವ್ಯವಸ್ಥೆ ಮಧ್ಯಾಹ್ನ ಗಂಜಿ ವ್ಯವಸ್ಥೆ, ಸಂಜೆ ಚಹಾ ಇತ್ಯಾದಿಗಳಿಗೆ ಅಲ್ಲಿಯ ಅರ್ಚಕ ಸಹೋದರರು **ಶ್ರೀ ಕೃಷ್ಣ ಭಟ್** ಮತ್ತು **ಶ್ರೀ ಅಪ್ಪು ಭಟ್** ಸಹಾಯ ಮಾಡಿದ್ದು ಇನ್ನೂ ನೆನಪಿನಲ್ಲಿದೆ. ನಮ್ಮ ಪಲಿಮಾರು ಶಾಲೆಯ ಗಾರ್ಡನ್ ಜವಾಬ್ದಾರಿ ನನಗೆ ಬಂದಾಗ 32 ಸ್ಕೌಟ್ ವಿದ್ಯಾರ್ಥಿಗಳ ಸಹಾಯದಿಂದ ಪಲಿಮಾರು ಹೊಳೆಯ ಬದಿಯಲ್ಲಿದ್ದ **ಕಾಮತ್**ರವರ ಹಂಚು ಕಾರ್ಖಾನೆಯಿಂದ ಶಾಲೆಯ ತನಕ ದೂರ ವಿದ್ಯಾರ್ಥಿಗಳನ್ನು ನಿಲ್ಲಿಸಿ ಹಾಳಾಗುವ ಹಂಚನ್ನು ಗಾರ್ಡನ್‌ಗೆ ತರಿಸಿ ಅಲ್ಲಿ ಗಾರ್ಡನ್‌ನಲ್ಲಿ ಚಂದವಾಗಿ ಜೋಡಿಸುವ ವ್ಯವಸ್ಥೆ ಮಾಡಿದ್ದೆ. ಕಾರ್ಕಳದ ರಾಘವೇಂದ್ರ ಮಠಕ್ಕೆ ನಮ್ಮ 32 ಸ್ಕೌಟ್ ವಿದ್ಯಾರ್ಥಿಗಳನ್ನು ಪ್ರವಾಸದಲ್ಲಿ ಕರಕೊಂಡು ಹೋಗಿ ನಾನು ಬಿಡಿಸಿದ್ದ 4x6 ಅಡಿ ಅಳತೆಯ ರಾಘವೇಂದ್ರ ಸ್ವಾಮಿಗಳ ತೈಲ ಚಿತ್ರ (ಈಗಲೂ ಕಾರ್ಕಳ ರಾಘವೇಂದ್ರ ಮಠದಲ್ಲಿ ಒಳಾಂಗಣದ ಬಲ ಗೋಪುರದ ಗೋಡೆಯಲ್ಲಿದೆ)ವನ್ನು ಮೆರವಣಿಗೆ ಮೂಲಕ ಮಕ್ಕಳು ಜೈಕಾರ ಹಾಕುತ್ತ ಹಿಡಿದುಕೊಂಡು ಹೋಗಿ ಕೊಟ್ಟಿದ್ದೆವು. ಪ್ರತೀ ತಿಂಗಳು ಆಸುಪಾಸಿನ ಊರಿಗೆ ಇನ್ನಕ್ಕೆ ಮುಂಡ್ಕೂರಿಗೆ, ನಂದಿಕೂರು ಗುಡ್ಡಕ್ಕೆ, ಅವರಾಲಿಗೆ, ಕರ್ನಿರೆಗೆ, ಕಾಂಜರಕಟ್ಟೆಗೆ, ಸಾಂತೂರಿಗೆ, ಮೂಡುಪಲಿಮಾರಿಗೆ, ಅಡ್ವೆಗೆ, ಬಳಕುಂಜೆಗೆ ಹೊರಸಂಚಾರಕ್ಕಾಗಿ ಮಕ್ಕಳನ್ನು ಕರಕೊಂಡು ಹೋಗುತ್ತಿದ್ದೆ. ಅಲ್ಲಿ ತಂದಿದ್ದ ತಿಂಡಿಯನ್ನು ತಿಂದು ಆಟಗಳನ್ನು ಆಡಿ ಸಂತೋಷದಿಂದ ವಾಪಾಸು ಬರುತ್ತಿದ್ದೆವು. ಒಮ್ಮೆ ನಂದಿಕೂರಿಗೆ ಹೋದಾಗ ಫಲಿಮಾರಿನ ನಾರಾಯಣ ಪ್ರಭುಗಳ (ರೈಸ್‌ಮಿಲ್) ಮಗ ಆಡುವಾಗ ಕೈ ಮುರಿದು ಅವನ ಮನೆಯವರಿಂದ ಬೈಸಿಕೊಂಡ ಕಹಿಘಟನೆ ಈಗಲೂ ನೆನಪಿದೆ. ನಮ್ಮ 32 ಸ್ಕೌಟ್ ವಿದ್ಯಾರ್ಥಿಗಳ ಸಮವಸ್ತ್ರ ಹಾಗೂ ಸ್ಕಾರ್ಫ್ ಬೆಲ್ಟ್, ಶೂಗಳು ಸರಿಯಾಗಿ ಇರಲಿಲ್ಲವಾದ್ದರಿಂದ ಉಪ್ಪಿನಕುದ್ರು ವಿಶ್ವಪ್ರಖ್ಯಾತರಾದ **ಕೊಗ್ಗಣ್ಣ ಕಾಮತ್**ರವರಿಂದ ನಮ್ಮ ಶಾಲಾ ವಠಾರದಲ್ಲಿ 3 ಶೋ **ಗೊಂಬೆಯಾಟ**ವನ್ನು ಟಿಕೇಟ್ ಮಾರಿ ಮಾಡಿಸಿದ್ದನ್ನು ಜೀವನದಲ್ಲಿ ಮರೆಯಲು ಸಾಧ್ಯವಿಲ್ಲ. **"ಲಂಕಾ ದಹನ"** ಪ್ರಸಂಗ, ಮೂರು ಬಾರಿಗೂ ನಮ್ಮ ಒಳಾಂಗಣ ತುಂಬಾ ಪ್ರೇಕ್ಷಕವರ್ಗ ತುಂಬಿತ್ತು. ಬಂದವರೆಲ್ಲಾ ಅತ್ಯಾನಂದಕ್ಕೆ ಒಳಗಾಗಿದ್ದರು. ಅಂದಿನ ಕಾಲದಲ್ಲಿ ಶ್ರೀಯುತ ಕೊಗ್ಗಣ್ಣ ಕಾಮತರಿಗೆ ಕೊಡುವ ಸಂಭಾವನೆ ಹೊರತುಪಡಿಸಿ 1975–76ರಲ್ಲಿ ನಮ್ಮ ಟ್ರೂಪಿಗೆ 9,000/– ಉಳಿತಾಯವಾಗಿತ್ತು ಎಂದರೆ ನಂಬುತ್ತಿರಾ?

ಸ್ಕೌಟ್ ಮಕ್ಕಳೆಲ್ಲರಿಗೆ ಯುನಿಫಾರ್ಮ್ ರೆಡಿಯಾದರೆ ಇಡಲು ಸರಿಯಾದ ಕಬಾಟಿನ ವ್ಯವಸ್ಥೆ ಇರಲಿಲ್ಲ. ಹಾಗಾಗಿ ಮರದ 32 ಅದೆಗಳುಳ್ಳ ಕಬಾಟು ಮಾಡಬೇಕೆಂದೆನಿಸಿದಾಗ ನನಗೆ ಆಲೋಚನೆಗೆ ಬಂದುದ್ದು **ಹರಿಕಥೆ** ಮಾಡಿಸುವುದು. ಹರಿಕಥೆಯನ್ನು ಕೇಳುವ ಭಕ್ತರೇ ಇರದಿದ್ದ ಕಾಲ ಇದು ನಮ್ಮ ಮಕ್ಕಳನ್ನು ಸೇರಿಸಿಕೊಂಡು **"ಶ್ರೀಯುತ ಮಲ್ಪೆ ಹರಿದಾಸ ರಾಮದಾಸ ಸಾಮುಗ"**ರಿಂದ ಟಿಕೇಟ್ ಮಾಡಿ ಒಂದು ಹರಿಕಥಾ ಕಾಲಕ್ಷೇಪ ಮಾಡಿಸಿದ್ದೆ. ಆಸುಪಾಸಿನ ಮನೆಗಳಿಂದ ಕುರ್ಚಿ ತರಿಸಿ, ನೆಲ–ಬೆಂಚು–ಕುರ್ಚಿ ಎಂದು

ಮೂರು ವಿಭಾಗದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ ಮಾಡಿ ಊರಿನವರಿಗೆ ಮಕ್ಕಳ ಮೂಲಕ ಟಿಕೇಟ್ ಮಾರಿ ಫಲಿಮಾರಿನ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಗೋಪುರದಲ್ಲಿ (ದಕ್ಷಿಣ ಪಾರ್ಶ್ವದಲ್ಲಿದ್ದ ಸಭಾ ಮಂದಿರದಲ್ಲಿ) ಹರಿಕಥೆ ಮಾಡಿಸಿ 2000/– ರೂ. ಉಳಿಸಿ ಕಬಾಟು ಮಾಡಿಸಿದ್ದೆ.






ನಾನು ಬಿಡಿಸಿದ ತೈಲ ಚಿತ್ರ

**ಶ್ರೀ ಶ್ರೀ ಶ್ರೀ ವಿಶ್ವಪ್ರಿಯ ತೀರ್ಥರು ಈಗಿನ ಅಧಮಾರು ಮಠದ ಸ್ವಾಮಿಗಳು** ಇವರು **ಫಲಿಮಾರು ಪ್ರೌಢಶಾಲೆಯಲ್ಲಿ ಎಂಟನೇ ಮತ್ತು ಒಂಬತ್ತನೇ ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದಾಗ ರಾಘವೇಂದ್ರ ಅವರಿಗೆ ನಾನು ಚಿತ್ರಕಲಾ ಅಧ್ಯಾಪಕನಾಗಿದ್ದು ಈಗಲೂ ನನ್ನನ್ನು ಅವರು ಮರೆಯದೇ "ಡ್ರಾಯಿಂಗ್ ಮಾಸ್ಟ್ರು" ಎಂದೇ ಕರೆಯುತ್ತಿರುವುದು ನನ್ನ ಭಾಗ್ಯ. ಅಲ್ಲದೇ 2004ನೇ ವರ್ಷದ ಕೃಷ್ಣ ಜನ್ಮಾಷ್ಟಮಿ ಸಂದರ್ಭ ರಾಜಾಂಗಣದಲ್ಲಿ ನನ್ನನ್ನು ಸನ್ಮಾನಿಸಿರುವುದು ಅವರಿಗೆ ನನ್ನಲ್ಲಿ ಇರುವ ಗೌರವವನ್ನು ಪ್ರತಿಬಿಂಬಿಸುತ್ತದೆ.** ಅವರ ಹೆಸರಿಗೆ ತಕ್ಕಂತೆ ವಿಶ್ವಕ್ಕೇ ಪ್ರಿಯರಾದ ಸ್ವಾಮಿಗಳಾಗುವಂತೆ ಉಡುಪಿ ಕೃಷ್ಣ ಅನುಗ್ರಹಿಸಲಿ ಎಂದು ಆಶಿಸುತ್ತೇನೆ.

ಫಲಿಮಾರಿನ ವಿದ್ಯಾರ್ಥಿಗಳಲ್ಲಿ ಸ್ಕೌಟ್ ತರಬೇತಿ ಹೊಂದಿದ **ಶ್ರೀಯುತ ಅಶೋಕ ಕುಮಾರ್** ಎಂಬವರು ಇಂದಿಗೂ ನನ್ನನ್ನು ಮರೆಯದೆ ವರ್ಷವೂ ದಿನಚರಿ ಬರೆಯುವ ಡೈರಿಯನ್ನು ಕಳುಹಿಸುತ್ತಿದ್ದಾರೆ. ಇವರು ಮಫತ್‌ಲಾಲ್ ಕಂಪೆನಿಯಲ್ಲಿ ಅಧಿಕಾರಿಯಾಗಿ ಮುಂಬಯಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಶ್ರೀಯುತ ದಾಮೋದರ ಆಚಾರ್ಯ** ಎಂಬವರು ಚಿತ್ರಕಲಾಸಕ್ತ ವಿದ್ಯಾರ್ಥಿಯಾಗಿದ್ದು ಈಗ ಉಡುಪಿಯ ನಿಟ್ಟೂರು ಹೈಸ್ಕೂಲಿನಲ್ಲಿ ಚಿತ್ರಕಲಾ ಅಧ್ಯಾಪಕರಾಗಿರುವುದು ಮಾತ್ರವಲ್ಲದೆ ಚಿತ್ರಕಲೆಯಲ್ಲಿ ಹಲವಾರು ಸಾಧನೆಗಳನ್ನು ಮಾಡಿ ಬಹುಮಾನ ಪ್ರಶಸ್ತಿಯನ್ನು ಪಡೆದಿರುವುದು ನನಗೆ ಹೆಮ್ಮೆ ಎನಿಸುತ್ತದೆ. ಇನ್ನೊಬ್ಬ **"ಪ್ರಚಾರ ಕಲೆಯಲ್ಲಿ"** ವಿಶ್ವ ವಿಖ್ಯಾತಿ ಪಡೆದ **ರಾ. ಆಚಾರ್ಯ ಫಲಿಮಾರು** ಅವರು **ಶ್ರೀಯುತ ರಾಘವೇಂದ್ರ ಆಚಾರ್ಯ**ರು ತಮ್ಮ ಚಿತ್ರಕಲಾಸಕ್ತಿಯನ್ನು ಪ್ರೌಢಶಾಲೆಯಲ್ಲೇ ಬೆಳೆಸಿಕೊಂಡು ಉಳಿಸಿಕೊಂಡು ಈಗ ಬೆಂಗಳೂರಿನಲ್ಲಿದ್ದು **"ಸಿಲೋನ್, ಬರ್ಮಾ"** ದೇಶದಲ್ಲಿ ಪ್ರಚಾರ ಕಲೆಯಲ್ಲಿ ಪ್ರಸಿದ್ಧಿ ಪಡೆದಿರುವುದು ನನ್ನ ಭಾಗ್ಯ ಎನ್ನಬಹುದು.

**ಶ್ರೀಯುತ ಉಮಾಕಾಂತ** (ಇಂಜಿನಿಯರ್ ಎಂ.ಸಿ.ಎಫ್) ಮತ್ತು **ಶ್ರೀಯುತ ಉಮಾನಾಥ ಬೊಂಬಾಯಿ** ಎಂಬವರು ಫಲಿಮಾರಿನ ಸ್ಕೌಟ್ ತರಗತಿಗಳನ್ನು ನೆನಪಿಸುತ್ತಾ ನನಗೆ ದೂರವಾಣಿ ಮಾಡುತ್ತಿರುತ್ತಾರೆ. **ಪುತ್ತೂರಿನ ಪ್ರಖ್ಯಾತ ಚೇತನಾ ಆಸ್ಪತ್ರೆಯ ಮಕ್ಕಳ ತಜ್ಞ ಡಾ। ಶ್ರೀಕಾಂತ್** ನನ್ನ ಫಲಿಮಾರಿನ ಪ್ರೌಢಶಾಲೆಯ ಆತ್ಮೀಯ ವಿದ್ಯಾರ್ಥಿ ಎಂದು ಸಂತೋಷವಾಗಿ ಹೇಳಬಲ್ಲೆ. ಎರಡು ಪ್ರಕೃತಿ ಚಿತ್ರಗಳನ್ನು ಇವರ

ಮನೆಯಲ್ಲಿ ನನ್ನ ನೆನಪಿಗಾಗಿ ಇರಿಸಿಕೊಂಡಿದ್ದಾರೆ. ತರಗತಿಯಲ್ಲಿ ಇವರು ಚಂದವಾಗಿ ಚಿತ್ರ ಬಿಡಿಸುತ್ತಿದ್ದರು.

**ಬಲ್ಮಠದ ನಂದಿಕೂರು ಮೆಡಿಕೇರ್ ಲ್ಯಾಬ್ ಡಾ| ಕೃಷ್ಣರಾಜ್ ಉಪಾಧ್ಯಾಯ** ಫಲಿಮಾರಿನ ನನ್ನ ಆತ್ಮೀಯ ವಿದ್ಯಾರ್ಥಿ.

ಒಂದು ವರ್ಷ ವಾರ್ಷಿಕೋತ್ಸವದ ಸಂದರ್ಭ ಪ್ರಾರಂಭದಲ್ಲಿ ಸಂಜೆ ಸಭಾ ಕಾರ್ಯಕ್ರಮ ಮುಗಿದ ಬಳಿಕ ಹೈಸ್ಕೂಲ್ ಮಕ್ಕಳ ನಾಟಕ ನಂತರ ಜೂನಿಯರ್ ಕಾಲೇಜಿನ ವಿದ್ಯಾರ್ಥಿಗಳ ನಾಟಕ, ತದನಂತರ ಹಳೆ ವಿದ್ಯಾರ್ಥಿಗಳಿಂದ ನಾಟಕ, ಮುಗಿದ ಬಳಿಕ ಅಧ್ಯಾಪಕ ವೃಂದದವರು ಸೇರಿ ಯಕ್ಷಗಾನ ಮಾಡಿದ್ದೆವು. ಅದರಲ್ಲಿ ಒಮ್ಮೆ **ಅಗ್ನಿಯಾಗಿ** ಒಮ್ಮೆ **ಬಲರಾಮನಾಗಿ** ಯಕ್ಷಗಾನ ವೇಷ ಹಾಕಿ ಕುಣಿದುದನ್ನು ಮರೆಯಲು ಸಾಧ್ಯವಿಲ್ಲ, ಎಲ್ಲಾ ಆಟ ಮುಗಿದಾಗ ಬೆಳಗಾಗಿತ್ತು.

**ಶ್ರೀ ಭಾಸ್ಕರ ಶೆಟ್ಟಿ** ಎಂಬ ಪ್ರಾಧ್ಯಾಪಕರು ಬರೆದು ರಚಿಸಿದ ನಿರ್ದೇಶಿಸಿದ ನಾಟಕ **'ಮಣ್ಣಿನ ಮಗನ'** ಹೆಂಡತಿಯಾಗಿ (ಶ್ರೀಯುತ ರಾಮ ಶೆಟ್ಟಿಯವರ ಹೆಂಡತಿಯಾಗಿ) ನಾನು ಅಭಿನಯಿಸಿದ್ದೆ. ಸ್ತ್ರೀ ಪಾತ್ರದ ಅಭಿನಯ ಬಹಳ ಕಷ್ಟವೆಂಬುದು ನನಗೆ ಆವಾಗಲೇ ತಿಳಿದದ್ದು. ಆ ನಾಟಕಕ್ಕೆ ಫಲಿಮಾರಿನ ನಮ್ಮ ಸಂಸ್ಥೆಯ ಎಲ್ಲಾ ಅಧ್ಯಾಪಕರು, ಸಿಬ್ಬಂದಿಗಳು ಭಾಗವಹಿಸಿ ಪ್ರಾಂಶುಪಾಲರಾಗಿದ್ದ ಶ್ರೀಯುತ ಗೋಪಾಲಕೃಷ್ಣ ಕೆದ್ಲಾಯರು ಕೋರ್ಟಿನ ಜಡ್ಜ್ ಪಾತ್ರ, ವಿಲನ್ ಆಗಿ ಸಾಂತೂರು ಸದಾಶಿವರಾಯರು ಮತ್ತು ನನ್ನ ಬಹಳ ಆತ್ಮೀಯರಾದ ಶ್ರೀಯುತ ಗಣಪಯ್ಯ ಶೆಟ್ಟಿಯವರು. ಕಥೆ ರಚಿಸಿದ ಶ್ರೀಯುತ ಭಾಸ್ಕರ ಶೆಟ್ಟಿಯವರು ಕೆಲಸದವನ ಹಾಸ್ಯಪಾತ್ರ ಮಾಡಿದ್ದರು. ಅದರಲ್ಲಿ ಪಾಂಡುರಂಗ ಶೆಟ್ರು, ಮುಂದಾರ ಶೆಟ್ರು, ಸದಾಶಿವ ನಾಯ್ಕರು, ಮಹಾಬಲ ಆರಿಗರೂ ವೇಷ ಹಾಕಿದ್ದರು. ಜವಾನ ರಾಮ ಭಂಡಾರಿಯವರ ಹಾಸ್ಯಗಾರನ ವೇಷ ತುಂಬಾ ರಂಜಿಸಿತ್ತು.

ಒಂದು ವರ್ಷ **ಮಕ್ಕಳ ದಿನಾಚರಣೆ** ಸಲುವಾಗಿ ಶಾಲೆಯ ಎಲ್ಲಾ ವಿದ್ಯಾರ್ಥಿಗಳಿಂದ ಮಕ್ಕಳ **ಪೋಟೊ ಪ್ರದರ್ಶನ** ಮಾಡಿಸಿದ್ದೆ. ಅದರಲ್ಲಿ ಸಾವಿರಾರು ಮಕ್ಕಳ ಪೋಟೋ ಸಂಗ್ರಹವಾಗಿದ್ದು ಶಾಲೆಯ ಎಂಟು ಕೊಠಡಿಗಳಲ್ಲಿಯೂ ತುಂಬುವಷ್ಟಿದ್ದು ಬಂದಿದ್ದ ನೂರಾರು ಪ್ರೇಕ್ಷಕರನ್ನು ವಿಸ್ಮಯಗೊಳಿಸಿತ್ತು. ಫಲಿಮಾರಿನ ಹಾಗೂ ಆಸುಪಾಸಿನ ಊರಿನ ಮನೆಮಂದಿ ಎಲ್ಲಾ ಬಂದು ನೋಡಿ ಸಂತೋಷಪಟ್ಟ ಮಕ್ಕಳ ದಿನಾಚರಣೆ ಸಂದರ್ಭ ಎಂದಿಗೂ ಮನಸ್ಸಿನಿಂದ ಅಳಿಸಿ ಹೋಗದ ವಿಷಯ.

**ಮೇಕಪ್ ಮಾಡುವವನಾಗಿ:** ಫಲಿಮಾರಿನ ಆಸುಪಾಸಿನ ಊರುಗಳಲ್ಲಿ ಸಾಂತೂರು, ಇನ್ನ, ಬೆಳ್ಮಣ್ಣು, ಅಡ್ವೆ, ನಂದಿಕೂರು, ಮುದರಂಗಡಿ, ಪಾದೆಬೆಟ್ಟು, ಪಡುಬಿದ್ರೆ, ಮುಂಡ್ಕೂರು, ಕರ್ನಿರೆ, ಬಳಕುಂಜೆ, ಮೂಡುಫಲಿಮಾರು ಮುಂತಾದ ಕಡೆಗಳಲ್ಲಿ ಹಲವಾರು ಹವ್ಯಾಸಿ ಕಲಾವಿದರಿಂದ ಯಕ್ಷಗಾನ (ಆಟ) ನಡೆಯುತ್ತಿತ್ತು. ಈ ಯಕ್ಷಗಾನಕ್ಕೆ ವೇಷಭೂಷಣಕ್ಕಾಗಿ ಮುಲ್ಕಿಯಿಂದ **"ಸುವರ್ಣ ಆರ್ಟ್ಸ್"** ಎಂಬ ಹೆಸರಿದ್ದ ಸಂಸ್ಥೆಯ ಸದಸ್ಯರು ಬರುತ್ತಿದ್ದರು. ಆದರೆ ಯಕ್ಷಗಾನ ಮೇಳದ ಕಲಾವಿದರಂತೆ ವೇಷಭೂಷಣ ಹವ್ಯಾಸಿ ಕಲಾವಿದರು

ಸ್ವತಃ ತಾವೇ ಮಾಡಿಕೊಳ್ಳುವುದಿಲ್ಲ. ಹಾಗಾಗಿ ವೇಷ ಹಾಕಲು ಬೇರೆಯವರ ಸಹಾಯ ಪಡೆದುಕೊಳ್ಳುತ್ತಿದ್ದರು. ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ವಾರ್ಷಿಕೋತ್ಸವದ ಸಂದರ್ಭ ನಾನೇ ವೇಷ ಹಾಕುತ್ತಿದ್ದೆನಾದ್ದರಿಂದ **ಸುವರ್ಣ ಆರ್ಟ್ಸ್** ಮುಲ್ಕಿ ಇದರ ನೇತೃತ್ವ ವಹಿಸಿದ್ದ **ಚೆನ್ನಪ್ಪರು** ನನ್ನನ್ನು ರಾತ್ರಿ ವೇಳೆ ಯಕ್ಷಗಾನ ಇರುವಲ್ಲಿಗೆ ವೇಷ ಹಾಕಲು ಕರೆಯುತ್ತಿದ್ದರು. ಸಹಾಯಕನಾಗಿ ಹೋಗುತ್ತಿದ್ದೆ. ರಾತ್ರಿಇಡೀ ಬೇರೆಯವರ ಮುಖಕ್ಕೆ ಮೇಕಪ್(ಬಣ್ಣ) ಮಾಡುವ ಕೆಲಸವಾದ್ದರಿಂದ ರಾತ್ರಿಇಡೀ ನಿದ್ದೆ ಇಲ್ಲದೆ ಕೆಲಸ ಮಾಡಬೇಕಾಗಿತ್ತು. ಬೆಳಗ್ಗಿನ ಜಾವ ಎಂದರೆ 3 ಗಂಟೆಯಿಂದ 6 ಗಂಟೆಯ ತನಕ ಪ್ರೇಕ್ಷಕರಿಗೆ ನಿದ್ದೆ ಬರಬಾರದೆಂಬ ಉದ್ದೇಶದಿಂದ ಪ್ರಸಂಗಗಳಲ್ಲಿ ತುಂಬಾ ರಾಕ್ಷಸರ ರಂಗ ಪ್ರವೇಶದ ಸನ್ನಿವೇಷ ಇರುತ್ತದೆ. ಮೇಕಪ್ ಮಾಡುವವರಿಗೆ ಬೆಳಗಿನ ಜಾವದಲ್ಲಿ ತುಂಬಾ ಕೆಲಸವಾಗುತ್ತದೆ. 3–4 ವರ್ಷ ಇಂತಹ ರೀತಿಯ ಯಕ್ಷಗಾನದ ಮೇಕಪ್ ಮಾಡಲು ಹೋಗುತ್ತಿದ್ದ ನನಗೆ ಬಹಳ ಕಷ್ಟವಾಗುತ್ತಿತ್ತು. ನಿದ್ದೆಕೆಟ್ಟು ಕೆಲಸ ಮಾಡಿ ಮನೆಗೆ ಬಂದು ಸ್ನಾನ ಮಾಡಿ ಗಂಜಿ ಉಂಡು ಶಾಲೆಗೆ ಹೋದ ಬಳಿಕ ಶಾಲೆಯಲ್ಲಿ ನಿದ್ರೆ ಬರುತ್ತಿತ್ತು. ಒಂದು ರಾತ್ರಿ ಮೇಕಪ್ ಮಾಡಿದ್ದಕ್ಕೆ 30 ರೂಪಾಯಿ ಸಿಗುತ್ತಿತ್ತು. ಈ ಆಸೆಗಾಗಿ ಹೋಗುತ್ತಿದ್ದೆ, ಶಾಲಾ ಕೆಲಸಕ್ಕೆ ಕಷ್ಟವಾಗುತ್ತಿದ್ದ ಕಾರಣ ಬಳಿಕ ನಿಲ್ಲಿಸಿದೆ.

**ಮಂಟಪದವನಾಗಿ:** ಫಲಿಮಾರು ಹಾಗೂ ಆಸುಪಾಸಿನ ಊರುಗಳಲ್ಲಿ, ಕಲ್ಯಾಣ ಮಂಟಪ ಇರುತ್ತಿತ್ತು. ಹಾಗೆ ಕೆಲವರು ಶ್ರೀಮಂತರ ಮನೆ ಅಂಗಳ ದೊಡ್ಡದಾಗಿ ಇರುತ್ತಿತ್ತು. ತಮ್ಮ ಮನೆಯಲ್ಲೇ ಮದುವೆ ಉಪನಯನ ಮಾಡುತ್ತಿದ್ದರು. ಇಂತಹ ಶುಭ ಸಮಾರಂಭಗಳಲ್ಲಿ ವೇದಿಕೆ ಇರುತ್ತದೆ. ವೇದಿಕೆಯಲ್ಲಿ ಮಂಟಪ ಇದ್ದರೆ ಎಲ್ಲರಿಗೂ ಚಂದವಾಗಿ ಕಾಣಿಸುತ್ತದೆ. ಈ ಉದ್ದೇಶದಿಂದ ನಾನು ನನ್ನದೇ ಆದ ರೀತಿಯಲ್ಲಿ 3 ಬಾಗಿಲಿನ ಮಂಟಪ ರಚಿಸಿಕೊಂಡಿದ್ದೆ. ಪಾಲೆ ಮರದ ರೀಪುಗಳಿಂದ ರಚಿಸಿದರೆ ಒಂದು ಕಡೆಯಿಂದ ಇನ್ನೊಂದೆಡೆಗೆ ಹೊತ್ತುಕೊಂಡು ಹೋಗಲು ಹಗುರವಾಗಿರುತ್ತದೆ. ಅಲ್ಲದೆ ಈ ಮರಕ್ಕೆ ಗೆದ್ದಲು ಹಿಡಿಯುವುದಿಲ್ಲವಾದ್ದರಿಂದ ಬಾಳ್ವಿಕೆಗೂ ಅನುಕೂಲ. ಇದಕ್ಕೆ ಬೆಗಡೆ ಕಾಗದ ಅಂಟಿಸಿ (ಅಲಂಕಾರಿಕವಾದ ರೀತಿಯಲ್ಲಿ) ಚಂದವಾಗಿ ಅಲಂಕಾರ ಮಾಡುತ್ತಿದ್ದೆ. ಅಲ್ಲದೆ ಬಣ್ಣದ ಕಾಗದ ಹೂ ಮಾಲೆಗಳಿಂದ ಮಂಟಪವನ್ನು ಅಲಂಕಾರ ಮಾಡುತ್ತಿದ್ದೆ. ಆಸುಪಾಸಿನವರುಗಳಿಗೆಲ್ಲಾ ನಾನು **'ಮಂಟಪದ ಉಪಾಧ್ಯಾಯರು'** ಆಗಿಬಿಟ್ಟೆ.

**ಫಲಿಮಾರಿನ ದೀಪೋತ್ಸವದ** ದಿನದಂದು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ದೇವರನ್ನು ಮರದ ಸಣ್ಣ ರಥ (ವಿಮಾನ)ದಲ್ಲಿ ಇರಿಸಿ ದೇವಸ್ಥಾನದಿಂದ ಕರ್ನಿಕರೆ ಕಟ್ಟೆಯ ತನಕ ಎಳೆದುಕೊಂಡು ಹೋಗುವ ಉತ್ಸವ ನಡೆಯುತ್ತಿತ್ತು. ನಾನು 13 ವರ್ಷ ಫಲಿಮಾರಿನಲ್ಲಿದ್ದೆ. ದೀಪೋತ್ಸವ ನೋಡಿದಾಗ ರಥಕ್ಕೆ ಏನೂ ಅಲಂಕಾರ ಮಾಡದೆ ದೇವರನ್ನು ಕುಳ್ಳಿರಿಸಿ ಎಳೆಯುತ್ತಿದ್ದರು. ನಾನು ಫಲಿಮಾರು ಪ್ರೌಢಶಾಲಾ ವಿದ್ಯಾರ್ಥಿನಿಯರಿಗೆ ಹೊಲಿಗೆ ಕಲಿಸುತ್ತಿದ್ದೆ. ಹಾಗಾಗಿ ಹುಡುಗಿಯರಿಗೆ ಹೂ ಎಂದರೆ ಇಷ್ಟವಾದ್ದರಿಂದ ವಿಮಾನಕ್ಕೆ ಅಲಂಕಾರ ಮಾಡುವ ಜವಾಬ್ದಾರಿ ನಾನು ತೆಗೆದುಕೊಂಡೆ. ಅರ್ಚಕರಾದ **'ಶ್ರೀ ರಾಘವೇಂದ್ರ ಉಡುಪ'**ರ ಒಪ್ಪಿಗೆ ಪಡೆದು ನನ್ನ ವಿದ್ಯಾರ್ಥಿನಿಯರಲ್ಲಿ ಅವರವರ ಭಕ್ತಿಗನುಗುಣವಾಗಿ, ಶಕ್ತಿಗನುಸಾರವಾಗಿ ವಂತಿಗೆ ಪಡೆದು ವಂತಿಗೆಯಿಂದ

ಬಂದ ಹಣದಿಂದ ಮಂಗಳೂರಿಗೆ ಬಂದು ಹೂ ತೆಗೆದುಕೊಂಡು ವಿಮಾನಕ್ಕೆ ಅಲಂಕಾರ ಮಾಡಲು ಪ್ರಾರಂಭಿಸಿದೆ. ಅಲಂಕಾರ ಮಾಡಿದ ಹೂಗಳನ್ನು ದೀಪೋತ್ಸವದ ಮರುದಿನ ಶಾಲಾ ವಿದ್ಯಾರ್ಥಿನಿಯರಿಗೆ ವಂತಿಗೆ ನೀಡಿದ ಪ್ರಮಾಣಕ್ಕೆ ಸರಿಯಾಗಿ ಹೂವನ್ನು ವಿತರಿಸುವ ಕ್ರಮ ಪ್ರಾರಂಭಿಸಿದ್ದೆ. 4–5 ವರ್ಷದಲ್ಲಿ ಅಲಂಕಾರ ಮಾಡುವ ಜವಾಬ್ದಾರಿ ನಾನೇ ತೆಗೆದುಕೊಂಡೆ. ವರ್ಷದಿಂದ ವರ್ಷಕ್ಕೆ ವಂತಿಗೆ ಹೆಚ್ಚು ಹೆಚ್ಚಾಗುತ್ತಾ ಬಂದು 7–8 ಬುಟ್ಟಿ ಸೇವಂತಿಗೆ ಹೂಮಾಲೆ ಅಲಂಕಾರ ಮಾಡಬೇಕಾಗಿತ್ತು. ನಾನೊಬ್ಬನೇ ಅಲಂಕಾರದ ಜವಾಬ್ದಾರಿ ತೆಗೆದುಕೊಂಡ ಕಾರಣ ನನಗೆ ತುಂಬಾ ಹೂ ಅಲಂಕಾರ ಮಾಡುವುದು ಕಷ್ಟವಾಗಲು ಪ್ರಾರಂಭವಾಯ್ತು. ಮರುದಿನ ವಿದ್ಯಾರ್ಥಿನಿಯರಿಗೆ ಹೂ ಹಂಚುವ ಕೆಲಸ ನನಗೆ ತುಂಬಾ ಹೊರೆಯಾಯ್ತು. ಬಳಿಕ ಈ ಜವಾಬ್ದಾರಿಯಿಂದ ದೂರ ಉಳಿಯಬೇಕಾಯ್ತು.

**1975 ಮೇ 4ರಂದು ಮಗಳ ಜನನ:** ಅಂದು ಶಿಬರೂರು ಮಠದಲ್ಲಿ ಅನಂತ ತಂತ್ರಿ – ಲಕ್ಷ್ಮಿಯವರ ಮಗಳು ಸತ್ಯಭಾಮ ರಾತ್ರಿ ವೇಳೆ ಹೆಣ್ಣು ಮಗುವಿಗೆ ಜನನ ನೀಡಿದ ದಿನ. ನಾನು ಪ್ರಥಮ ಹೆಣ್ಣು ಮಗುವಿಗೆ ತಂದೆಯಾದ ದಿನ. ಆದರೆ 2–3 ದಿನದ ಮೊದಲು ನನ್ನ ದೊಡ್ಡ ಅಕ್ಕ ಸುಮತಿಯವರನ್ನು ಕರಕೊಂಡು ತಮಿಳುನಾಡಿನಲ್ಲಿದ್ದ ತಿರುವಣ್ಣಾಮಲೈಯಲ್ಲಿದ್ದ ಸಣ್ಣ ಅಕ್ಕ ಸುಲೋಚನಿ ಅಕ್ಕನವರಲ್ಲಿ ಕರಕೊಂಡು ಹೋಗುವ ಜವಾಬ್ದಾರಿ ನನ್ನದಾಗಿತ್ತು. ಹಾಗಾಗಿ ನಾನು 4–5–75ರಂದು ತಿರುವಣ್ಣಾ ಮಲೈಯಲ್ಲಿ ಇದ್ದೆ. ಮರುದಿನ ಅಲ್ಲಿಂದ ಬಂದ ಬಳಿಕವೇ ಹೆರಿಗೆಯಾದ ವಿಷಯ ತಿಳಿಯಿತು. **ಬಜ್ಪೆ ಡಾ। ಗೋಪಾಲಕೃಷ್ಣ** ಹಾಗೂ ಮನೆ ಬಳಿಯ **ಸೇಸಿಯ** ಸಹಕಾರದೊಂದಿಗೆ ಶಿಬರೂರು ಮಠದಲ್ಲಿ ಸ್ವಾಭಾವಿಕ ಹೆರಿಗೆಯಾಯ್ತಂತೆ. ಒಳ್ಳೆಯ ನಡತೆಯ ಮಗು ನನ್ನದಾಗಬೇಕೆಂಬ ಆಸೆಯಿಂದ **"ಸೌಮ್ಯ"** ಎಂದು ನಾಮಕರಣ ಮಾಡಿದೆ. ಸೌಮ್ಯಳ ಜನನದ 4–5 ದಿನದಲ್ಲಿ ಪಡುಬಿದ್ರೆಗೆ ಬಸ್ಸಿನಲ್ಲಿ ಹೋಗುತ್ತಿದ್ದಾಗ ಫಲಿಮಾರಿನ ಸಿಂಡಿಕೇಟ್ ಬ್ಯಾಂಕ್ ಮೇನೇಜರ್ ಸಿಕ್ಕಿದ್ದರು. ಮಗಳು ಹುಟ್ಟಿದ ವಿಷಯ ತಿಳಿಸಿದೆ. ಮೇನೇಜರ್‌ರವರ ಅಭಿಪ್ರಾಯದಂತೆ ರೂ.1,000/– ಯಫ್.ಡಿ ಇಟ್ಟರೆ ಸೌಮ್ಯಳಿಗೆ 20 ವರ್ಷವಾದಾಗ 8 ಸಾವಿರ ಸಿಗುತ್ತದೆ ಎಂಬ ಆಸೆಯಿಂದ ನನ್ನ 2 ಪವನ್ ಬಂಗಾರದ ಚೈನನ್ನು ಮಾರಿ (ಪಡುಬಿದ್ರೆಯಲ್ಲಿ ಅದೇ ದಿನ ರೂ.600/– ಪಡೆದು ರೂ.400/– ನನ್ನ ಎಕೌಂಟ್‌ನಿಂದ ತೆಗೆದು ರೂ.1000/– ಯಫ್.ಡಿ. ಇಟ್ಟೆ) ನನಗೆ ಅವಳ ಮದುವೆಯಾಗುವಾಗ ರೂ.8,000ಕ್ಕೆ ಒಂದೂವರೆ ಪವನ್ ಬಂಗಾರವೂ ಸಿಗಲಿಲ್ಲ. ಬಂಗಾರದ ಬೆಲೆ ಪವನಿಗೆ ರೂ.6,000/– ಆಗಿತ್ತು. 1975ರಲ್ಲಿ ಒಂದು ಪವನಿಗೆ ರೂ.300/– ಇತ್ತು ನನ್ನ ಎಫ್.ಡಿ. ಆಸೆಯಿಂದಾದ ಮೂರ್ಖತನ ಎಂದರೆ ತಪ್ಪಾಗದು.

**1979 ಜನವರಿ 1ನೇ ತಾರೀಕು ಮಗ 'ಗುರುಪ್ರಸಾದ'ನ ಜನನ.** ಫಲಿಮಾರು **ಪಿ.ಕೆ. ರಾಮಕೃಷ್ಣಾಚಾರ್** ಇವರ ಮನೆಯಲ್ಲಿ 4 ಮನೆಗಳು ಬಾಡಿಗೆಗೆ ಇತ್ತು. ಇದರಲ್ಲಿ ಒಂದು ಬಿಡಾರದಲ್ಲಿ ನಾನು ಬಾಡಿಗೆಗೆ ಇದ್ದೆ. ಒಂದು ಮನೆಯಲ್ಲಿ ದಿ। ಸುಬ್ರಾಯ ಭಟ್‌ರವರ ಪತ್ನಿ **ಗುಲಾಬಿ ಅಮ್ಮ, ಮಗ ಪ್ರಭಾಕರ ರಾವ್**, ಇನ್ನೊಂದರಲ್ಲಿ ಮಗಳು **ರತ್ನ, ವಿಠಲ ಭಟ್** ಬಾಡಿಗೆಗೆ ಇದ್ದರು. ಇನ್ನೊಂದು ಮನೆಯಲ್ಲಿ **ಸಂಕ್ರಿ ಶೆಡ್ತಿ** ಎಂಬವರು ಇದ್ದರು.

ಒಂದು ಬಿಡಾರದಲ್ಲಿ **ನಾನು, ನನ್ನ ಪತ್ನಿ** ಸತ್ಯ ಇದ್ದೆವು. ಸೌಮ್ಯ ಸಣ್ಣ ಮಗುವಾಗಿದ್ದಾಗ ಅವಳನ್ನು ಎಲ್ಲರೂ ಅವರವರ ಮನೆಗೆ ಕರಕೊಂಡು ಹೋಗಿ ಮುದ್ದಾಡುತ್ತಿದ್ದರು. ಹೆಚ್ಚಿನ ದಿನಗಳಲ್ಲಿ ಸೌಮ್ಯಳ ಮಧ್ಯಾಹ್ನದ ಊಟ ಗುಲಾಬಿ ಅಮ್ಮನವರಲ್ಲೇ ಆಗುತ್ತಿತ್ತು. ಅವಳಿಗಾಗಿಯೇ ಒಂದು ಬಟ್ಟಲು ಅವರ ಮನೆಯಲ್ಲಿ ತೆಗೆದಿರಿಸಿದ್ದರು, ಗುಲಾಬಿ ಅಮ್ಮ ತುಂಬಾ ಉಪಕಾರ ಸ್ವಭಾವದವರು. ನಮಗೆಲ್ಲಾ ಹಿರಿಯರಾಗಿದ್ದು ಎಲ್ಲಾ ರೀತಿಯ ಕಾಯಿಲೆ ಕಷ್ಟಗಳಿಗೆ ಸಹಾಯಕ್ಕೆ ಬರುತ್ತಿದ್ದರು. ನನ್ನ ಅಮ್ಮನಿಗಿಂತಲೂ ಹೆಚ್ಚಾಗಿ ನನ್ನ ಪತ್ನಿಯನ್ನು, ಸೌಮ್ಯಳನ್ನು ನೋಡಿಕೊಂಡಿದ್ದಾರೆ.

ನನ್ನ ಪತ್ನಿ 2ನೇ ಗರ್ಭಿಣಿಯಾದಾಗ ಬಾಣಂತನಕ್ಕೆ ನೋಡಿಕೊಳ್ಳುವ ಧೈರ್ಯ ತುಂಬಿದವರು ಗುಲಾಬಿ ಅಮ್ಮ. ತುಂಬು ಗರ್ಭಿಣಿಯಾಗಿದ್ದಾಗ ಅವರು ಮಂತ್ರಾಲಯಕ್ಕೆ ಹೋಗಿದ್ದರು. ಅವರು ಬಂದುದು 1–1–1979ರಂದು. ಸೋಮವಾರ ಅದೇ ದಿನ ಬೆಳಿಗ್ಗೆ 10 ಗಂಟೆಗೆ ನನ್ನ ಪತ್ನಿಗೆ ಹೆರಿಗೆ ನೋವು ಬಂದು **ಡಾ। ನಂಬಿಯಾರ್**ರವರ ಆಸ್ಪತ್ರೆಗೆ ಸೇರಿಸಿದೆ. ಡಾ। ನಂಬಿಯಾರರು ಅದೆಷ್ಟೋ ಹೆರಿಗೆ ಮಾಡಿಸಿದ ಕೀರ್ತಿ ಹೊಂದಿದವರು. ಹಾಗಾಗಿ ನನಗೂ ಧೈರ್ಯ ತುಂಬಿದರು. **ಡಾ। ಪ್ರಭಾ** ಮಗಳ ಸಹಾಯ ಪಡೆದು ಡಾ। ನಂಬಿಯಾರರು ಮಧ್ಯಾಹ್ನ ಶಸ್ತ್ರಕ್ರಿಯೆಯಿಂದ ಮಗುವನ್ನು ಆರೋಗ್ಯದಿಂದ ಪ್ರಸವವಾಗುವಂತೆ ಮಾಡಿದರು. 1–01–1979ರಂದು 1 ಗಂಟೆಗೆ ಸರಿಯಾಗಿ ಮಗನ ಜನನವಾಯ್ತು. (1+1+1+9+7+9=28=2+8=10=1) ಒಂದು ನಂಬರ್ ನನ್ನ ಮಗನ ಅದೃಷ್ಟ ಸಂಖ್ಯೆ.

ಶಸ್ತ್ರಹೆರಿಗೆ ಮಾಡಿ ಬಂದ 75 ವರ್ಷ ಪ್ರಾಯದ ಡಾ। ನಂಬಿಯಾರರು ತುಂಬಾ ಬೆವರಿದ್ದರು. ಅಂತೂ ಮಗೂ–ತಾಯಿ ಆರೋಗ್ಯವಾಗಿದ್ದಾರೆ ಎಂದರು. ಊಟದ ವೇಳೆಯಾದ್ದರಿಂದ ಹೆಚ್ಚಿನ ವಿದ್ಯಾರ್ಥಿನಿಯರೆಲ್ಲಾ ಶಾಲೆಯಿಂದ ನಂಬಿಯಾರ್ ಕ್ಲಿನಿಕ್‌ಗೆ ಓಡಿ ಬಂದರು. 1ನೇ ತಾರೀಕು ಹೊಸವರ್ಷ ಆದ್ದರಿಂದ ನನ್ನಲ್ಲಿ ಸಿಹಿ ಕೊಡಬೇಕೆಂದು ಒತ್ತಾಯಿಸಿದರು. ನನ್ನಲ್ಲಿ ಪ್ರೀತಿ ವಿಶ್ವಾಸವಿಟ್ಟಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರ ಒತ್ತಾಯಕ್ಕೆ ಮಣಿದು ಎಲ್ಲಾ ವಿದ್ಯಾರ್ಥಿಗಳಿಗೆ ಚೋಕ್‌ಲೇಟ್ ಹಂಚುವಂತೆ ತಿಮ್ಮಪ್ಪರಲ್ಲಿ (ಪಿ.ಟಿ. ಮಾಸ್ಟ್ರು) ಹೇಳಿದೆ. 10 ದಿನ ಗುಲಾಬಿ ಅಮ್ಮ ಬಾಣಂತನ ಮಾಡಿದರು. ಬಳಿಕ 2–3 ತಿಂಗಳೂ ನನ್ನ ಹೆಂಡತಿ ತಾಯಿ ಅಂದರೆ ನನ್ನ ತಂದೆಯ ತಂಗಿ ಲಕ್ಷ್ಮೀ ಅತ್ತೆ ಬಾಣಂತಿಯನ್ನು ನೋಡಿಕೊಂಡರು. ಸಾಂತೂರು ಸುಬ್ರಹ್ಮಣ್ಯ ದೇವಸ್ಥಾನದ ರಥದ ಎಂಟು ಚಿತ್ರ ಬಿಡಿಸುವ ಕೆಲಸ ಸಿಕ್ಕಿತು. ಆವಾಗ ನನ್ನ ಮಗನಿಗೆ 8–9 ತಿಂಗಳು ಜಗಲಿಯಲ್ಲಿಟ್ಟಿದ್ದ ಚಿತ್ರ ಬಿಡಿಸಿದ್ದ ದೊಡ್ಡ ಹಲಿಗೆಯನ್ನು ದೂಡಿದಾಗ ಅದು ಬೇರೆ ಜಾಗದಲ್ಲಿ ಬಿದ್ದು ಅನಾಹುತದಿಂದ ಪಾರಾದ ಘಟನೆ, ಅಲ್ಲದೆ ಒಂದು ಚಿತ್ರದ ಮೇಲೆ ಅವನೇ ಪೈಂಟ್ ಒರೆಸಿದ್ದು ಈಗಲೂ ನೆನಪಿಗೆ ಬರುತ್ತದೆ.

**ಡಾ। ಸತೀಶ್ ಭಟ್** ಫಲಿಮಾರಿನಲ್ಲಿದ್ದಾಗ ಡಾಕ್ಟರ್‌ರವರಿಗೆ ಏನೋ ಉದ್ದೇಶದಿಂದ 3 ತಿಂಗಳು ರಜೆಯಲ್ಲಿ ಹೋಗುವ ಸಂದರ್ಭ **ಡಾ। ಸುಕನ್ಯಾ**ರೆಂಬವರನ್ನು ಕ್ಲಿನಿಕ್ ನೋಡಿಕೊಳ್ಳಲು ವ್ಯವಸ್ಥೆ ಮಾಡಿದರು. ಡಾ। ಸುಕನ್ಯಾ ಇವರಲ್ಲಿಗೆ ನಾನು

ಮಗುವನ್ನು ತೋರಿಸಲು ಹೋದಾಗ ಪರಿಚಯವಾಗಿ 'ನಿಮ್ಮ ಮನೆಯಲ್ಲಿ (ಪೇಯಿಂಗ್ ಗೆಸ್ಟ್ ಆಗಿ) ಇರಬಹುದಾ' ಕೇಳಿದರು. ಹಣವನ್ನು ಕೊಡದೆ ಬರುವುದಿದ್ದರೆ ಬನ್ನಿ ಎಂದೆ. 3 ತಿಂಗಳು ಡಾ। ಸುಕನ್ಯಾರವರು ನಮ್ಮ ಮನೆಯಲ್ಲಿ ಇದ್ದರು. ನಮ್ಮ ಮನೆಯವರಂತೆ ಹೊಂದಿಕೊಂಡು ಹೋಗುವ ಸರಳ ಸ್ವಭಾವದ ಇವರನ್ನು ಎಂದಿಗೂ ಮರೆಯಲಾಗುವುದಿಲ್ಲ. ನನ್ನ ಸ್ಕೌಟ್ ತರಬೇತಿ ವಿದ್ಯಾರ್ಥಿಗಳಿಗೆ ಪ್ರಥಮ ಚಿಕಿತ್ಸೆಯ ಬಗ್ಗೆ ಒಂದು ದಿನ **"ರಿಸೋರ್ಸ್"** ಆಗಿ ಬಂದಿದ್ದರು. ಆಗ ನಾನು ಫಲಿಮಾರಿನ **ಲಲಿತಕ್ಕ** ಎಂಬವರ ಮನೆಯಲ್ಲಿ ಇದ್ದೆ. ನನ್ನ ಮಗನಿಗೆ 8–9 ತಿಂಗಳು ಮನೆಯ ಹೊರಗೆ ದೊಡ್ಡ ವರಾಂಡವಿತ್ತು. ಅದಕ್ಕೆ ದಳಿ ಮತ್ತು ಬಾಗಿಲು ಇತ್ತು. ಮಗುವನ್ನು ಆಡಲು ಬಿಟ್ಟು ನನ್ನ ಪತ್ನಿ ಬಟ್ಟೆ ಒಗೆಯಲು ಹೊರಗಿನ ಚಿಳಕ ಬಳಿಕ ಹಾಕಿ ಬಾವಿ ಕಟ್ಟೆ ಬಳಿ ಇದ್ದಾಗ ಮಗು (ಗುರು) ಒಳಗೆ ಕೆಳಗಿನ ಬೋಲ್ಟ್ ಹಾಕಿದ್ದರಿಂದ ಕಂಗಾಲಾಗಿ ಶಾಲೆಯಿಂದ ನಾನು ಓಡಿ ಬಂದು ಹಂಚು ತೆಗೆದು ಒಳಹೋಗಿ ಬೋಲ್ಟ್ ತೆಗೆದದ್ದು ಮರೆಯಲಾಗುವುದಿಲ್ಲ.

**ಮರೆಯಲಾಗದ ವೇಳಾಪಟ್ಟಿ ಘಟನೆ:** ಶ್ರೀಯುತ ಪಾಂಡುರಂಗ ಶೆಟ್ಟಿ ಬಪ್ಪನಾಡಿನವರು. ಇವರು ವರ್ಷದ ಪ್ರಾರಂಭದಲ್ಲಿ ವೇಳಾಪಟ್ಟಿ ಮಾಡುತ್ತಿದ್ದರು. ಪ್ರತಿ ವರ್ಷವೂ ಇವರೇ ವೇಳಾಪಟ್ಟಿ ರಚಿಸುವವರು. 1979ನೇ ಇಸವಿ ಜೂನ್ ತಿಂಗಳಲ್ಲಿ ಶ್ರೀಯುತ ಪಾಂಡುರಂಗ ಶೆಟ್ಟಿಯವರಿಗೆ ಎನ್.ಸಿ.ಸಿ.ಯ 3 ತಿಂಗಳ ಟ್ರೈನಿಂಗ್‌ಗೆ ಕರೆ ಬಂದ ಕಾರಣ ಹೋದರು. ಹಾಗಾಗಿ ಬೇರೆ ಯಾರಾದರೂ ಒಬ್ಬರು ವೇಳಾಪಟ್ಟಿ ಮಾಡಬೇಕಾಗಿತ್ತು. ಪ್ರಾಂಶುಪಾಲರಾದ ಶ್ರೀಯುತ ಬಾಲಕೃಷ್ಣರಾಯರು ಮೀಟಿಂಗ್ ಕರೆದು ವೇಳಾಪಟ್ಟಿ ಯಾರಾದರೂ ಮಾಡಬೇಕಾಗುತ್ತದೆ ಎಂದರು. ಶ್ರೀಯುತ ಅರುಣಾಚಲ ಶೆಟ್ರ (ಶಿರ್ವದ ಉಪನ್ಯಾಸಕರು) ಬಳಿ ನಾನು ಕೂತಿದ್ದೆ, ಅವರಲ್ಲಿ ಮೆಲ್ಲಗೆ (ತುಳುವಿನಲ್ಲಿ) 'ನನಗೆ ವೇಳಾಪಟ್ಟಿ ಮಾಡಲು ಕಲಿಯಬೇಕೆಂದು ಆಸೆ ಉಂಟು' ಎಂದು ಹೇಳಿದೆ. ಅರುಣಾಚಲ ಶೆಟ್ರು ಇದೇ ಅಭಿಪ್ರಾಯವನ್ನು ಪ್ರಾಂಶುಪಾಲರಲ್ಲಿ ಹೇಳಿದಾಗ ಪ್ರಾಂಶುಪಾಲರಿಂದ ಒಪ್ಪಿಗೆ ಸಿಕ್ಕಿತು. ಕೆಲವು ಅಧ್ಯಾಪಕರು ತಮಗೆ ಅನುಕೂಲವಾಗುವಂತೆ ವೇಳಾಪಟ್ಟಿ ತಯಾರಿಸುವಂತೆ ನನ್ನಲ್ಲಿ ವಿನಂತಿಸಿದರು. ಶ್ರೀಮತಿ ಸುವಾಸಿನಿ ಆರಿಗರು ನನ್ನ ಸಣ್ಣ ಮಗುವಿಗೆ ಹಾಲು ಕುಡಿಸಲು 3ನೇ ವೇಳೆ ವಿಶ್ರಾಂತಿ ಬೇಕೆಂದರು. ಹಾಗೆ ರಾತ್ರಿ ಇಡೀ ನಿದ್ದೆಗೆಟ್ಟು ಒಂದು ಕರಡು ವೇಳಾಪಟ್ಟಿ ತಯಾರಿಸಿದೆ. ಮರುದಿನ ಶಾಲೆಯಲ್ಲಿ ಪ್ರಾಂಶುಪಾಲರಲ್ಲಿ ಕೊಟ್ಟೆ. ಈ ವೇಳಾಪಟ್ಟಿ ನೋಡಿದ ಪ್ರಾಂಶುಪಾಲರು ಶ್ರೀಯುತ ಸತ್ಯನಾರಾಯಣ ಭಟ್ (ಇಂಗ್ಲೀಷ್ ಉಪನ್ಯಾಸಕರು, ಮುಂಡ್ಕೂರು) ಮತ್ತು ನೀವು ಕ್ರಾಸ್‌ಚಕ್ ಮಾಡಿ ಸರಿ ಇದ್ದರೆ ವಿದ್ಯಾರ್ಥಿಗಳಿಗೆ ಕಳುಹಿಸುವ ಎಂದರು. ಪ್ರಥಮ ವೇಳೆಯಲ್ಲಿ ನಾವಿಬ್ಬರೂ ಕುಳಿತು ಕ್ರಾಸ್‌ಚಕ್ ಮಾಡಿದೆವು. ಅಲ್ಪಸ್ವಲ್ಪ ಬದಲಾವಣೆ ಮಾಡಿ ಪ್ರಾಂಶುಪಾಲರಲ್ಲಿ ಕೊಟ್ಟೆವು. ತರಗತಿಗಳಿಗೆ ವೇಳಾಪಟ್ಟಿ ತಿಳಿದಾಯ್ತು. ಮಧ್ಯಾಹ್ನದ ವೇಳೆ ಶ್ರೀಯುತ ಮಹಾಬಲ ಆರಿಗರು (ಕನ್ನಡ ಅಧ್ಯಾಪಕರು) ನನ್ನ ಮೇಲೆ ಒಂದು ಆಪಾದನೆ ಮಾತು ಹೇಳಿದರು. **ಡ್ರಾಯಿಂಗ್ ಮಾಸ್ಟ್ರು ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣದಂತಿರುವ ವೇಳಾಪಟ್ಟಿ ತಯಾರಿಸಿದ್ದಾರೆ. ನಾನು ಮತ್ತು ನನ್ನ ಪತ್ನಿ ಬೇರೆ ಬೇರೆ ವೇಳೆ ಮನೆಗೆ ಹೋಗುವಂತೆ ಮಾಡಿದ್ದಾರೆ ಎಂದು.** ಪ್ರಾಮಾಣಿಕವಾಗಿ ವೇಳಾ ಪಟ್ಟಿ ತಯಾರಿಸಿದ್ದ ನನಗೆ ದುಃಖವಾಯ್ತು, ಕಣ್ಣೀರು ಹಾಕುತ್ತಾ

ಪ್ರಾಂಶುಪಾಲರಲ್ಲಿ ವೇಳಾಪಟ್ಟಿ ರದ್ದುಮಾಡುವಂತೆ ವಿನಂತಿಸಿದೆ. ಪ್ರಾಂಶುಪಾಲರು ಒಪ್ಪದ ಕಾರಣ, ಬಳಿಕ ಆರಿಗರು ನನ್ನಲ್ಲಿ ಮಾತು ನಿಲ್ಲಿಸಿದರು. 13 ವರ್ಷಗಳಲ್ಲಿ ಎಲ್ಲಾ ಅದ್ಯಾಪಕರೊಂದಿಗೆ ಉಪನ್ಯಾಸಕರೊಂದಿಗೆ ಪ್ರೀತಿ ವಿಶ್ವಾಸದಿಂದಲೇ ಜೀವನ ತೆಗೆದ ನನಗೆ ದೊಡ್ಡ ಅಘಾತವಾಯ್ತು ಮನಸ್ಸಿಗೆ. ಮನಸ್ಸಿನಲ್ಲೇ ದುಃಖಪಡುತ್ತಿದ್ದೆ. 1980ನೇ ಇಸವಿ ಪೆಬ್ರವರಿ ತಿಂಗಳಲ್ಲಿ ಸಾಮಾನ್ಯ ವರ್ಗಾವಣೆ ಅರ್ಜಿ ಹಾಕುವವರಿಗೆ ಸರಕಾರದ ಸುತ್ತೋಲೆ ಬಂತು. ಮನಸ್ಸಿನಲ್ಲಿ ನಿರ್ಧಾರ ಮಾಡಿ ವರ್ಗಾವಣೆ ಅರ್ಜಿ ತೆಗೆದುಕೊಂಡು ಬರೆಯಲು ಪ್ರಾರಂಭಿಸಿದೆ. ಮೊದಲು ವರ್ಗಾವಣೆ ಸ್ಥಳ ಮಂಗಳೂರು ತಾಲೂಕಿನ ಯಾವುದಾದರೂ ಶಾಲೆ – 2ನೇ ವರ್ಗಾವಣಾ ಪ್ರಾಶಸ್ತ್ಯ ಉಡುಪಿ ತಾಲೂಕಿನ ಯಾವುದಾದರೂ ಶಾಲೆ ಎಂದು ಬರೆದೆ. 3ನೇ ಸ್ಥಳ ಬರೆಯುವುದು ಯಾವುದೆಂದು ಆಲೋಚನೆ ಮಾಡುತ್ತಿದ್ದಾಗ ಸಾಗರದಲ್ಲಿ ಸರಕಾರಿ ಪ.ಪೂರ್ವ ಕಾಲೇಜಿನಲ್ಲಿ ಹಿಂದಿ ವಿಷಯದಲ್ಲಿ ಉಪನ್ಯಾಸಕರಾಗಿ ಕೆಲಸ ನಿರ್ವಹಿಸಿ ಇಲ್ಲಿಗೆ ವರ್ಗಾವಣೆ ಆಗಿ ಬಂದಿದ್ದ ಶ್ರೀಯುತ ಶೇಷಗಿರಿ ನಾಯಕ್‌ರವರು ನನ್ನ ಬಳಿ ಬಂದು ಸರಕಾರಿ ಪದವಿ ಪೂರ್ವ ಕಾಲೇಜು ಸಾಗರ–ಶಿವಮೊಗ್ಗ ಜಿಲ್ಲೆ ಎಂದು ಬರೆಯಲು ಹೇಳಿದರು. ಹಾಗೆಯೇ ಬರೆದೆ. ಜೂನ್ ತಿಂಗಳಲ್ಲಿ ವರ್ಗಾವಣೆ ನಿರೀಕ್ಷೆಯಲ್ಲಿದ್ದೆ. ವರ್ಗಾವಣೆ ಆದೇಶ ಬರಲೇ ಇಲ್ಲ.

1980ರ ಜುಲೈ ತಿಂಗಳ ಪ್ರಥಮ ವಾರದಂದು ನನ್ನ ಡಿವಿಜನ್ ಬದಲಾಯಿಸಿ ಶಿವಮೊಗ್ಗ ಡಿವಿಜನ್ **ಸಾಗರ ಪದವಿ ಪೂರ್ವ ಕಾಲೇಜಿಗೆ ಚಿತ್ರಕಲಾ ಶಿಕ್ಷಕರ ಕಾಲಿಹುದ್ದೆಗೆ ವರ್ಗಾವಣಾ ಆದೇಶ** ಬಂತು. ತುಂಬಾ ಸಂತೋಷ ಹಾಗೂ ತುಂಬಾ ಭಯ ಆಯ್ತು. 1 ವರ್ಷದ ಗುರುಪ್ರಸಾದ, ಮಗುವನ್ನು ಪರಿಚಯದವರಿಲ್ಲದ ಅಪರಿಚಿತ ಊರಿಗೆ, ಚಳಿಯ ಪ್ರದೇಶಕ್ಕೆ ಹೋಗಿ ಉದ್ಯೋಗ ಮಾಡುವ ಬಗೆ ಹೇಗೆ ಎಂದು ? ಬಾಡಿಗೆ ಮನೆ ಹುಡುಕಬೇಕು. ಇದೆಲ್ಲಾ ನನ್ನಿಂದ ಸಾಧ್ಯನಾ ಎಂದು. ಶ್ರೀಯುತ ಶೇಷಗಿರಿ ನಾಯಕ್‌ರವರು ದೈರ್ಯ ತುಂಬಿದರು. ಬಾಡಿಗೆ ಮನೆ ಜವಾಬ್ದಾರಿ ತಾನೇ ವಹಿಸಿಕೊಂಡರು. ಆದರೂ ಸಾಗರದಲ್ಲಿ ನನ್ನ ಹಳೆ ವಿದ್ಯಾರ್ಥಿ ನಂದಿಕೂರಿನ ರಾಘವೇಂದ್ರ (ನಂದಿಕೂರು ಅನಂತಣ್ಣನವರ ತಮ್ಮ) ಸಾಗರದ ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗದಲ್ಲಿರುವ ವಿಷಯ ತಿಳಿಯಿತು. ಹಾಗಾಗಿ ಅವರಿಗೆ ಒಂದು ಪತ್ರ ಬರೆದು ನನಗಾಗಿ ಒಂದು ಬಾಡಿಗೆ ಮನೆ ಕಾದಿರಿಸುವ ಬಗ್ಗೆ ತಿಳಿಸಿದೆ.

ನಾನು ಮತ್ತು ಶೇಷಗಿರಿ ನಾಯಕ್‌ರವರು ಒಂದು ಶನಿವಾರದಂದು ಸಾಗರಕ್ಕೆ ಹೊರಟೆವು. ರಾತ್ರಿ ಏಳೂವರೆ–ಎಂಟು ಘಂಟೆಗೆ ಸಾಗರ ಸೇರಿದೆವು. ಸುಮಾರು 10 ಘಂಟೆ ರಾತ್ರಿ ತನಕ ಬಾಡಿಗೆ ಮನೆ ಮಾಲೀಕರನ್ನು ವಿಚಾರಿಸಿದಾಗ ಎಲ್ಲಾ ಕಡೆ 'ನೋ ವೇಕೆನ್ಸಿ' ಎಂದು ಬಿಟ್ಟರು. ರಾತ್ರಿ ಮನಸ್ಸಿನ ಗೊಂದಲ ಇಟ್ಟುಕೊಂಡೇ ಶೇಷಗಿರಿ ನಾಯಕ್‌ರವರಲ್ಲಿ ಮಲಗಿದೆ. ಮರುದಿನ ಬೆಳಿಗ್ಗೆ ಎದ್ದವನೇ ನನ್ನ ಹಳೆವಿದ್ಯಾರ್ಥಿ ರಾಘವೇಂದ್ರನ ಬ್ಯಾಂಕ್ ವಿಳಾಸಕ್ಕೆ ಹೋಗಿ ಇಬ್ಬರೂ ಒಟ್ಟಾಗಿ ವಿಚಾರಿಸಿದೆವು. ರಾಘವೇಂದ್ರ ರಜೆಯಾದ್ದರಿಂದ ಬ್ಯಾಂಕಿಗೆ ಬರಲಿಲ್ಲ. ಅವನ ಬಾಡಿಗೆ ಕೊಠಡಿ ವಿಳಾಸ ಸಿಕ್ಕಿತು. ಅಲ್ಲಿಗೆ ಹೋಗಿ ಬಾಗಿಲು ಬಡಿದಾಗ ಹಸನ್ಮುಖದಲ್ಲಿ ಬೀಗದ ಕೈ ತೋರಿಸುತ್ತಾ, ಗುರುಗಳಾದ ನನ್ನನ್ನು ಸ್ವಾಗತಿಸಿದ.

ಅವನ ಜೊತೆಗೆ ಚಾಮರಾಜ ಪೇಟೆಯಲ್ಲಿದ್ದ ನನಗಾಗಿ ಕಾದಿರಿಸಿದ್ದ ಮನೆ ಬೀಗ ತೆರೆದು ನೋಡಿದಾಗ ಅತ್ಯಾನಂದವಾಯ್ತು. ಅತೀ ದೊಡ್ಡದಾದ  ಒಳ್ಳೆಯ ಪರಿಸರದಲ್ಲಿ ಶಾಲೆಗೆ ಸಮೀಪದಲ್ಲಿದ್ದ ಮನೆ. ಎಲ್ಲಾ ರೀತಿಯಲ್ಲಿ ನನಗೆ ಒಳ್ಳೆಯದಾಗಿದೆ ಎಂದೆನಿಸಿತು. ಆದಿತ್ಯವಾರ ರಾತ್ರಿ ಫಲಿಮಾರಿಗೆ ಬಂದೆ. ಸೋಮವಾರವೇ ಪಾಂಶುಪಾಲರಲ್ಲಿ ರಿಲೀವ್ ಮಾಡಲು ತಿಳಿಸಿದೆ. ಪ್ರಾಂಶುಪಾಲರು, ಎಲ್ಲಾ ಅಧ್ಯಾಪಕ ವೃಂದದವರು, ಉಪನ್ಯಾಸಕ ವರ್ಗದವರು ವರ್ಗಾಯಿಸಿಕೊಂಡು ಸಾಗರಕ್ಕೆ ಹೋಗುವುದು ಬೇಡ ಎಂದು ತುಂಬಾ ಒತ್ತಾಯಿಸಿದರು. ನನ್ನ ಕೈಯಲ್ಲಿ ಖರ್ಚಿಗೆ ಹಣ ಇರಲಿಲ್ಲ. ಆದರೂ ಫಲಿಮಾರನ್ನು ಬಿಟ್ಟು ಹೋಗಬೇಕೆಂಬ ಹಠ ನನ್ನನ್ನು ಬಿಡಲಿಲ್ಲ. ಖರ್ಚಿಗಾಗಿ ಹಣ ಬೇಕಾಗಿತ್ತು. ಸಾಗರಕ್ಕೆ ಮನೆ ಸಾಮಗ್ರಿ ಕೊಂಡು ಹೋಗಲು ರೂ.300 ಬಾಡಿಗೆ ಕೊಡಬೇಕು. ಹಣ ಇರಲಿಲ್ಲ. ಹಾಗಾಗಿ ಶಿರ್ವದಲ್ಲಿ ನನ್ನ ಡ್ರಾಯಿಂಗ್ ಮಾಸ್ಟರ್‌ರವರ ಅಣ್ಣ **ಶ್ರೀಯುತ ಹರಿಶ್ಚಂದ್ರ ಆಚಾರ್ಯರ** ಬಂಗಾರದ ಅಂಗಡಿ ಇತ್ತು. (ನಮ್ಮ ಮನೆಯವರೆಲ್ಲರ ಪರಿಚಯದ್ದು) – ಹಾಗಾಗಿ ಅಲ್ಲಿ ನನ್ನ ಬಂಗಾರದ ಚೈನ್ ಮಾರಾಟ ಮಾಡಲು ಹೋದೆ. ಅಲ್ಲಿ ತೂಕ ಮಾಡಿದಾಗ ರೂ. 400/– (ಒಂದೂವರೆ ಪವನ್) ಸಿಗುತ್ತದೆ ಎಂದರು. ಆಯ್ತು ಎಂದಾಗ **ಶ್ರೀಯುತ ಅರುಣಾಚಲ ಶೆಟ್ರು** (ನಮ್ಮ ಫಲಿಮಾರಿನ ಸಹೋದ್ಯೋಗಿ) ಅಲ್ಲಿಗೆ ಬಂದರು. ಇಲ್ಲಿಗೆ ಬಂದ ಕಾರಣ ವಿಚಾರಿಸಿದರು. ಬಂಗಾರದ ಚೈನಿನ ವಿಷಯ ತಿಳಿದು ತನಗೇ ಚೈನ್ ಬೇಕು ಎಂದು ನನ್ನಲ್ಲಿ ರೂ.400/– ಕೊಟ್ಟರು. 16–7–1980ರಂದು ರಿಲೀವಿಂಗ್ ಪತ್ರ ಫಲಿಮಾರಿನಿಂದ ಪಡೆದು 17–7–1980ರಂದು ಸಾಗರ ಪದವಿ ಪೂರ್ವ ಕಾಲೇಜಿಗೆ ಚಿತ್ರಕಲಾ ಅಧ್ಯಾಪಕನಾಗಿ ಸೇರಿದೆ.



Find out ...? (BALAKRISHNA)

# ಸಾಗರ ಸರಕಾರಿ ಪ. ಪೂ. ಕಾಲೇಜಿನಲ್ಲಿ ಚಿತ್ರಕಲಾ ಅಧ್ಯಾಪಕನಾಗಿ ನನ್ನ ಜೀವನ (17.7.1980ರಿಂದ 5.1.1983)

ಸರಕಾರಿ ಪ.ಪೂ. ಕಾಲೇಜು, ಸಾಗರ, ಶಿವಮೊಗ್ಗ ಜಿಲ್ಲೆ ಈ ಸಂಸ್ಥೆಗೆ ಸರಕಾರಿ ಪ.ಪೂ. ಕಾಲೇಜು ಫಲಿಮಾರು ಉಡುಪಿ ಇಲ್ಲಿಂದ 15-7-80ರಂದು ಸಂಜೆ ರಿಲೀವ್ ಆಗಿ 17-7-80ರಂದು ರಿಪೋರ್ಟ್ ಮಾಡಿಕೊಂಡೆ. ಈ ಸಂಸ್ಥೆ ಪೂರ್ಣ ಸರಕಾರಿ ಶಾಲೆಯಾಗಿತ್ತೆಂಬುದಕ್ಕೆ ಉದಾ: ಸಂಸ್ಥೆಯ ಹೊರಗೋಡೆಯಲ್ಲಿ ಅಧ್ಯಾಪಕರ ಉಪನ್ಯಾಸಕರ ಪ್ರಾಂಶುಪಾಲರ ಹೆಸರನ್ನೆಲ್ಲಾ ಇದ್ದಲಿನಲ್ಲಿ ಎಲ್ಲೆಂದರಲ್ಲಿ ಅಶ್ಲೀಲವಾಗಿ ಬರೆಯಲಾಗಿತ್ತು. ಈ ಬಗ್ಗೆ ನನಗೆ ಏನೂ ತಿಳಿದಿರಲಿಲ್ಲ. ಈ ಶಾಲೆಗೆ ಸೇರಿ 1 ತಿಂಗಳ ನಂತರ ಇಲ್ಲಿಯ ದುರವಸ್ಥೆ ತಿಳಿಯಿತು. ಬೆಳಿಗ್ಗೆ ಗಂ. 7-00ರಿಂದ 11ರ ತನಕ ಪ.ಪೂ. ಕಾಲೇಜು ನಡೆಯುತ್ತಿತ್ತು. ಸುಮಾರು 800-900 ವಿದ್ಯಾರ್ಥಿ ವಿದ್ಯಾರ್ಥಿನಿಯರು ಅಭ್ಯಾಸ ನಡೆಸುತ್ತಿದ್ದರು. 11-30ರಿಂದ ಸಂಜೆ 5ರ ತನಕ ಪ್ರೌಢಶಾಲೆ ನಡೆಯುತ್ತಿತ್ತು. ನಾನು ಸೇರಿದ ಸಮಯದಲ್ಲಿ ಈ ಸಂಸ್ಥೆಯಲ್ಲಿ 1000-1200 ವಿದ್ಯಾರ್ಥಿ ವಿದ್ಯಾರ್ಥಿನಿಯರು ಇದ್ದರು. 8ನೇ ತರಗತಿಯಲ್ಲಿ 7-8 ಡಿವಿಜನ್ 9-10ನೇ ತರಗತಿಯಲ್ಲಿ 4-5 ಡಿವಿಜನ್ (ವಿಭಾಗ) ಗಳು ಇದ್ದವು. 10ನೇ ತರಗತಿ ಫಲಿತಾಂಶ ಮಾತ್ರ 5%, 6%, ಮಾತ್ರ. 10% ಫಲಿತಾಂಶ ಬಹಳ ಅಪರೂಪ. ಇಂತಹ ಶಿಕ್ಷಣ ಸಂಸ್ಥೆಗಳೂ ನಮ್ಮ ರಾಜ್ಯದಲ್ಲಿ ಇದೆ ಎಂಬುದನ್ನು ಇದನ್ನು ನೋಡಿ ತಿಳಿದುಕೊಂಡೆ. ಅಧ್ಯಾಪಕರ ಕೊಠಡಿ ಹೇಗಿತ್ತು ಅನ್ನುತ್ತೀರಾ? ಕಿಲಾಡಿ ಮಕ್ಕಳು ಡೆಸ್ಕ್ ಬೆಂಚು ತಳ್ಳಿ ದೂಡಿದಾಗ ತುಂಡಾಗಿದ್ದರೆ ಅದನ್ನು ಸ್ಟಾಫ್‌ನವರು ಕುಳಿತುಕೊಳ್ಳಲು ಕೊಟ್ಟಿದ್ದರು. ಈ ಹರಕು ಮುರುಕು ಬೆಂಚಿನಲ್ಲಿ ಕುಳಿತಿದ್ದಾಗ ಮೊದ ಮೊದಲು ಕಣ್ಣೀರು ಬರುತ್ತಿತ್ತು. ಇಷ್ಟು ದುಃಖ ಬರಲು ಕಾರಣವೇನೆಂದರೆ 13 ವರ್ಷದಲ್ಲಿ ಫಲಿಮಾರಿನ ನನ್ನ ಸಂಸ್ಥೆ, ನನ್ನ ಜೀವನ ಶೈಲಿ, ನಾನು ಫಲಿಮಾರಿನ ಸಂಸ್ಥೆಯಲ್ಲಿ ಅನುಭವಿಸಿದ ಸುಖಕ್ಕೂ - ಸಾಗರದಲ್ಲಿ ಕಾಣುತ್ತಿರುವ ದುರಾವಸ್ಥೆಗೂ ಅಜಗಜಾಂತರ. ಫಲಿಮಾರಿನಲ್ಲಿ ಎಸ್.ಎಸ್.ಎಲ್.ಸಿ. ಫಲಿತಾಂಶ 70%, 80% ಬರುತ್ತಿತ್ತು. ನನಗಾಗಿ ಹೊಲಿಗೆ ತರಗತಿಗೆ ಪ್ರತ್ಯೇಕ ಕೊಠಡಿ ಇತ್ತು. ಇಲ್ಲಿ ನನ್ನದೇ ಆದ ಜೀವನ. ಒಂದು ಹೊಲಿಗೆ ಯಂತ್ರ 2 - 3 ಕಬಾಟುಗಳು (ಹೊಲಿಗೆ ವಸ್ತು - ನನ್ನ ವೈಯಕ್ತಿಕ ವಸ್ತು - ಸ್ಕೌಟ್ ವಸ್ತು ಇರಿಸಲು ಪ್ರತ್ಯೇಕ ಪ್ರತ್ಯೇಕ) 10 ಜೊತೆ ಬೆಂಚು ಡೆಸ್ಕ್‌ಗಳು ಫ್ಯಾನ್ ವ್ಯವಸ್ಥೆಯನ್ನು ಹೊಂದಿದ್ದ ನಾನು ರಾಜನಂತೆ ಜೀವಿಸುತ್ತಿದ್ದೆ.

ಆದರೆ ಸಾಗರ ಈ ಸಂಸ್ಥೆಗೆ ಬಂದು ನೋಡಿದಾಗ ನನ್ನ ಮುಖಕ್ಕೆ ನಾನೇ ಉಗಿಸಿಕೊಂಡ ಅನುಭವ. ನನ್ನ ಅಧಿಕಪ್ರಸಂಗಿತನದಿಂದ ನಾನೇ ದುಃಖ ಪಡುವಂತಾಗಿತ್ತು. ಈ ಸಂಸ್ಥೆಯೊಂದು ದೊಡ್ಡ ಸಾಗರ ಇದ್ದಂತೆ ಇತ್ತು. ಸ್ಟಾಫ್ ರೂಂನಲ್ಲಿ ಎಷ್ಟೋ ಬಾರಿ ಒಬ್ಬನೇ ಇದ್ದಾಗ ಕಣ್ಣೀರು ಬರುತ್ತಿತ್ತು. 70%, 80% ಫಲಿತಾಂಶ ಬರುತ್ತಿದ್ದ ಫಲಿಮಾರು ಮತ್ತು 5%, 6% ಬರುತ್ತಿದ್ದ ಸಾಗರ (ಎಸ್.ಎಸ್.ಎಲ್.ಸಿ.) ಹೇಗಿರಬಹುದು ನನ್ನ ಪರಿಸ್ಥಿತಿ. ಅಂತೂ 4-5 ದಿನದ ಬಳಿಕ ತರಗತಿಗೆ ಹೋಗಲು ಪ್ರಾರಂಭಿಸಿದೆ. ತರಗತಿಗೆ ತಯಾರಾಗಿ ಹೋದಾಗ 7-8 ಮಕ್ಕಳು ಇದ್ದರು. 4-5 ಹುಡುಗರು ಮತ್ತು ಹುಡುಗಿಯರು. ಉಳಿದವರು ಎಲ್ಲಿ? ಎಂದು ವಿಚಾರಿಸಿದಾಗ ಅವರು ಹೊರಗೆ ಹೋಗಿದ್ದಾರೆ ಎನ್ನುವ ಉತ್ತರ. ಡ್ರಾಯಿಂಗ್ ಪುಸ್ತಕ ಯಾರಲ್ಲೂ ಇಲ್ಲ. ಉಳಿದ ನೋಟ್ ಬುಕ್‌ಗಳೇ ಇರದ ಮಕ್ಕಳಲ್ಲಿ ಡ್ರಾಯಿಂಗ್ ಪುಸ್ತಕ ಎಲ್ಲಿಂದ

ಬರಬೇಕು. ಎಲ್ಲಾ ತರಗತಿಯಲ್ಲೂ ಇದೇ ಹಣೆಬರಹ. ಪ್ರತೀ ತರಗತಿಯಲ್ಲೂ 2–3 ಚಿತ್ರಕಲಾ ಆಸಕ್ತ ವಿದ್ಯಾರ್ಥಿಗಳು ಮಾತ್ರ ಇರುತ್ತಿದ್ದರು. ಇದನ್ನು ನೋಡಿದ ನಾನು ಪ್ರಾಂಶುಪಾಲರಲ್ಲಿ ಹೋಗಿ ಹೇಳಿದೆ. ನನ್ನ ತರಗತಿಯಲ್ಲಿ ಮಕ್ಕಳೇ ಕುಳಿತಿರುವುದಿಲ್ಲ. ಎಲ್ಲಾ ಓಡಿಹೋಗುತ್ತಾರೆ. ಏನು ಮಾಡಲಿ? ಎಂದು. ನೀವು ಗಾಬರಿಯಾಗಬೇಡಿ. ಇಲ್ಲಿ ಎಲ್ಲಾ ತರಗತಿಯಲ್ಲೂ ಇದೇ ರೀತಿ ಮಕ್ಕಳು ಹಾಜರಾತಿ ಪಿರೇಡಿಗೆ ಎಂದರೆ ಪ್ರಥಮ ಪಿರೇಡಿಗೆ ಮಾತ್ರ ಇರುತ್ತಾರೆ. ಮತ್ತೆ ಓಡಿಹೋಗುತ್ತಾರೆ ಎಂದರು. ಪ್ರಾಚಾರ್ಯರಿಂದ ಈ ಉತ್ತರ ಬಂದ ಬಳಿಕ ನನ್ನಷ್ಟಕ್ಕೆ ನಾನು ಇದ್ದ ಮಕ್ಕಳಿಗೆ ಚಿತ್ರ ಕಲ್ಪಿಸಲು ಪ್ರಾರಂಭಿಸಿದೆ. ನಾನು ಸಾಗರಕ್ಕೆ ಶಾಲೆಗೆ ಸೇರಿ 8–10 ದಿನದಲ್ಲಿ ನನ್ನ ಪತ್ನಿಯ ತಾಯಿ **ಲಕ್ಷ್ಮೀ** ಅಂದರೆ ನನ್ನ ಅತ್ತೆ (ತಂದೆಯ ತಂಗಿ) ಹೃದಯಾಘಾತದಿಂದ ತೀರಿಹೋದ ಬಗ್ಗೆ ಟೆಲಿಗ್ರಾಂ ಬಂತು. ಆವಾಗ ದೂರವಾಣಿ ಇರಲಿಲ್ಲ. ಪತ್ನಿಯನ್ನು ಕರಕೊಂಡು ಅವರ ಉತ್ತರ ಕ್ರಿಯೆಗೆ ಕಟೀಲಿಗೆ ಬಂದು ಹಾಜರಾದೆ. ಅತ್ತೆಯವರ ಗಂಡ ಅಂದರೆ ನನ್ನ ಮಾವ 25–26 ವರ್ಷ ಪಕ್ಷಿವಾತ ಕಾಯಿಲೆಯಿಂದ ಬಳಲುತಿದ್ದು ನನ್ನ ಅತ್ತೆಯವರೇ ಅವರನ್ನು ನೋಡಿಕೊಳ್ಳುತ್ತಿದ್ದರು. ಮಾವನವರ ಬಲಪಾರ್ಶ್ವ ಕೆಲಸ ಮಾಡುತ್ತಿರಲಿಲ್ಲ. ಹಾಗಾಗಿ ತುಂಬ ಕಷ್ಟವಾಗುತ್ತಿತ್ತು. ಪತ್ನಿಯ ಆರೈಕೆಯಿಂದ 90 ವರ್ಷ ಬದುಕಿದ್ದರು. ಬಳಿಕ 7–8 ತಿಂಗಳಲ್ಲಿ ಅವರೂ ಮೃತಪಟ್ಟರು.

ಸಾಗರಕ್ಕೆ ಹೋದಾಗ ನಾನು ಚೈನು ಮಾರಿದ ಹಣದಿಂದ ಸಾಗಾಟದ ಮಜೂರಿ ಕೊಟ್ಟಿದ್ದೆ. ಹಾಗಾಗಿ ಅತ್ತೆ ಸಾಯುವಾಗ ನನ್ನ ಕಿಸೆ ಬರಿದಾಗಿತ್ತು. ಅಪರಿಚಿತನಾದ ನನ್ನ ಬಗ್ಗೆ ಅತ್ತೆ ತೀರಿದ ಕಾರಣ ನನ್ನ ಕಷ್ಟವನ್ನರಿತ ಒಬ್ಬರು ಅಧ್ಯಾಪಕರು ಸಹೋದ್ಯೋಗಿ **"ಶ್ರೀ ಎಚ್.ಎಂ.ತಿಮ್ಮಪ್ಪ"** ಎನ್ನುವವರು ಒತ್ತಾಯ ಪೂರ್ವಕವಾಗಿ **ರೂ.300/–**ನ್ನು ಕೊಟ್ಟು ಆಪಂದ್ಭಾವರಾಗಿ ನನಗೆ ಸಹಾಯ ಮಾಡಿದ್ದನ್ನು ಜೀವಮಾನದಲ್ಲಿ ಮರೆಯಲು ಸಾಧ್ಯವಿಲ್ಲ. ಇವರು ಸಾಗರ ನಮ್ಮ ಸಂಸ್ಥೆಯಲ್ಲಿ ಹೈಸ್ಕೂಲ್ ವಿಭಾಗಕ್ಕೆ ಕನ್ನಡ ಬೋಧಿಸುತ್ತಿದ್ದರು. ಇವರು **ಕಲಸಿ ಊರಿನ**ವರು. ಸಾಗರದ ಅಗ್ರಹಾರಲ್ಲಿ ವಾಸಿಸುತ್ತಿದ್ದರು. ಇವರನ್ನು ನನ್ನ ಜೀವಮಾನದಲ್ಲಿ ಮರೆಯಲಾರೆ.



ನಾನು ಸಾಗರದ ಚಾಮರಾಜಪೇಟೆಯ ಪಕ್ಕದಲ್ಲಿ ಉತ್ತಮ ಪರಿಸರದ ಬಾಡಿಗೆ ಮನೆಯಲ್ಲಿ ಜೀವನ ಸಾಗಿಸುತ್ತಿದ್ದೆ. ಆಸುಪಾಸಿನಲ್ಲಿ ಒಳ್ಳೆಯ ವಿದ್ಯಾವಂತರಿದ್ದರು. ಹಾಗಾಗಿ ನೆಮ್ಮದಿ ಸಿಗುತ್ತಿತ್ತು. ಮಧ್ಯಾಹ್ನದ ಊಟಕ್ಕೂ ಬಂದು ಹೋಗುತ್ತಿದ್ದೆ. **ಸಾಗರಕ್ಕೆ ಹೋದಾಗ ಗುರುಪ್ರಸಾದನಿಗೆ ಒಂದೂವರೆ ವರ್ಷ. ಸೌಮ್ಯಳಿಗೆ ಐದೂವರೆ ವರ್ಷ.** ನಮ್ಮ ಮನೆಯಿಂದ ಸ್ವಲ್ಪವೇ ದೂರದಲ್ಲಿ ಸೌಮ್ಯಳಿಗೆ ಕ್ರಿಶ್ಚಿಯನ್ ಸಂಸ್ಥೆಯೊಂದರಲ್ಲಿ 1ನೇ ತರಗತಿಗೆ ಸೇರಿಸಿದೆ. ಅಲ್ಲಿಯ ಸಿಷ್ಟರ್ಸ್‌ಗಳನ್ನು ಕಂಡು ಅವರ ಉಡುಪು ನೋಡಿ ಸೌಮ್ಯ ಶಾಲೆಗೆ ಹೋಗಲು ಹೆದರುತ್ತಿದ್ದಳು. ಬಲಾತ್ಕಾರವಾಗಿ ಒತ್ತಾಯದಿಂದ ಹೊಡೆದು ಬಡಿದು ಶಾಲೆಗೆ ಮುಟ್ಟಿಸಲು ತುಂಬಾ ಕಷ್ಟವಾಗುತ್ತಿತ್ತು.

ಒಂದು ದಿನ ಮನೆಯಿಂದ ಶಾಲೆಯ ತನಕ ಬೆತ್ತ ಹಿಡಿದು ಹೊಡೆದು ಓಡಿಸಿದ್ದು ಈಗಲೂ ನೆನಪಿಗೆ ಬರುತ್ತಿದೆ. ಅವಳು ಕೂಗಿಕೊಂಡೇ ಶಾಲೆಯ ತನಕ ಹೋಗಿದ್ದಳು. ಒಂದೆರಡು ತಿಂಗಳಲ್ಲಿ ಶಾಲಾ ವಾತಾವರಣಕ್ಕೆ ಒಗ್ಗಿಕೊಂಡ ಸೌಮ್ಯ ಶಾಲೆಯ ಸಿಸ್ಟರ್ಸ್‌ಗಳ ಅಚ್ಚುಮೆಚ್ಚಿನ ವಿದ್ಯಾರ್ಥಿನಿಯಾಗಿದ್ದಳು.

**ಸೌಮ್ಯಳ ಪ್ರವಾಸ:** 2ನೇ ತರಗತಿಯಲ್ಲಿ ಇರುವಾಗ 'ನಾಳೆ ಒಂದು ದಿನ ಪ್ರವಾಸ ಹೋಗಲಿಕ್ಕಿದೆ. 6 ಗಂಟೆಗೆ ಬೆಳಿಗ್ಗೆ ಹೋಗಬೇಕಂತೆ' ಎಂದು ತೊದಲು ಮಾತಿನಿಂದ ಹೇಳಿದ್ದಳು. ನಾನು 5.45ಕ್ಕೆ ಅವಳಿಗೆ ಯುನಿಫಾರ್ಮ್ ಡ್ರೆಸ್ ಹಾಕಿ, ಡಬ್ಬದಲ್ಲಿ ಬಿಸ್ಕೀಟ್, ನೀರಿನ ಕ್ಯಾನ್, ಎಲ್ಲಾ ರೆಡಿಮಾಡಿ ಕೊಟ್ಟು ಕರಕೊಂಡು ಹೋದಾಗ ಅವರ ಪ್ರವಾಸದ ಬಸ್ಸು ಹೋಗಿ ಆಗಿತ್ತು. ತುಂಬಾ ಬೇಸರದಿಂದ ಮನೆಗೆ ಕರಕೊಂಡು ಬಂದೆ. ಮೊದಲು ಅತ್ತುಕೊಂಡು ಕೂತಳು, ಬಳಿಕ ಒಬ್ಬಳೇ ಡಬ್ಬದಲ್ಲಿದ್ದ ಬಿಸ್ಕಿಟನ್ನು ತೆಗೆದು ಒಂದೊಂದೇ ತಿನ್ನುತ್ತಾ ದುಃಖವನ್ನು ಮರೆತಳು.

ನಾನು ಸಾಗರ ಪದವಿಪೂರ್ವ ಕಾಲೇಜಿಗೆ ಸೇರಿ 3–4 ತಿಂಗಳಲ್ಲಿ **"ಪವಾರ್"**ಎಂಬವರನ್ನು ನಮ್ಮ ಸಂಸ್ಥೆಗೆ ಪ್ರಾಂಶುಪಾಲರನ್ನಾಗಿ ನೇಮಿಸಿದರು. ಅವರ ಹೆಸರಿಗೆ ತಕ್ಕಂತೆ ಅವರ **'ಪವಾರ್'** ಎಷ್ಟಿತ್ತೆಂದರೆ ನನಗೇ ನಂಬಲಾರದಷ್ಟು ನಮ್ಮ ಸಂಸ್ಥೆಯ ಅವ್ಯವಸ್ಥೆಯನ್ನು ಹೋಗಲಾಡಿಸಿದರು. ಜೂನಿಯರ್ ಕಾಲೇಜು 10.30ಕ್ಕೆ ಮುಗಿದರೆ 11.00ಕ್ಕೆ ಪ್ರೌಢಶಾಲೆ ಪ್ರಾರಂಭವಾಗುತ್ತಿತ್ತು. ಹಾಗಾಗಿ ಹೈಸ್ಕೂಲ್ ಜೂನಿಯರ್ ಕಾಲೇಜು ಬೇರೆ ಬೇರೆ ಎಂದೇ ಎಲ್ಲರ ಅಭಿಪ್ರಾಯವಿತ್ತು. ಪವಾರ್ ಬಂದವರು ಒಂದು ತಿಂಗಳು ಶಾಲಾ ಶಿಸ್ತು ಅಧ್ಯಾಪಕರ ಚಟುವಟಿಕೆ – ಮಕ್ಕಳ ಪುಂಡಾಡಿಕೆ ಎಲ್ಲವನ್ನು ಯಾರಿಗೂ ತಿಳಿಯದಂತೆ ನಿರೀಕ್ಷಣೆ ಮಾಡಿ ಒಂದು ತಿಂಗಳ ನಂತರ ಅಧ್ಯಾಪಕರನ್ನು ಉಪನ್ಯಾಸಕರನ್ನು ಸೇರಿಸಿ ಒಂದು ಮೀಟಿಂಗ್ ಮಾಡಿ ಶಾಲಾ ಅಶಿಸ್ತಿನ ಬಗ್ಗೆ ತುಂಬ ಕಳವಳ ವ್ಯಕ್ತಪಡಿಸಿ ಇದನ್ನು ಎಲ್ಲರ ಸಹಕಾರದಿಂದ ಸರಿಪಡಿಸುವುದಾಗಿ ಹೇಳಿದರು. ಮರುದಿನದಿಂದ **'ಪವಾರ್'**ರವರಿಂದ ಸಂಸ್ಥೆಯ ಉನ್ನತಿ ಪ್ರಾರಂಭವಾಯ್ತು.

ಶಾಲೆ ಆಯತಾಕಾರವಾಗಿತ್ತು. ವಿದ್ಯಾರ್ಥಿಗಳಿಗೆ ಹೊರಗೆ–ಒಳಗೆ ಬರಲು 2 ಬಾಗಿಲುಗಳಿದ್ದವು. ಪವಾರ್ ಬರುವ ಮೊದಲು ವಿದ್ಯಾರ್ಥಿಗಳು ತರಗತಿಗಳಲ್ಲಿ ತುಂಬಿಕೊಂಡಿದ್ದು ಪ್ರಥಮ ಪಿರೇಡ್ (ಅವಧಿ) ಹಾಜರಾತಿ ಆದ ಕೂಡಲೇ ಎರಡೂ ಬಾಗಿಲಿನಿಂದ ಹೊರಗೆ ಓಡಿ ಹೋಗಿಬಿಡುತ್ತಿದ್ದರು. ತರಗತಿಗಳಲ್ಲಿ ಆಸಕ್ತ 8.10 ಮಕ್ಕಳು ಮಾತ್ರ ಕುಳಿತುಕೊಳ್ಳುತ್ತಿದ್ದರು. **ಪವಾರ್** ಬಂದ ಬಳಿಕ 2 ಬಾಗಿಲುಗಳಲ್ಲಿ ಒಂದು ಬಾಗಿಲಿಗೆ ಬೀಗ ಹಾಕಿಸಿ ಇನ್ನೊಂದು ಬಾಗಿಲ ಬಳಿ ತಾನೇ ಬೆತ್ತ ಹಿಡಿದುಕೊಂಡು ಶಾಲಾ ಪ್ರಾರಂಭದ ವೇಳೆ ಕುಳಿತುಕೊಳ್ಳುತ್ತಿದ್ದರು. ತಡವಾಗಿ ಶಾಲೆಗೆ ಬಂದ ವಿದ್ಯಾರ್ಥಿಗಳಿಗೆ ನಾಲ್ಕು ಬೆತ್ತದ ರುಚಿ ತೋರಿಸಿ ಕಳುಹಿಸುತ್ತಿದ್ದರು. ಒಳ ಬಂದ ವಿದ್ಯಾರ್ಥಿಗಳು ಹೊರ ಹೋಗದಂತೆ ಅದಕ್ಕೂ ಬೀಗ ಹಾಕಿ ಬಿಡುತ್ತಿದ್ದರು. ಅಧ್ಯಾಪಕರು ಹೊರ ಹೋಗಲು ಅವರಿಗೆ ಅವರ ಕೊಠಡಿಯಿಂದಲೇ ಬಾಗಿಲು ಇತ್ತು. ಹೀಗೆ ಒಂದು ತಿಂಗಳು ಹೆಚ್ಚಿನ ಮಕ್ಕಳು ಪೆಟ್ಟು ತಿಂದು ಅನಿವಾರ್ಯವಾಗಿ ತರಗತಿಯಲ್ಲಿ ಕುಳಿತುಕೊಳ್ಳುವಂತಾಯ್ತು. 8ನೇ

ತರಗತಿಯಲ್ಲಿ 60–70 ಮಕ್ಕಳಿಂದ ಕೊಠಡಿಗಳೆಲ್ಲಾ ತುಂಬಿತ್ತು. 1000–1200 ಮಕ್ಕಳಿದ್ದ ನಮ್ಮ ಸಾಗರ ಪ್ರೌಢಶಾಲೆಗೆ ಪವಾರ್‌ರವರು ಬಂದು ಒಂದೆರಡು ತಿಂಗಳಲ್ಲಿ ಕಿಲಾಡಿತನಕ್ಕೆ ಅವಕಾಶವಿಲ್ಲದೆ ಗಲಾಟೆ ಇಲ್ಲದೆ ಶಿಸ್ತುಬದ್ಧ ರೂಪಕ್ಕೆ ಬರತೊಡಗಿತು. ಎಪ್ರಿಲ್ ತಿಂಗಳು ಪರೀಕ್ಷೆ ಮುಗಿಸಿ ಫಲಿತಾಂಶ. ಪವಾರ್ ಬರುವ ಮುಂಚೆ ತಂದೆ ತಾಯರಿಂದ ಲಂಚ ಪಡೆದು ಅಧ್ಯಾಪಕರುಗಳು ಮಕ್ಕಳನ್ನು ಎಂಟನೇ ತರಗತಿಯಿಂದ 9ನೇ ತರಗತಿಗೆ ಮಾರ್ಕ್ಸ್ ಇಲ್ಲದಿದ್ದರೂ ಪಾಸ್ ಮಾಡುತಿದ್ದರು. ಹಾಗಾಗಿ ಫೈಲ್ ಆಗುವವರು ಬಹಳ ವಿರಳ. ಈ ಬಾರಿ ಪವಾರ್‌ರವರೇ ತಾನಾಗಿ ಪರೀಕ್ಷೆ ಫಲಿತಾಂಶ ಪ್ರಕಟಿಸುವುದಾಗಿ ಹೇಳಿದರು. ಎಲ್ಲಾ ತರಗತಿಯ ವಿದ್ಯಾರ್ಥಿಗಳ ಪರೀಕ್ಷಾ ಅಂಕಪಟ್ಟಿ ಪಡೆದು ಪಾಸಾಗಲು ಅನರ್ಹರಾಗಿರುವ ವಿದ್ಯಾರ್ಥಿಗಳನ್ನೆಲ್ಲಾ "ಫೈಲ್" ಎಂದು ಘೋಷಿಸಿದರು. ಹಾಗಾಗಿ 8ನೇ ತರಗತಿಯಲ್ಲಿ 8 ಡಿವಿಜನ್ ಇದ್ದರೂ ತೇರ್ಗಡೆಯಾದವರು ಕೇವಲು 3 ಡಿವಿಜನ್‌ಗೆ ಬೇಕಾದಷ್ಟು ಮಕ್ಕಳು, 9ನೇ ತರಗತಿಯಿಂದ 10ನೇ ತರಗತಿಗೆ 5–6 ಡಿವಿಜನ್ ಇದ್ದರೂ 10ನೇ ತರಗತಿಗೆ ತೇರ್ಗಡೆಯಾದವರು 2 ಡಿವಿಜನ್‌ಗೆ ಬೇಕಾದಷ್ಟೇ ವಿದ್ಯಾರ್ಥಿಗಳು. ಫಲಿತಾಂಶ ಹಾಕುವ ಮೊದಲೇ ಮುಂಜಾಗ್ರತೆಗಾಗಿ ಶಾಲಾ ಸುತ್ತ ಪೋಲೀಸ್ ವ್ಯವಸ್ಥೆ ಮಾಡಿದ್ದರು. ಶಾಲೆಗೆ ಕಲ್ಲು ಬಿಸಾಡುವ ಗಲಾಟೆ ಮಾಡುವ ಮುನ್ಸೂಚನೆ ಅವರಿಗಿತ್ತು. ನಾನು ಈ ಸಂಸ್ಥೆಗೆ ಸೇರಿ 5–6 ತಿಂಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲಾ ತರಗತಿಯಲ್ಲಿ ಎಲ್ಲಾ ಪಿರೇಡಿಗೆ ಹಾಜರಿದ್ದು ಆಸಕ್ತಿಯಿಂದ ಪಾಠ ಕೇಳಲು ಪ್ರಾರಂಭಿಸಿದರು. 2ನೇ ವರ್ಷದಿಂದ ಪವಾರ್‌ರವರ ಆಡಳಿತ ವ್ಯವಸ್ಥೆಯಿಂದ ನನ್ನ ಮನಸ್ಸಿಗೆ ತುಂಬಾ ಸಂತೋಷವಾಯ್ತು. ನನ್ನ ಚಿತ್ರಕಲೆಯ ವಿಷಯವನ್ನು ಉಳಿದ ಎಲ್ಲಾ ವಿಷಯಕ್ಕಿಂತಲೂ ಹೆಚ್ಚು ಆಸಕ್ತಿ ವಹಿಸಿ ಅಭ್ಯಾಸ ಮಾಡುತ್ತಿದ್ದರು. ಮಕ್ಕಳು ತುಂಬಿದ ಕೊಠಡಿಯಲ್ಲಿ ಚಿತ್ರಕಲಾ ಪುಸ್ತಕ ಬಿಡಿಸಲು ಸ್ಥಳಾವಕಾಶ ಇಲ್ಲದಿದ್ದಾಗ ಮುಗ್ಧರಾದ ಆ ವಿದ್ಯಾರ್ಥಿಗಳು ನೆಲದ ಮೇಲೆ ಚಿತ್ರ ಬಿಡಿಸುತ್ತಿದ್ದರು. ನನಗೆ ಆಶ್ಚರ್ಯವಾಗುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ವಿದ್ಯಾರ್ಥಿಗಳು ಇಷ್ಟು ಮುಗ್ಧರಲ್ಲ ಎಂಬುದು ನನಗೆ ಆವಾಗ ತಿಳಿಯಿತು.

**ಚಿತ್ರಕಲಾ ಆಸಕ್ತರಿಗೆ ತರಬೇತಿ:** 2ನೇ ವರ್ಷದಲ್ಲಿ ಎಂದರೆ 1981–82ರಲ್ಲಿ ನನಗೆ ಕೆಲವು ಕಲಾವಿದರ ಬೋರ್ಡ್ ಬರೆಯುವವರ ಪರಿಚಯವಾಯ್ತು. ಒಬ್ಬರು ನನ್ನ ಆತ್ಮೀಯರಾಗಿದ್ದ **ಗಾಯಕ್‌ವಾಡ್** ಎನ್ನುವವರು. ಉತ್ತಮವಾದ ಬ್ಯಾನರ್‌ಗಳನ್ನು ಬರೆಯುತ್ತಿದ್ದರು. ಇವರ ಬ್ಯಾನರ್‌ಗಳಲ್ಲಿ ಬಳಸುವ ಅಕ್ಷರವಿನ್ಯಾಸ ನನ್ನನ್ನು ತುಂಬಾ ಆಕರ್ಷಿಸುತ್ತಿತ್ತು. ಹಾಗಾಗಿ ಅವರ ವಿಳಾಸ ತಿಳಿದುಕೊಂಡು ಅವರನ್ನು ಪರಿಚಯ ಮಾಡಿಕೊಂಡೆ. ಹಾಗೆ ಇನ್ನೊಬ್ಬರು **ಮಚಾದೋ**ರವರು. ಇವರು **ಮಚಾದೋ ಆರ್ಟ್ಸ್** ಎಂಬ ಒಂದು ಚಿತ್ರಕಲಾ ಸಂಸ್ಥೆ ನಡೆಸುತ್ತಿದ್ದರು. ಇವರಲ್ಲೂ ಹೋಗಿ ನನ್ನ ಪರಿಚಯ ಮಾಡಿಕೊಂಡೆ. ನಾವು ಮೂವರು ಸೇರಿ ಸಾಗರ ಕಲಾಸಕ್ತರಿಗೆ ಚಿತ್ರಕಲೆ ಕಲಿಸುವ ಒಂದು ತರಗತಿ ಪ್ರಾರಂಭಿಸುವ ಬಗ್ಗೆ ಮಾತನಾಡಿಕೊಂಡು ನಮ್ಮ ಸಂಸ್ಥೆಯಲ್ಲಿ ಪ್ರತಿ ಶನಿವಾರ 2ರಿಂದ 5ರ ತನಕ 3 ಗಂಟೆ ಚಿತ್ರಕಲೆ ಕಲಿಸುವುದಾಗಿ ನಿರ್ಧರಿಸಿ ಅಲ್ಲಿಯ ಸ್ಥಳೀಯ ಪತ್ರಿಕೆಯಲ್ಲಿ ಜಾಹೀರಾತು ಕೊಟ್ಟೆವು. ಪತ್ರಿಕೆಯಲ್ಲಿ ಜಾಹೀರಾತು ನೋಡಿದ ಹಲವಾರು ಆಸಕ್ತ ವಿದ್ಯಾರ್ಥಿಗಳು (ಪದವೀದರರು, ನಿರುದ್ಯೋಗಿಗಳು) ನಮ್ಮ ತರಬೇತಿಗೆ ಸೇರಿಕೊಂಡರು. 300–400

ವಿದ್ಯಾರ್ಥಿಗಳು ಬಂದಾಗ ಅನಿವಾರ್ಯವಾಗಿ 100 ವಿದ್ಯಾರ್ಥಿಗಳಿಗೆ ಮಾತ್ರ ಅವಕಾಶ ಎಂದು ನಿರ್ಧರಿಸಿ ಉಳಿದವರನ್ನು ಬಿಟ್ಟೆವು.

**ಚಿತ್ರಕಲಾ ಗ್ರೇಡ್ ಪರೀಕ್ಷಾ ಕೇಂದ್ರ:** ಸಾಗರದಲ್ಲಿ ಚಿತ್ರಕಲಾ ಪರೀಕ್ಷಾ ಕೇಂದ್ರ ಇರಲಿಲ್ಲ. ಪರೀಕ್ಷೆಗೆ ಆನವಟ್ಟಿಗೆ ಹೋಗಬೇಕಾಗಿತ್ತು. ಹಾಗಾಗಿ ಸಾಗರದ ಪದವಿ ಪೂ. ಕಾಲೇಜಿನಲ್ಲಿ ಪರೀಕ್ಷೆಗಾಗಿ ಒಂದು ಕೇಂದ್ರ ಮಾಡುವ ಬಗ್ಗೆ **ಎಚ್.ಎಂ. ತಿಮಪ್ಪ**ರವರು **ಶ್ರೀಯುತ ವೆಂಕಣ್ಣ**ರವರು ನನಗೆ ತುಂಬಾ ಸಹಾಯ ಮಾಡಿದರು. ಬೆಂಗಳೂರಿನಿಂದ ಪ್ರೌಢ ಪರೀಕ್ಷಾ ಮಂಡಳಿಯಿಂದ ಒಪ್ಪಿಗೆಪತ್ರ ಸಿಕ್ಕಿದ ನಂತರ 1982ರಲ್ಲಿ ಸಾಗರದಲ್ಲಿ ಚಿತ್ರಕಲಾ ಗ್ರೇಡ್ ಪರೀಕ್ಷಾ ಕೇಂದ್ರ ಪ್ರಾರಂಭವಾಯ್ತು. ನನ್ನಲ್ಲಿ ತರಬೇತಿ ಪಡೆದ 100 ವಿದ್ಯಾರ್ಥಿಗಳು ಇದ್ದರು. 100 ವಿದ್ಯಾರ್ಥಿಗಳು ತೇರ್ಗಡೆಯಾಗಿ 100 ಫಲಿತಾಂಶ ಬಂದುದು ನಮ್ಮೆಲ್ಲರಿಗೆ ಸಂತೋಷಕೊಟ್ಟಿತ್ತು. ನೆನಪಿಗಾಗಿ ಗ್ರೂಪ್ ಫೋಟೋ ತೆಗೆಸಿದ್ದೆವು.

**ಸಾಗರ ರಾಘವೇಂದ್ರ ಮಠ:** ನಾನು ದಿನಾ 5 ಗಂಟೆಗೆ ಎದ್ದು ಸ್ನಾನ, ಪೂಜೆ ಮುಗಿಸಿ 6 ಗಂಟೆಯ ಒಳಗೆ ಸಾಗರದ ರಾಘವೇಂದ್ರ ಮಠಕ್ಕೆ ನಡಕೊಂಡು ಹೋಗುತ್ತಿದ್ದೆ. ಆ ತಂಪಾದ ವಾತಾವರಣ, ಬೆಳಗಾದ ಮುಸುಕು ಬೆಳಕಿನಲ್ಲಿ ಅಲ್ಲಿಯ ಮುತ್ತೈದೆಯರು ಮನೆಯ ಮುಂದೆ ಸೆಗಣಿ ಸಾರಿಸಿ, ರಂಗೋಲಿ ಹಾಕುವ ಸಂಸ್ಕೃತಿ ನನ್ನನ್ನ ಬೆರಗುಗೊಳಿಸುತ್ತಿತ್ತು. ಸಾಗರಕ್ಕೆ ಬಂದುದು ಸಾರ್ಥಕ ಎಂದು ಮನಸ್ಸಿನಲ್ಲೇ ಎಣಿಸಿಕೊಳ್ಳುತ್ತಿದ್ದೆ. ನಮ್ಮ ಸಂಸ್ಕೃತಿ ಎಷ್ಟೊಂದು ಸುಂದರ. ಆದರೆ ಈಗ ನಾಗರೀಕತೆ-ಯ ಭರಾಟೆಯಿಂದ ನಾವೆಲ್ಲಾ ಅಸಂಸ್ಕೃತರಾಗುತ್ತಿದ್ದೇವಲ್ಲಾ ಎಂದು ದುಃಖ ಆಗುತ್ತಿದೆ. 1–2 ಕಿ.ಮೀ. ದೂರದ ರಾಘವೇಂದ್ರ ಮಠಕ್ಕೆ ಹೋಗುವಾಗ ದಾರಿಯುದ್ಧಕ್ಕೂ ಮನೆ ಮುಂದುಗಡೆಯ ರಂಗೋಲೆಯನ್ನು ನೋಡುತ್ತಾ ಹೋಗುವಾಗ ಅದೆಷ್ಟೋ ಆನಂದ ಆಗುತ್ತಿತ್ತು. ರಾಘವೇಂದ್ರ ಮಠದಲ್ಲಿ 3 ಸುತ್ತು ಬಂದು ಪ್ರಾತಃಕಾಲದ ಪೂಜೆ ನೋಡಿ ದಿನಾ ಬರುತ್ತಿದ್ದೆ. ಆವಾಗ ಅಲ್ಲಿಯ ಮೇನೆಜರ್ **"ಹೊಳ್ಳ"**ರ ಪರಿಚಯವಾಯ್ತು. ಅವರು ನನ್ನನ್ನು ವಿಚಾರಿಸಿದಾಗ ನಾನು ಚಿತ್ರ ಬಿಡಿಸುವ ವಿಚಾರ ತಿಳಿದು ಅವರು ರಾಘವೇಂದ್ರರ ಕೆಲವು ಭಂಗಿಯ ಚಿತ್ರ ನನ್ನಲ್ಲಿ ಬಿಡಿಸಲು ಹೇಳಿದರು. ನಾನು ಬಿಡಿಸಿ ಕೊಟ್ಟದ್ದನ್ನು ನೋಡಿ ಅವರಿಗೆ ಬಹಳ ಖುಷಿಯಾಗಿ ಆಗಾಗ ಕೆಲವು ಚಿತ್ರ ಬಿಡಿಸಲು ಹೇಳುತ್ತಿದ್ದರು. ಒಂದೇ ಬಾರಿ ಮಠದಲ್ಲೇ ಕುಳಿತು 10 ರಾಘವೇಂದ್ರರ ಚಿತ್ರ ಪೈಂಟಿಂಗ್ ಮಾಡಿಕೊಟ್ಟಿದ್ದೆ. ಮಧ್ಯದಲ್ಲಿದ್ದ ಗಣಪತಿ ದೇವರ ದರ್ಶನ ಮಾಡುತ್ತಿದ್ದೆ. ಇಲ್ಲಿಯ ಗಣಪತಿ ಗುಡಿಯ ಮಹತ್ವ ಏನೆಂದರೆ **ಗಣಪತಿಯ ಗರ್ಭಗುಡಿಗೆ ತಾಗಿ ಮುಸ್ಲಿಂ ಪ್ರಾರ್ಥನಾ ಮಸೀದಿ** ಇದೆ. ಇದು ನಾವೆಲ್ಲಾ ಒಂದೇ ಎನ್ನುವ ಭಾವವನ್ನು ಮೂಡಿಸುತ್ತದೆ. ಈ ಗಣಪತಿ ದೇವಸ್ಥಾನಕ್ಕೂ ದೊಡ್ಡದಾದ ಒಂದು **"ಗೀತೋಪದೇಶ"**ದ ತೈಲಚಿತ್ರ ಬಿಡಿಸಿಕೊಟ್ಟಿದ್ದೆ. ಅಲ್ಲಿ ನಮ್ಮ ಸಹೋದ್ಯೋಗಿ ಬಂಧುಗಳಿಗೆ ಕೊಲ್ಲೂರು ಮೂಕಾಂಬಿಕೆಯ



ಚಿತ್ರ ಬಿಡಿಸಿಕೊಟ್ಟಿದ್ದೆ. ಸಾಗರದಲ್ಲಿ ಮೂರು ವರ್ಷಕ್ಕೊಮ್ಮೆ ಮಾರಿಕಾಂಬಾ ಜಾತ್ರೆ ಇರುತ್ತದೆ. ಅಲ್ಲಿಯ ವ್ಯಾಪಾರಸ್ಥರೊಬ್ಬರಿಗೆ ನನ್ನ ಪರಿಚಯವಾಗಿ ನಾನು ಅವರಿಗೆ ಸಾಗರದ **"ಮಾರಿಕಾಂಬಾ"** ಚಿತ್ರ ಬಿಡಿಸಿಕೊಟ್ಟಿದ್ದೆ. ಅದನ್ನು ಅವರು 25 ಸಾವಿರ ಪ್ರತಿಗಳನ್ನು ಮಾಡಿ ಮಾರಿದ್ದರು.

ಅತೀ ಕಡಿಮೆ ಖರ್ಚಿನಲ್ಲಿ ಜೀವನ ಸಾಗುತ್ತಿತ್ತು. 2–3ರೂ.ಗೆ ಕಿಲೋ ತರಕಾರಿ ಸಿಗುತ್ತಿತ್ತು. ಅದು ಅಲ್ಲದೆ ಅತೀ ಕಡಿಮೆ ಬೆಲೆಗೆ ಕಟ್ಟಿಗೆ ಸಿಗುತ್ತಿತ್ತು. ರೂ. 150/– ಮನೆ ಬಾಡಿಗೆ. ಗಂಧದ ಕೆತ್ತನೆ ಕೆಲಸ ಕಲಿಯಬೇಕೆಂದು ಸಾಗರಕ್ಕೆ ವರ್ಗಾವಣೆ ಕೇಳಿದ್ದರೂ ಗಂಧದ ತುಂಡು ಸಿಗದೆ ಕೆಲವರಿಂದ ಅಲ್ಪ ಸ್ವಲ್ಪ ಕಲಿತುಕೊಂಡೆ. ಅಪರೂಪದಲ್ಲಿ ಹೆಂಡತಿ ಮಕ್ಕಳೊಂದಿಗೆ ಸಿನೇಮಾಕ್ಕೆ ಹೋಗಿ $2^1/_2$ ಗಂಟೆ ಯಾವಾಗ ಮುಗಿಯುತ್ತಪ್ಪಾ ಎನ್ನುವಷ್ಟು ತಿಗಣೆ ಕಚ್ಚಿಸಿಕೊಂಡ ಘಟನೆ ಮರೆಯಲು ಸಾಧ್ಯವಿಲ್ಲ. ತಿಗಣೆ ಕಾಟದಿಂದ ಸಿನೇಮಾ ನೋಡಲು ಆಗುತ್ತಿರಲಿಲ್ಲ. ನನ್ನ ಚಿತ್ರಕಲಾ ಅಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳ ಜೊತೆಗೆ ಒಮ್ಮೆ **ಕಲಸಿಗೆ** ಹೋಗಿ ಅಲ್ಲಿ ಕೆಲವು ಲ್ಯಾಂಡ್ ಸ್ಕೇಪ್ ಚಿತ್ರ ಮಾಡಿ 70–80 ವಿದ್ಯಾರ್ಥಿಗಳು ಆನಂದ ಪಟ್ಟ ಅನುಭವ ಮರೆಯಲು ಸಾಧ್ಯವಿಲ್ಲ. ಅಲ್ಲಿ **'ಸುಜಾತ'** ಎಂಬ ವಿದ್ಯಾರ್ಥಿನಿಯ ಸಂಬಂಧಿಕರಲ್ಲಿ ತಿಂಡಿ ತಿನಸು ಊಟ ಇತ್ಯಾದಿ.

**ಘಟನೆ:** ನನ್ನ ಪತ್ನಿಗೆ ರಾತ್ರಿ ಗರ್ಭಪಾತವಾಗಿ ರಾತ್ರಿ 1 ಗಂಟೆಗೆ ಜೋರಾಗಿ ಗಾಳಿ ಮಳೆ ಬರುತ್ತಿದ್ದ ವೇಳೆ ರಕ್ತಸ್ರಾವ ಹೆಚ್ಚಾದ ಕಾರಣ 1 ಫರ್ಲಾಂಗು ದೂರದ ತನಕ (ಸೌಮ್ಯ ಮತ್ತು 2ವರ್ಷದ ಮಗು ಗುರುಪ್ರಸಾದ್ ಇವರನ್ನು ಮನೆಯಲ್ಲಿ ಬಿಟ್ಟು) ಡಾಕ್ಟರ್ ಐತಾಳ್‌ರವರ ಮನೆಗೆ ಹೋಗಿ ಅಲ್ಲಿ ಗ್ಲೂಕೋಸ್ ಕೊಟ್ಟ ಘಟನೆ ಎಂದಿಗೂ ಮರೆಯಲಾಗದ್ದು. ಅಲ್ಲಿಯ ಎನ್.ಎನ್. ಮಧ್ಯಸ್ಥ ಸಾಹಿತಿ ಇವರ ಪರಿಚಯವಾಯ್ತು. ಅವರು ಬರೆದ **'ತಿರುಗಾ ಮುರುಗಾ'** ನಾಟಕವನ್ನು ನಾನು ಪಲಿಮಾರಿನಲ್ಲಿ ಇರುವಾಗ ನಮ್ಮ ವಿದ್ಯಾರ್ಥಿಗಳಿಂದ ಮುಖವಾಡ ಹಾಕಿಸಿ ನಾಟಕ ಮಾಡಿಸಿದ್ದೆ. ಉಡುಪಿಯಿಂದ ಸಾಗರಕ್ಕೆ ಬಸ್ಸಿನಲ್ಲಿ ಓಡಾಡುವಾಗ ರಾಜ್ಯದ **ಶ್ರೇಷ್ಠ ಗಾಯಕಿ ಅರ್ಚನಾ ಉಡುಪರ** ತಂದೆ ಶ್ರೀನಿವಾಸ ಉಡುಪರು ಸಿಗುತ್ತಿದ್ದರು. ಹಿರಿಯ ಸಾಹಿತಿಗಳಾದ **ಶ್ರೀಯುತ ನಾ'ಡಿಸೋಜ** ಇವರು ಆಕಸ್ಮಿಕವಾಗಿ ಭೇಟಿಯಾದರು. ಅವರ ಒಂದು ಅಡಿಕೆ ಕತ್ತಿರಿ ಲೇಖನಕ್ಕೆ ಚಿತ್ರ ಬಿಡಿಸಿಕೊಡುವ ಸೌಭಾಗ್ಯ ನನಗೆ ಸಿಕ್ಕಿದೆ.



**ಕಂ ಸ್ಪಿರಿಟ್ ಭವಿಷ್ಯ :** ಸಾಗರದಲ್ಲಿ ಇರುವಾಗ **ಕಂ ಸ್ಪಿರಿಟ್** ಎಂಬ ಒಂದು ವಿದ್ಯೆ ಯಾರಿಂದಲೋ ತಿಳಿಯಿತು. ಇದರ ಕ್ರಮ ಹೇಗೆ ಎಂದರೆ ನೆಲದಲ್ಲಿ ಒಂದು ವೃತ್ತ ಎಳೆದು **ಎ** ಯಿಂದ **ಝಡ್**‌ನ ತನಕ ಬರೆಯಬೇಕು ಇನ್ನೊಂದು ವೃತ್ತ ಎಳೆದು 0 ಯಿಂದ 9ರ ತನಕ ಬರೆಯಬೇಕು. ಮಧ್ಯದಲ್ಲಿ ಲೋಟವೊಂದನ್ನು ಕವಚಿ ಹಾಕಿ 3–4ಜನ ಒಂದೊಂದು ಬೆರಳನ್ನು ಲೋಟೆಗೆ ತಾಗುವಂತೆ ಹಿಡಿದುಕೊಂಡು ಏಕಾಗ್ರತೆಯಿಂದ



ನಂಬಿಕೆಯಿಂದ **"ಕಂ ಸ್ಪಿರಿಟ್"** ಎಂದು ಹೇಳುತ್ತಾ ಇರಬೇಕು. ಆವಾಗ ಲೋಟೆ ಅಲ್ಲಾಡಲು ಪ್ರಾರಂಭಿಸುತ್ತದೆ. ನೀನು ಈ ಲೋಟೆಯಲ್ಲಿ ಇದ್ದಿಯಾದರೆ ಯಸ್ ಅಕ್ಷರ "YES" ಹೋಗು ಎಂದು ಮುಖ್ಯವ್ಯಕ್ತಿ ಆ ಲೋಟೆಗೆ ಕೇಳುವಂತೆ ಹೇಳಬೇಕು. **"ಆವಾಗ ಲೋಟೆ" "YES"**ಗೆ ಹೋಗುತ್ತದೆ. ನಿನ್ನ ಸ್ಥಾನಕ್ಕೆ ಬಾ ಎಂದಾಗ ಅದು ಮಧ್ಯಕ್ಕೆ ಬರುತ್ತದೆ. ಹಾಗೆ ನಮಗೆ ಬೇಕಾದ ಪ್ರಶ್ನೆಗಳನ್ನೆಲ್ಲಾ ಕೇಳಬಹುದು ಅದು YES ಅಥವಾ NO ಎನ್ನುತ್ತದೆ. ಕೆಲವೊಮ್ಮೆ ಹೆಸರು ಕೇಳಿದರೆ ಅಕ್ಷರ ಅಕ್ಷರಕ್ಕೆ ಹೋಗಿ ಹೆಸರು ಹೇಳುತ್ತದೆ. ಅಂಕೆಯ ಮೂಲಕ ನಿಮಗೆ ಉತ್ತರ ಬೇಕಾದರೆ ಅಂಕೆಯಲ್ಲಿ ತಿಳಿಸುತ್ತದೆ. (ಮದುವೆಯಾಗುವ ಹುಡುಗನ ಹೆಸರು ಕೇಳಿದರೆ ಅಕ್ಷರದಲ್ಲಿ ಹೇಳುತ್ತದೆ. ದಿನಾಂಕ ಕೇಳಿದರೆ ಅಂಕೆಯ ಮೂಲಕ ಹೇಳುತ್ತದೆ. ರಾತ್ರಿ ವೇಳೆಯಲ್ಲಿ ಮಾಡಿದರೆ ಉತ್ತಮ)

ಇದನ್ನು ನಾನು ಸಾಗರದಲ್ಲಿ ನಮ್ಮ ಮನೆಯಲ್ಲಿ ಮಾಡುತ್ತಿದ್ದಾಗ ನನ್ನ ಆತ್ಮೀಯ ಅಧ್ಯಾಪಕರೊಬ್ಬರು ಬಂದು ಇದರ ಬಗ್ಗೆ ಕೇಳಿದರು. ವಿಷಯ ತಿಳಿದ ಬಳಿಕ ಅವರಿಂದ ಹಲವಾರು ಜನರು ನನ್ನಲ್ಲಿ ಪ್ರಶ್ನೆ ಕೇಳಲು ಬರುತ್ತಿದ್ದರು. ನಮ್ಮ ಪ್ರಾಂಶುಪಾಲರಾಗಿದ್ದ **"ಪವಾರ್"**ರವರೂ ಹಲವಾರು ಸಾರಿ ಬಂದಿದ್ದರು.

ನನ್ನ ಮಗಳು 6 ವರ್ಷ ಇದ್ದಾಗ ನಾನು ಕೇಳಿದ ಪ್ರಶ್ನೆ ನನ್ನ ಮಗಳು ಸೌಮ್ಯ ಎಷ್ಟು ಕಲಿಯುತ್ತಾಳೆ? ಅದು ಕೊಟ್ಟ ಉತ್ತರ **ಎಸ್.ಎಸ್.ಎಲ್**.ಸಿ. (ಸೌಮ್ಯ ಎಸ್.ಎಸ್. ಎಲ್.ಸಿ. ಮಾತ್ರ ಕಲಿತಳು ಮತ್ತು ಡಿಪ್ಲೋಮಾ ಮಾಡಿದಳು). ಅದು ಸತ್ಯವಾಗಿದೆ. ಸೌಮ್ಯಳಿಗೆ ಎಷ್ಟನೇ ವರ್ಷಕ್ಕೆ ಮದುವೆ ಆಗುತ್ತದೆ ? ಅದು ಕೊಟ್ಟ ಉತ್ತರ **20**. ಸೌಮ್ಯಳಿಗೆ 20ನೇ ವರ್ಷಕ್ಕೆ ಮದುವೆ ಆಗಿದೆ. ನನಗೆ ವರ್ಗಾವಣೆ ಯಾವಾಗ ? **ಅಕ್ಟೋಬರ್ 31**. ನನ್ನ ವರ್ಗಾವಣಾ ಆದೇಶ ಆದುದು **ಅಕ್ಟೋಬರ್ 31**. ನನ್ನ 3 ಪ್ರಶ್ನೆಗೂ ಸರಿ ಉತ್ತರ ಸಿಕ್ಕಿರುತ್ತದೆ. ಉಳಿದವರ ಭವಿಷ್ಯದ ಬಗ್ಗೆ ಪ್ರಶ್ನೆಯ ಬಗ್ಗೆ ನನಗೆ ಗೊತ್ತಿಲ್ಲ. ನನಗೆ ಕಂ ಸ್ಪಿರಿಟ್ ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ಕೊಟ್ಟಿದೆ. 31–10–82ರಂದು ನನಗೆ ಮಂಗಳೂರಿನ ಬಲ್ಮಠಕ್ಕೆ ವರ್ಗಾವಣಾ ಆದೇಶ ಬಂದಿದ್ದರೂ ಪವಾರ್‌ರವರು ನನ್ನನ್ನು ರಿಲೀವ್ ಮಾಡಲಿಲ್ಲ. ಕಾರಣ ನನ್ನಲ್ಲಿ ಅವರಿಗೆ ಅಷ್ಟು ಪ್ರೀತಿ ಇತ್ತು. ಅವರು ಕಂ ಸ್ಪಿರಿಟಿನಲ್ಲಿ ಅವರ ತೊಂದರೆ ನಿವಾರಣೆಗೆ ನನ್ನಲ್ಲಿ ಪ್ರಶ್ನೆ ಕೇಳಲು 2–3 ಸಲ ಬಂದಾಗಲೂ ನನ್ನ ಮಕ್ಕಳು, ಪತ್ನಿ ಅಸೌಖ್ಯದಲ್ಲಿ ಇರುವುದನ್ನು ಕಂಡು ರಿಲೀವ್ ಮಾಡಲು ಒಪ್ಪಿಗೆ ಕೊಟ್ಟಿರುತ್ತಾರೆ. 3–1–83 ಮತ್ತು 4–1–83ರಂದು ನನಗೆ ಚುನಾವಣಾ ಕೆಲಸಕ್ಕೆ ಸಾಗರದ ಹಳ್ಳಿಯೊಂದರ ಶಾಲೆಯಲ್ಲಿ ಪೋಲಿಂಗ್ ಆಫೀಸರ್ ಆಗಿ ನೇಮಕವಾಗಿತ್ತು. ಹಾಗಾಗಿ ಚುನಾವಣೆಯ ಮರುದಿನ ರಿಲೀವ್ ಮಾಡುವುದಾಗಿ ಹೇಳಿದರು. ಹಳ್ಳಿಯ ಶಾಲೆ ವಿಪರೀತ ಚಳಿ. ಬೆಟ್ಟದ ಮರಗಿಡಗಳ ಮಧ್ಯದಲ್ಲಿ ಗುಡಿಸಲಿನಂತಿದ್ದ ಒಂದೇ ಕೊಠಡಿಯ ಶಾಲೆ. ಕುಳಿತುಕೊಳ್ಳಲು ಬೆಂಚುಗಳ ಬದಲು ಮಣೆ, ನೆಲದಲ್ಲಿ ಒಂದು ಮೇಜು, 3 ಕಾಲಿನ ಕುರ್ಚಿ, ಸೋರುತ್ತಿದ್ದ ಆ ಶಾಲೆಯಲ್ಲಿ ರಾತ್ರಿ ಕಳೆಯಬೇಕಾಗಿತ್ತು. ಅಂದಿನ ಆದಿನ ನೆನೆಸುವಾಗ ಇಂದೂ ಚಳಿ ಹುಟ್ಟಿಸುತ್ತದೆ. ನಾವು ನಾಲ್ಕು ಜನ ನಿದ್ರೆ ಇಲ್ಲದೆ ಒಂದು ಕೋಣೆಯಲ್ಲಿ ಕಳೆದೆವು. ಬೆಳಿಗ್ಗೆ 5 ಗಂಟೆಗೆ ಹವ್ಯಕ ಭಟ್ಟರೊಬ್ಬರು ಸ್ನಾನಕ್ಕೆ ತಮ್ಮ

ಮನೆಗೆ ಆಹ್ವಾನಿಸಿದ್ದರು. ಆದರೆ ನಾವು 4.30ಕ್ಕೆ ಹೋದೆವು. ಆ ಹಳ್ಳಿಯ ಮನೆಯವರ ಆಮಂತ್ರಣ ಸಂಸ್ಕಾರ ನೋಡಿ ನಾನು ಬೆರಗಾಗಿ ಹೋದೆ. ಸ್ನಾನಕ್ಕೆ ಬೇಕಾದಷ್ಟು ಬಿಸಿ ಬಿಸಿ ನೀರು. ಎಂತಹ ಚಳಿಯನ್ನು ಓಡಿಸಬಲ್ಲ ಆ ಬಿಸಿಬಿಸಿ ನೀರು ನನ್ನನ್ನು ಗುಡಾಣ ಕಾಲಿಯಾಗುವವರೆಗೂ ಸ್ನಾನ ಮಾಡುವಂತೆ ಪ್ರೇರೇಪಿಸುತ್ತಿತ್ತು. ಆದರೆ ಉಳಿದವರಿಗೆ ಬೇಕಲ್ಲಾ. ಸ್ನಾನ ಆದ ಕೂಡಲೇ 5 ಗಂಟೆಗೆ ಎಷ್ಟೊಂದು ರುಚಿಯಾದ ಇಡ್ಲಿ ಚಟ್ನಿ. ಇನ್ನೂ ಬಾಯಲ್ಲಿ ನೀರು ಬರುತ್ತದೆ. ಅಷ್ಟು ರುಚಿಯಾಗಿತ್ತು. ಇಡ್ಲಿ ಮತ್ತು ಚಟ್ನಿ ಹೊಟ್ಟೆ ತುಂಬಾ ತಿಂದು ಚುನಾವಣಾ ಕೆಲಸಕ್ಕೆ ಕುಳಿತರೆ ಯಾರೂ ಇಲ್ಲ. ಬಹಳ ಖುಷಿಯಾಯ್ತು. 9ರ ತನಕ ಒಂದೊಂದೇ ಜನ ಸೇರುತ್ತಾ ಬಳಿಕ ಸಾಲುಸಾಲು ಬರಲಾರಂಭವಾಯ್ತು. ಸಾಲು ದೊಡ್ಡದಾಗುತ್ತಾ ದೊಡ್ಡದಾಗುತ್ತಾ 1 ಕಿ.ಮೀ ದೂರದ ತನಕ ಮತ ಹಾಕುವವರ ಸಾಲು. ನಾನು ಸಾಲು ನೋಡಿಯೇ ಬೆರಗಾಗಿ ಹೋದೆ. 900 ಜನರಿರುವ ಮತದಾರರು ಇರುವ ಕ್ಷೇತ್ರದಲ್ಲಿ 83% ಮತ ಚಲಾವಣೆ ಆಗಿ ಊಟ ಮಾಡಲಿಕ್ಕೆ ಹೋಗಲಾಗದೆ ನಮ್ಮ ಊಟ ಬೂತಿನಲ್ಲೇ ಮಾಡಿ ಚುನಾವಣಾ ಕೆಲಸ ಮಾಡಿದ ಸಾಗರದ ಕೊನೆಯ ದಿನದ ನೆನಪು ಎಂದಿಗೂ ಮರೆಯಲಾರೆ.

5–1–83ರಂದು ನನಗೆ ಸಾಗರ ಪದವಿ ಪೂ. ಕಾಲೇಜಿನಿಂದ ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಗೆ ಚಿತ್ರಕಲಾ ಶಿಕ್ಷಕನಾಗಿ ವರ್ಗಾವಣೆಯ ಆದೇಶ ಕೊಟ್ಟರು.

**ಘಟನೆ:** ನಾನು ಸಾಗರದಿಂದ ಕಟೀಲಿಗೆ ಪತ್ನಿ, ಮಕ್ಕಳ ಸಮೇತ ಜಾತ್ರೆಗೆ ಬಂದಾಗ ತೇರ ಕೊಟ್ಟಿಗೆಯಲ್ಲಿ ಉಳಕೊಂಡಿದ್ದೆ. ಯಾಕೆಂದರೆ ಅನಂತ ತಂತ್ರಿಗಳು (ಮಾವ) ಅಸೌಖ್ಯದಲ್ಲಿದ್ದುರಿಂದ ಅಲ್ಲೇ ನಾವೂ ಇದ್ದೆವು. ಜಾತ್ರೆ ಸಮಯ ಮಗುವಿಗೆ (ಗುರು) ಸುಮಾರು 2 ವರ್ಷ ಪ್ರಾಯವಾಗಿತ್ತು. ತೇರ ಕೊಟ್ಟಿಗೆಯ ಬಚ್ಚಲು ಕೋಣೆಗೆ ಹೋಗಿ ಬಾಗಿಲು ಚಿಲಕ ಹಾಕಿ ಎಲ್ಲರೂ ಕಂಗಾಲಾಗಿ ಹೊಳೆಗೆ ಏಣಿ ಇಟ್ಟು ವ್ಯವಸ್ಥೆ ಮಾಡುವಾಗ ಮತ್ತೆ ಮಗುವೇ ಚಿಳಕ ತೆಗೆದ ಒಂದು ಘಟನೆ ಈಗಲೂ ನೆನಪಿದೆ.




Find out ...? OM & GANAPA

# ಮಂಗಳೂರು ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಚಿತ್ರಕಲಾ ಪ್ರಶಿಕ್ಷಕನಾಗಿ ನನ್ನ ಜೀವನ (6–1–1983ರಿಂದ 10–8–2000)



ಕಾವೂರಿನಲ್ಲಿ ಕೆ.ಎಚ್.ಬಿ. ಸಂಸ್ಥೆಯಿಂದ ನನಗೆ ಸರಕಾರದ ಕೆಹೆಚ್‌ಬಿ ಎಲ್.ಐ.ಜಿ. ಮನೆಯೊಂದು ಮಂಜೂರಾದ ಕಾರಣ ಕಾವೂರು ಪ್ರೌಢಶಾಲೆಗೆ ವರ್ಗಾವಣೆಗೆ ಕೇಳಿದ್ದೆನಾದರೂ ಅಲ್ಲಿಗೆ ನನ್ನನ್ನು ವರ್ಗಾಯಿಸದೆ ಬಲ್ಮಠದಲ್ಲಿದ್ದ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಗೆ ಚಿತ್ರಕಲಾ ಪ್ರಶಿಕ್ಷಕರಾಗಿ ವರ್ಗಾವಣೆಗೊಳಿಸಿದ್ದರು. 6–1–1983ರಂದು ಬಲ್ಮಠ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯ ಪ್ರಾಚಾರ್ಯರನ್ನು ಕಂಡು ಅವರಿಗೆ ಆದೇಶ ತೋರಿಸಿದೆ. ಜನವರಿಯಲ್ಲಿ ವರ್ಗಾವಣೆಗೊಂಡ ನನ್ನ ಆದೇಶ ನೋಡಿದ ಪ್ರಾಚಾರ್ಯರಿಗೆ ತುಂಬಾ ಆಶ್ಚರ್ಯವಾಯ್ತು. ಆದೇಶದ ಪ್ರಕಾರ ನನ್ನನ್ನು ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಗೆ ಚಿತ್ರಕಲಾ ಪ್ರಶಿಕ್ಷಕನನ್ನಾಗಿ ಕೆಲಸ ನಿರ್ವಹಿಸುವಂತೆ ತಿಳಿಸಿದವರು. ಆಗ ಅತ್ಯುತ್ತಮವಾಗಿ ಇಡೀ ಸಂಸ್ಥೆಯನ್ನು ಶಿಸ್ತುಬದ್ಧವಾಗಿ ನಡೆಸಿಕೊಂಡು ಹೋಗುತ್ತಿದ್ದುದು ಸರಳ ಸಜ್ಜನರಾದ ಶಿಸ್ತಿನ ಸಿಪಾಯಿಯಾಗಿದ್ದ **ಶ್ರೀಯುತ ಕಮಲಾಕರ ಹಾಲಂಬಿಯವರು**.

ಬಲ್ಮಠಕ್ಕೆ ವರ್ಗಾವಣಾ ಆದೇಶ ಬಂದ ನಂತ್ರ (ನನ್ನ ಹೆಂಡತಿಯ ಅಕ್ಕ ರತ್ನ – ಭುಜಂಗರಾವ್ ಇವರ ಮಗಳು ಶಾರದಳನ್ನು ಕಾವೂರಿನ ಶ್ರೀನಿವಾಸ ಭಟ್ರಿಗೆ ವಿವಾಹವಾಗಿತ್ತು). ಶ್ರೀನಿವಾಸ ಭಟ್ರ್ ಮನೆಗೆ ಹೋಗಿ ಮಂಗಳೂರಿಗೆ ಬಲ್ಮಠಕ್ಕೆ ವರ್ಗವಾದ ವಿಷಯ ತಿಳಿಸಿ ಒಂದು ವರ್ಷಕ್ಕಾಗಿ ಬಾಡಿಗೆ ಮನೆ ವಿಚಾರಿಸಿದೆ. ಅವರು 3 ತಿಂಗಳಲ್ಲಿ ದೇವಸ್ಥಾನ ಸುತ್ತುಪೌಳಿಯ ಗೋಪುರದಲ್ಲಿ ಇದ್ದ ಗೋಡೆಗೆ ತಾಗಿ 3 ಕೋಣೆಯ ಬಾಡಿಗೆ ಮನೆ ಕಟ್ಟಿಸಿಕೊಟ್ಟರು. ಜೊತೆಗೆ ದೇವಸ್ಥಾನದ ದೇವಕಾರಿ ಲಕ್ಷ್ಮೀ ನಾರಾಯಣರಿಗೂ ಒಂದು ಕೊಠಡಿಯ ಮನೆ ಕಟ್ಟಿಕೊಟ್ಟರು. ಅಡಿಗೆಕೋಣೆ, ಮಧ್ಯಕೋಣೆ, ಮಲಗುವ ಕೋಣೆ ಹೀಗೆ ಸಣ್ಣದಾದ ಜಾಗದಲ್ಲಿ ಕಾವೂರಿನ ದೇವರ ಸನ್ನಿಧಿಯಲ್ಲಿ ನನ್ನ ಜೀವನ ಪ್ರಾರಂಭವಾಯ್ತು. ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಗೆ ದಿನಾ ಬಸ್ಸಿನಲ್ಲಿ ಓಡಾಡುತ್ತಿದ್ದೆ. ಮಧ್ಯಾಹ್ನ ಊಟ ಬಲ್ಮಠದ ಶ್ರೀ ರಘುರಾಮ ಉಡುಪರ ಇಂದ್ರಭವನ ಹೋಟೇಲಿನಲ್ಲಿ ಮಾಡುತ್ತಿದ್ದೆ. ಸಾಗರದಿಂದ ನನ್ನ ಪತ್ನಿಯನ್ನು ಮತ್ತು ಮಕ್ಕಳನ್ನು ಸಾಗರದ ಸೈನ್ ಬೋರ್ಡ್ ಕಲಾವಿದ ಗಾಯಕ್‌ವಾಡರು ಕರೆದುಕೊಂಡು ಬಂದರು.

**<u>ಮರೆಯಲಾಗದ ಘಟನೆ :</u>** ನಾನು ಬಿಡಾರ ಮಾಡಿದ ಕೆಲವೇ ದಿನಗಳಲ್ಲಿ ಒಂದು ದಿನ ರಾತ್ರಿ ಊಟ ಮಾಡಿ ಮಲಗುವ ಮುನ್ನ (ನನ್ನ ಮಗಳು ಸೌಮ್ಯಗಳಿಗೆ 8 ವರ್ಷ, ಮಗು ಗುರುಪ್ರಸಾದನಿಗೆ 4 ವರ್ಷ) ಟೇಬಲ್ ಫ್ಯಾನ್ ಸ್ಟೂಲಿನ ಮೇಲಿಟ್ಟು ಮಲಗಿದೆ. ಆದರೆ ಗಾಳಿ ಸರಿ ಬರುವುದಿಲ್ಲ ಎಂದು ಸ್ವಲ್ಪ ಏರಿಸುವ ಉದ್ದೇಶದಿಂದ ದಪ್ಪದ 2–3 ಪುಸ್ತಕ ಅಡಿ ಭಾಗದಲ್ಲಿ ಇರಿಸಿದರೆ ಸರಿಯಾಗಬಹುದೆಂದು ಎಣಿಸಿ ನನ್ನ ಪತ್ನಿಯಲ್ಲಿ ಫ್ಯಾನ್ ಹಿಡಿದುಕೊಳ್ಳಲು ಹೇಳಿದೆ. ಅವಳು ಫ್ಯಾನ್ ಭಾರ ಇದೆ ಎಂದು ತನ್ನ ತೊಡೆಯ ಮೇಲೆ

ಇಟ್ಟ ಕೂಡಲೇ ಶಾಕ್ ಹೊಡೆದು ನೆಲಕ್ಕೆ ಬಿದ್ದಳು. ಕೂಡಲೇ **ಅಮ್ಮಾ** ಎಂದು ಸೌಮ್ಯಳೂ ಅವಳನ್ನು ಮುಟ್ಟಿದಳು. ಮಗಳಿಗೂ ಶಾಕ್ ಹೊಡೆಯಿತು. ಗುರು ಮಗು ಮಂಚದಲ್ಲಿ ಇದ್ದ. ನನಗೆ ಕೂಡಲೇ ದೇವರು ಪ್ಲಗ್ ಎಳೆದು ಬಿಡುವಂತೆ ಮನಸ್ಸು ಕೊಟ್ಟ. ಕೂಡಲೇ ಪ್ಲಗ್ ಎಳೆದು ಬಿಟ್ಟೆ. **ಮೂರ್ಛೆಯಾಗಿದ್ದ ನನ್ನ ಮಗಳು, ಪತ್ನಿ ಸಾವಿನ ದವಡೆಯಿಂದ ಹೊರಬಂದ ಘಟನೆಯನ್ನು ನೆನೆಸುವಾಗ ಇಂದಿಗೂ ಮೈ 'ಜುಂ' ಎನಿಸುತ್ತದೆ.**

## ಕೆ.ಹೆಚ್.ಬಿ / ಎಲ್ಐಜಿ – 17 "ಗುರುಪ್ರಸಾದ್"

### (ಮನೆಯಲ್ಲಿ 1984ರಿಂದ 2003ರ ತನಕ)

ಕರ್ನಾಟಕ ಹೌಸಿಂಗ್ ಬೋರ್ಡಿನವರ ಒಂದು ಪ್ರಕಟಣೆ ಅಂದಿನ ನವಭಾರತ ಪೇಪರಿನಲ್ಲಿ (1976ರಲ್ಲಿ) ಬಂದುದನ್ನು ಓದಿದೆ. ಸರಕಾರಿ ನೌಕರರಿಗೆ 'ಲೀಸ್ ಕಂ ಸೇಲ್' ರೀತಿಯಲ್ಲಿ ಸ್ವಂತ ಮನೆಯ ಅವಕಾಶಕ್ಕಾಗಿ ಅರ್ಜಿ ಕರೆಯಲಾಗಿತ್ತು. ನಾನೂ ಯಾಕೆ ಅರ್ಜಿ ಹಾಕಬಾರದೆಂದು ಎಣಿಸಿ ರೂ. 500/– ಠೇವಣಿ ಕಳುಹಿಸಿದೆ. ಎಲ್.ಐ.ಜಿ. ಮನೆಗಾಗಿ (ಲೋ ಇನ್‌ಕಂ ಗ್ರೂಪ್) ಅರ್ಜಿ ಹಾಕಿದೆ. 1982ರಲ್ಲಿ ಅಂದರೆ ನಾನು ಸಾಗರ ಪದವಿ ಪೂರ್ವ ಕಾಲೇಜಿನಲ್ಲಿ ಚಿತ್ರಕಲಾ ಅಧ್ಯಾಪಕನಾಗಿದ್ದಾಗ ಜಿ.ಆರ್. ಉಪಾಧ್ಯಾಯ ಹೆಸರಿನಲ್ಲಿ ಎಲ್.ಐ.ಜಿ. ಮನೆ ನಿವೇಶನ ಮಂಜೂರಾದ ಸಂದೇಶ ನನಗೆ ಬಂತು. ಬಹಳ ಕುಶಿಯಾಗಿ ಸಿಂಡಿಕೇಟ್ ಬ್ಯಾಂಕಿನಲ್ಲಿ (ನಂದಿಕೂರಿನ ಶ್ರೀ ರಾಘವೇಂದ್ರರಾವ್ ಎಂಬವರು ನನ್ನ ಫಲಿಮಾರು ಶಾಲಾ ಹಳೆ ವಿದ್ಯಾರ್ಥಿಯಾಗಿದ್ದುದರಿಂದ) ಹೆಂಡತಿಯಲ್ಲಿದ್ದ ಬಂಗಾರ ಅಡವಿನಲ್ಲಿ ಇಟ್ಟು ರೂ. 7,500/– ಸಾಲ ಪಡೆದು ಮೊದಲ ಕಂತು ಕೆ.ಎಚ್.ಬಿ.ಗೆ ಡಿ.ಡಿ. ಮೂಲಕ ಕಳುಹಿಸಿದೆ. ಮಂಗಳೂರಿಗೆ ಬಂದಾಗಲೆಲ್ಲಾ ಕಾವೂರು – ಬೋಂದೆಲ್ ಮಧ್ಯಭಾಗದಲ್ಲಿ ನಿರ್ಮಾಣ ಹಂತದಲ್ಲಿರುವ ಮನೆಗಳನ್ನು ನೋಡುತ್ತಿದ್ದೆ. 1984ರಲ್ಲಿ ನನ್ನ ಹೆಸರಿನಲ್ಲಿ ಎಲ್.ಐ.ಜಿ.ಮನೆ ನಂ–17 ಮಂಜೂರು ಆಗಿತ್ತು.

1982 ಅಕ್ಟೋಬರ್ 31ಕ್ಕೆ ನನಗೆ ಮಂಗಳೂರಿಗೆ ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಗೆ ವರ್ಗವಾಯ್ತು. 6–1–1983ಕ್ಕೆ ಸಂಸ್ಥೆಗೆ ಸೇರಿದೆ. ಆದರೆ ಕೆ.ಎಚ್.ಬಿ.ಯವರು ಮನೆಯನ್ನು ಬಿಟ್ಟುಕೊಡದ ಕಾರಣ ಒಂದು ವರ್ಷದ ಅವಧಿಗೆ ಶ್ರೀಯುತ ಶ್ರೀನಿವಾಸ ಭಟ್ಟರು (ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಅರ್ಚಕರು) 3 ಕೋಣೆಯ ಮನೆ ಕಟ್ಟಿಕೊಟ್ಟರು. ದೇವಸ್ಥಾನದ ಹೊರಾಂಗಣದಲ್ಲಿ ಒಂದು ವರ್ಷದ ಮಟ್ಟಿಗೆ ಅಲ್ಲಿ ವಾಸವಾಗಿದ್ದೆ.

27–3–1984ರಂದು ಕೆ.ಎಚ್.ಬಿ, ಎಲ್.ಐ.ಜಿ–17ರಲ್ಲಿ ವಾಸಮಾಡುವ ಉದ್ದೇಶದಿಂದ ಸಣ್ಣಮಟ್ಟದ ಗೃಹಪ್ರವೇಶ ಕಾರ್ಯಕ್ರಮ (ಸುಮಾರು 100ಜನ ಸೇರಿದ್ದರು) ಇರಿಸಿಕೊಂಡು ಅಲ್ಲಿ ವಾಸಿಸತೊಡಗಿದೆ. ನಾನು ನಂಬಿದ ಗುರುರಾಘವೇಂದ್ರರ ಅನುಗ್ರಹದ ಗೃಹವೆಂದು ತಿಳಿದು ಗುರುಪ್ರಸಾದ್ ಎಂದು ಮನೆಗೆ ಹೆಸರನ್ನು ಇರಿಸಿದೆ. ಆವಾಗ ಹೌಸಿಂಗ್ ಬೋರ್ಡಿನಲ್ಲಿ 7–8 ಮನೆಗಳಲ್ಲಿ ಮಾತ್ರ ಜನವಸತಿ ಇತ್ತು. ರಸ್ತೆ, ಚರಂಡಿ, ವಿದ್ಯುತ್‌ದೀಪ ಯಾವ ವ್ಯವಸ್ಥೆಯೂ ಇರಲಿಲ್ಲ. ಸೀಮೆಎಣ್ಣೆ ದೀಪದಿಂದಲೇ

ಎರಡು–ಮೂರು ವರ್ಷ ಕಳೆದೆವು. ಸೌಮ್ಯ ಮತ್ತು ಗುರುಪ್ರಸಾದರನ್ನು ಬೋಂದೆಲ್ ಸೈಂಟ್‌ಲಾರೆನ್ಸ್ ಪ್ರಾಥಮಿಕ ಶಾಲೆಗೆ ಸೇರಿಸಿದೆ. ನೀರಿನ ಟ್ಯಾಂಕ್ ಬಳಿ ಮನೆ ಇದ್ದ ಕಾರಣ ನೀರಿನ ತೊಂದರೆ ಇರಲಿಲ್ಲ. ಸ್ವಲ್ಪ ಸಮಯದಲ್ಲಿ ಮನೆಗೆ ಕಾಂಪೌಂಡ್ ಗೋಡೆ ಕಟ್ಟಿಸಿದೆ. ಒಳಗೆ ಸಣ್ಣ ಪ್ರಮಾಣದ ಗಾರ್ಡನ್ ಮಾಡಿದೆ. ಒಂದು ತೆಂಗಿನ ಸಸಿ ನೆಟ್ಟೆ. ಕುಲಶೇಖರದ ಕಕ್ಕೆಬೆಟ್ಟು ಎಂಬಲ್ಲಿ ಬಿ. ಹಯವದನ ಆಚಾರ್ಯರ ಒತ್ತಾಯಕ್ಕೆ ಅವರೇ 1978ರಲ್ಲಿ 6 ಸಾವಿರ ರೂಪಾಯಿ ಕೊಟ್ಟಿದ್ದರಿಂದ 15 ಸೆನ್ಸ್ ಜಾಗ ತೆಗೆದುಕೊಂಡಿದ್ದೆ. ಅದನ್ನು 1990ಕ್ಕೆ 60 ಸಾವಿರ ರೂ.ಗಳಿಗೆ ಮಾರಿ ಹಯವದನ ಆಚಾರ್ಯರಿಂದ ಪಡೆದ 6 ಸಾವಿರ ರೂ. ಹಿಂತಿರುಗಿಸಿಕೊಟ್ಟೆ. ಉಳಿದ 54 ಸಾವಿರದಲ್ಲಿ ನನ್ನ ಮನೆಗೆ **8 ಅಡಿ ಅಗಲ 15 ಅಡಿ** ಉದ್ದದ ಕೋಣೆ ಸೇರಿಸಿದೆ.

**ಹೌಸಿಂಗ್ ಬೋರ್ಡ್ ನಿವಾಸಿಗಳ ಕ್ಷೇಮಾಭ್ಯುದಯ ಸಂಘ**ಕ್ಕೆ ಸೇರಿ ಪ್ರತಿ ವರ್ಷದ ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವ, ಹೊಸವರ್ಷದ ಆಚರಣೆ ವಾರ್ಷಿಕೋತ್ಸವ ಹೀಗೆ ಹತ್ತು ಹಲವು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ನನ್ನಿಂದಾದಷ್ಟು ಸಹಾಯ ಮಾಡಿದೆ. ಸಾಂಸ್ಕೃತಿಕ ಕಾರ್ಯಕ್ರಮಕ್ಕಾಗಿ ರಚಿತವಾದ ನೂತನ ವೇದಿಕೆಗೆ ಅಂಕದ ಪರದೆ ಹಾಗೂ ಸೈಡ್‌ವಿಂಗ್ಸ್ ಚಿತ್ರ ಬಿಡಿಸಿಕೊಟ್ಟೆ. ಕಾವೂರು ಶ್ರೀ ಮಹಾಲಿಂಗೇಶ್ವರ ದೇವರ ವಾರ್ಷಿಕಮಹೋತ್ಸವ ಸಂದರ್ಭ ಕಟ್ಟೆಪೂಜೆಗಾಗಿ ದೇವರು ನಮ್ಮ ನೂತನ ಕಟ್ಟೆಗೆ ಬಂದಾಗ ನನ್ನಿಂದಾದಷ್ಟು ಅಲಂಕಾರದ ದೇವರಸೇವೆ ಮಾಡುತ್ತಾ ಬಂದಿದ್ದೇನೆ. ಈಗಲೂ ನನ್ನಿಂದಾದಷ್ಟು ಸಹಾಯ ಮಾಡುತ್ತಿದ್ದೇನೆ. ಯೂನಿಯನ್ ಬ್ಯಾಂಕ್ ಉದ್ಯೋಗಿ, ಪರೋಪಕಾರಕ್ಕಾಗಿಯೇ ತನ್ನ ಜೀವನವನ್ನು ಮುಡಿಪಾಗಿ ಇಟ್ಟಂತಹ **ಪಿಲಾರು ಶ್ರೀಕೃಷ್ಣಭಟ್ಟರ** ಪರಿಚಯವಾಗಿ ಅಂದಿನಿಂದ ಇಂದಿನವರೆಗೂ ಅಣ್ಣ ತಮ್ಮಂದಿರಂತೆ ಜೀವನ ಸಾಗಿಸುತ್ತಾ ಇದ್ದೇನೆ. ಅಂಗವಿಕಲರಾದ ಅವರನ್ನು ವಿವಾಹವಾಗಿ ಜೀವಕ್ಕೆ ಜೀವ ಕೊಟ್ಟು ಜೀವನ ಪರ್ಯಂತ ಪತಿಸೇವೆ ಮಾಡುವುದೇ ತನ್ನ ಧರ್ಮವೆಂದು ನಂಬಿದ ಅವರ **ಧರ್ಮಪತ್ನಿ ಪ್ರಭಾವತಿ**ಯವರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯಾದೀತು.

ಕೆ.ಹೆಚ್.ಬಿ. ಕಾಲೋನಿಯಲ್ಲಿ ಎಲ್.ಐ.ಜಿ. 17 ನಂಬ್ರದ ಮನೆ ನನ್ನದಾಗಿದ್ದರೆ ಯೂನಿಯನ್ ಬ್ಯಾಂಕ್ **ಶ್ರೀ ಪಿಲಾರು ಕೃಷ್ಣಭಟ್ಟರ ಮನೆ ಎಲ್.ಐ.ಜಿ. 36**. ಹತ್ತಿರ ಹತ್ತಿರವಿದ್ದ ನಮ್ಮೊಳಗೆ ಒಂದು ಆತ್ಮೀಯ ಬಾಂಧವ್ಯ ಬೆಳೆದು ಅತೀ ಹತ್ತಿರದ ಬಂಧುಗಳಂತೆ ಇದ್ದೆವು. ಅವರಿಗೆ ಪೋಲಿಯೋ ಆಗಿ ಎರಡೂ ಕಾಲುಗಳನ್ನು ಕಳಕೊಂಡಿದ್ದರೂ ಸರಿಯಾದ ಅಂಗಾಂಗ ಇರುವ ನಮಗಿಂತ ಸಹಾಯ ಸಹಕಾರ ಕೊಡುವುದರಲ್ಲಿ ಸಾವಿರಪಾಲು ಮೇಲ್ಪಂಕ್ತಿಯಲ್ಲಿದ್ದಾರೆ. ಯಾವ ಸಹಾಯಕ್ಕೂ ನಾನು ಅವರನ್ನೇ ಅವಲಂಬಿಸಿದ್ದೆ. ಕೃಷ್ಣ ಭಟ್ರು ನನಗೆ ಮಾತ್ರ ಸಹಾಯ ಮಾಡುವ ವ್ಯಕ್ತಿ ಅಲ್ಲ. ಊರಿನ ಯಾರಿಗೆ ಯಾವ ಸಹಾಯ ಬೇಕಾದರೂ ಎಷ್ಟು ಕಷ್ಟದ್ದಾದರೂ ಚೂರೂ ಬೇಸರವಿಲ್ಲದೆ ಸಹಾಯ ಮಾಡುತ್ತಿದ್ದರು. ಇಂತಹವರು ಲಕ್ಷಕ್ಕೊಬ್ಬರು ಸಿಗಲಿಕ್ಕಿಲ್ಲ. ಇವರಿಗೆ ರತ್ನದಂತಹ ಎರಡು ಗಂಡು ಮಕ್ಕಳು. ಮೊದಲಿನವ **ಹರಿಪ್ರಸಾದ್** ಎರಡನೆಯವ **ಸುಬ್ರಹ್ಮಣ್ಯ**. ಹರಿ ಕಲಿಯುವುದರಲ್ಲಿ ಎಳೆಯ ವಯಸ್ಸಿನಲ್ಲೇ ಬಂಗಾರದ

ಪದಕ ಪ್ರಶಸ್ತಿ ಪಡೆದ ವಿದ್ಯಾವಂತನಾಗಿದ್ದ. ಎಂ.ಬಿ.ಬಿ.ಎಸ್, ಎಂ.ಡಿ., ಎಲ್ಲ ಕಲಿತು ದೇಶದಲ್ಲೇ ಮೆರಿಟ್ ಪಡೆದು ಪಿ.ಎಚ್.ಡಿ. ಮಾಡಲು **ಯು.ಎಸ್.ಎ** ಹೋಗಿರುವುದು ನಮ್ಮೆಲ್ಲರಿಗೆ ಹೆಮ್ಮೆ ತರುವ ವಿಷಯ. ಇಷ್ಟು ಕಲಿತ ವಿದ್ಯಾವಂತನಾದ ಹರಿಯನ್ನು ಮಾತನಾಡಿಸಿದರೆ 5 ವರ್ಷದ ಮುಗ್ದ ಮಗುವಿನಂತೆ ಮಾತನಾಡುತ್ತಾನೆ. **ತುಂಬಿದ ಕೊಡ ತುಳುಕುವುದಿಲ್ಲ ಎಂಬುದನ್ನು ಡಾ। ಹರಿಪ್ರಸಾದ್‌ನನ್ನು ನೋಡಿ ಕಲಿಯಬೇಕು.** 2ನೇ ಮಗ ಸುಬ್ರಹ್ಮಣ್ಯ ಇನ್ನೊಂದು ರತ್ನ. ಸಣ್ಣ ಪ್ರಾಯದಿಂದ ನಾನು ಅವನನ್ನು ಸಹಾಯಕ್ಕಾಗಿ ಕರೆಯುತ್ತಿದ್ದೆ. ನನ್ನ ಪತ್ನಿ ಒಬ್ಬಳೇ ಇರುವ ರಾತ್ರಿಯಲ್ಲಿ ಸುಬ್ರಹ್ಮಣ್ಯ ಬಂದು ಮನೆಯಲ್ಲಿ (ಹೆದರಿಕೆಗಾಗಿ) ಇರುತ್ತಿದ್ದ. ನಾನು ಅಲ್ಲಲ್ಲಿ ಚಿತ್ರಕಲಾ ಪ್ರದರ್ಶನ ಮಾಡುವಾಗ ನನಗೆ ಎಲ್ಲಾ ರೀತಿಯ ಸಹಾಯ ಮಾಡುತ್ತಿದ್ದ. ಸುರತ್ಕಲ್ ಕುಳ್ಯಾ ವಿಷ್ಣುಮೂರ್ತಿ ದೇವಸ್ಥಾನದಲ್ಲಿ ಒಂದು ಕಾರ್ಯಕ್ರಮಕ್ಕೆ ನನ್ನ ಚಿತ್ರಕಲಾ ಪ್ರದರ್ಶನಕ್ಕೆ ವ್ಯವಸ್ಥೆ ಆಗಿತ್ತು. ಅದರ ಮುಂಚಿನ ದಿನ ನನ್ನ ಅಮ್ಮ ನಿಧನರಾದರು. ಕೂಡಲೇ ನನಗೆ ನೆನಪಾದುದು ಸುಬ್ರಹ್ಮಣ್ಯ. ದೂರವಾಣಿಯಲ್ಲಿ ಸಂಪರ್ಕಿಸಿ ಚಿತ್ರಕಲಾ ಪ್ರದರ್ಶನಕ್ಕೆ ನೀನೇ ಜವಾಬ್ದಾರಿ ತೆಗೆದುಕೊಂಡು ಮಾಡಬಹುದಾ? ಎಂದ ಕೂಡಲೇ ಎರಡು ಮಾತಿಲ್ಲದೆ ಒಪ್ಪಿಕೊಂಡ. ಇದು ಅವನಲ್ಲಿ ಇರುವ ಸಹಾಯ ಮನೋಭಾವನೆಯ ದೊಡ್ಡತನ. ಪ್ರದರ್ಶನದ ಸಂಜೆ ನಾನು ದೂರವಾಣಿ ಮೂಲಕ ಪ್ರದರ್ಶನ ವಿಷಯ ಕೇಳಿದಾಗ ನನಗೆ ಇನ್ನೊಂದು ಆಶ್ಚರ್ಯ ಕಾದಿತ್ತು. ಅವನ ತಂದೆ ಶ್ರೀಯುತ ಕೃಷ್ಣ ಭಟ್ಟರು ತಾನೇ ಮುಂದಾಳಾಗಿ ನಿಂತು ಪ್ರದರ್ಶನದ ವ್ಯವಸ್ಥೆ ಮಾಡಿದ್ದರಂತೆ. ತಂದೆ ಮಗ ಸೇರಿ ಚಿತ್ರಕಲಾ ಪ್ರದರ್ಶನವನ್ನು ಅತೀ ಸುಂದರವಾಗಿ ಎಲ್ಲ ಪ್ರೇಕ್ಷಕರೂ ಮೆಚ್ಚುವಂತೆ ಮಾಡಿದ್ದು ನನ್ನ ಗೈರು ಯಾರಿಗೂ ತಿಳಿಯದಂತೆ ಮಾಡಿದ್ದನ್ನು ಯಾರಾದರೂ ಮರೆಯಲು ಸಾಧ್ಯವೇ. ಇದೇ ಸುಬ್ರಹ್ಮಣ್ಯ ಭಟ್ ಬಿ.ಇ. ಕಲಿತ. ವಾಮಂಜೂರು ಸೈಂಟ್ ಜೋಸೆಫ್ ಕಾಲೇಜಿನಲ್ಲೇ ಈಗ ಪ್ರೊಫೆಸರ್ ಹುದ್ದೆಯಲ್ಲಿರುವುದು ಅವನ ಕಾಯಾವಾಚಾ ಮನಸ್ಸಾ ಪರಿಶುದ್ಧತೆಯ ಸಹಾಯ ಮನಸ್ಸೇ ಕಾರಣ ಎಂಬುದಕ್ಕೆ ಬೇರೆ ಮಾತಿಲ್ಲ. ಸಾವಿರಾರು ಬಿ.ಇ. ವಿದ್ಯಾರ್ಥಿಗಳಿಗೆ ಬೋಧಿಸಿ ಅವರ ಪ್ರೀತಿ ವಿಶ್ವಾಸ ಗೌರವಕ್ಕೆ ಪಾತ್ರನಾದ ಈ ಸುಬ್ರಹ್ಮಣ್ಯ ದೇಶದಲ್ಲೇ ಪ್ರಖ್ಯಾತಿ ಪಡೆದು ಶ್ರೇಷ್ಠ ವ್ಯಕ್ತಿಯಾಗುವಂತೆ ಅನುಗ್ರಹಿಸಲಿ ಎಂದು ಪರಮಾತ್ಮನಲ್ಲಿ ನನ್ನ ಪ್ರಾರ್ಥನೆ. ನನ್ನ ಮಗನ ವಿವಾಹ ಸಂದರ್ಭ ನನಗೆ ಎಲ್ಲಾ ರೀತಿಯ ಸಹಾಯ ಮಾಡಿರುವುದಲ್ಲದೆ ಚಿತ್ರಕಲಾ ಪ್ರದರ್ಶನಕ್ಕೆ ಪೂರ್ಣ ವ್ಯವಸ್ಥೆ ಮಾಡಿರುವುದನ್ನು ಎಷ್ಟು ಸರ್ತಿ ನೆನಪಿಸಿಕೊಂಡರೂ ಸಾಲದು.

**ಡಾ। ಹರಿಗೆ** ಮತ್ತು **ಸುಬ್ರಹ್ಮಣ್ಯನಿಗೆ "ಅಕ್ಷತ" ಮತ್ತು "ಪ್ರಕೃತಿ"** ಎಂಬ ರೂಪವತಿಯರಾದ, ಸದ್ಗುಣವಂತೆಯರಾದ ವಿದ್ಯಾವಂತೆಯರಾದ ಕನ್ಯಾಮಣಿಗಳೊಂದಿಗೆ ವಿವಾಹವಾಗಿ ಯಲ್.ಐ.ಜಿ–36ಕ್ಕೆ **"ಶ್ರೀ ಕೃಷ್ಣಧಾಮ"**ಎಂಬ ನಾಮದೇಯದಿಂದ ಹೊಸರೂಪ ಬಂದಿದೆ.

ನಾನು ದೇವಸ್ಥಾನದ ಬಳಿ ಇದ್ದ ಬಿಡಾರ ಬಿಟ್ಟು ಬಂದುದು ಕೆಲವರಿಗೆ ಗೊತ್ತಾಗಿ ಕುದ್ರೆ ಮುಖ ಕ್ಯಾಂಟೀನ್ ಭಟ್ಟರೊಬ್ಬರು ನನ್ನಲ್ಲಿ ವಿಚಾರಿಸಿದರು. ಒಬ್ಬರಿಗೆ

ಮನೆ ಬಾಡಿಗೆಗೆ ಬೇಕಾಗಿದೆ. ದೇವಸ್ಥಾನದ ಭಟ್ರಲ್ಲಿ ವಿಚಾರಿಸಿ ತೆಗೆಸಿ ಕೊಡುತ್ತಿರಾ ಎಂದು. ದೇವಸ್ಥಾನದ ಶ್ರೀನಿವಾಸ ಭಟ್ಟರಲ್ಲಿ ಒಂದು ದಿನ ನಾನು ಬಾಡಿಗೆಗೆ ಮನೆ ಬೇಕಾದವರು – ಕ್ಯಾಂಟೀನ್‌ರವರು ಸೇರಿ ದೇವಸ್ಥಾನದಲ್ಲೇ ಮಾತನಾಡಿದೆವು. ಶ್ರೀನಿವಾಸ ಭಟ್ರಲ್ಲಿ "ಬಾಡಿಗೆ ಕುಳಿತುಕೊಳ್ಳುವವರ ಪರಿಚಯ ನನಗಿಲ್ಲ – ನೀವೇ ಮಾತನಾಡಿ" ಎಂದೆ. ಎಡ್ವಾನ್ಸ್ ಏನು ತೆಗೆದುಕೊಳ್ಳದೆ ಶ್ರೀನಿವಾಸ ಭಟ್ರು ಬಾಡಿಗೆಗೆ ಮನೆ ಕೊಟ್ಟರು. ಬಾಡಿಗೆಗೆ ಇದ್ದ ಬ್ರಾಹ್ಮಣ ತನ್ನ ಪತ್ನಿ ಹಾಗೂ 2–3 ಜನ ತನ್ನವರೊಂದಿಗೆ ಜೀವನ ಕಳೆಯಲು ಪ್ರಾರಂಭಿಸಿ ದೇವಸ್ಥಾನದ ಟಾಂಕಿಯ ನೀರಿನಿಂದ ಸ್ನಾನ ಬಟ್ಟೆ ಒಗೆದು ಬಾಡಿಗೆ ಕೊಡದೆ ಹಲವಾರು ತೊಂದರೆಗಳನ್ನು ಕೊಡಲಾರಂಭಿಸಿದರು. ದೇವಸ್ಥಾನದ ಕಮಿಟಿಯವರು ಬಾಡಿಗೆ ಕೇಳಿದರೂ ಕೊಡದೆ 2–3 ವರ್ಷ ಹಲವಾರು ರೀತಿಯ ಉಪದ್ರ ನೀಡಿ ಕೊನೆಗೆ 10 ಸಾವಿರ ಅಡ್ವಾನ್ಸ್ ಶ್ರೀನಿವಾಸ ಭಟ್ಟರು ವಾಪಾಸ್ ಕೊಟ್ಟರೆ ಮನೆ ಬಿಡುತ್ತೇನೆ ಎಂದರು. ಶ್ರೀನಿವಾಸ ಭಟ್ಟರು ಅಡ್ವಾನ್ಸ್ ಪಡೆಯದ ಕಾರಣ "ಕಟೀಲಿನಲ್ಲಿ ದೇವರ ಮುಂದೆ ಇಡುತ್ತೇನೆ ಅಡ್ವಾನ್ಸ್ ನಾನು ಪಡೆದದ್ದು ಅಲ್ಲಿ ಸತ್ಯವಾಗಿದ್ದಲ್ಲಿ ಅಲ್ಲಿಂದ ತೆಗೆಯಿರಿ" ಎಂದರು. ಅದಕ್ಕೂ ತಪ್ಪಿಸಿದ. ದೇವಸ್ಥಾನದ ಕಮಿಟಿಯವರು ಇವನ ವರ್ತನೆಗಳನ್ನು ಸಹಿಸಲಾರದೆ ಇಡೀ ಮನೆಯನ್ನು ಕೆಡವಬೇಕಾಯ್ತು. **ಬಾಡಿಗೆಗೆ ಮನೆ ಕೊಡುವವರು ಬಾಡಿಗೆ ಪಡೆಯುವವರು ಈ ಬಗ್ಗೆ ಎಷ್ಟು ತಿಳಿದು ಕೊಂಡರೂ ಸಾಲದು**. ನನ್ನ ಮಧ್ಯಸ್ಥಿಕೆಯಲ್ಲಿ ನಡೆದ ವ್ಯವಹಾರವಾದ್ದರಿಂದ ಬಳಿಕ ಬಾಡಿಗೆ ಮನೆ ಬಗ್ಗೆ ನನ್ನಲ್ಲಿ ವಿಚಾರಿಸಿದರೆ ನನಗೆ ಗೊತ್ತಿಲ್ಲ ಎಂದು ಬಿಡುತ್ತಿದ್ದೆ. ಬಲ್ಮಠ ಮಹಿಳಾ ಸಂಸ್ಥೆಯಲ್ಲಿ ಪ್ರಾಥಮಿಕ, ಪ್ರೌಢ, ಪದವಿ ಪೂರ್ವ ಹಾಗೂ ತರಬೇತಿ ಶಿಕ್ಷಣ ಸಂಸ್ಥೆಗಳ ನಾಲ್ಕು ವಿಭಾಗಗಳಿದ್ದವು. ಶಿಕ್ಷಣ ತರಬೇತಿ ಸಂಸ್ಥೆ ಹಾಗೂ ಪ್ರಾಥಮಿಕ ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದದು ಅಧೀಕ್ಷಕಿಯವರಾದ **ಶ್ರೀಮತಿ ಬಿ. ಸುಶೀಲ** ಎನ್ನುವವರು. ಗಂಭೀರವಾದ ವ್ಯಕ್ತಿತ್ವ, ನ್ಯಾಯ ಬದ್ಧವಾಗಿ, ಶಿಸ್ತು ಬದ್ಧವಾಗಿ ಸಂಸ್ಥೆಯನ್ನು ನಡೆಸಿಕೊಂಡು ಹೋಗುತ್ತಿದ್ದರು.

ನಾನು ಸಂಸ್ಥೆಗೆ ಸೇರಿದ ಸಮಯದಲ್ಲಿ ಬಲ್ಮಠ ಸಂಸ್ಥೆಯ ಮೂಲ ಕಟ್ಟಡದ ಮಾಳಿಗೆಯ ಮೇಲೆ ಒಂದು ಕೊಠಡಿಯಲ್ಲಿ ಅಧ್ಯಾಪಕರು ಪ್ರಶಿಕ್ಷಕರು, ಉಪನ್ಯಾಸಕರು ಒಟ್ಟಾಗಿ ಇದ್ದೆವು. ಉಳಿದ ಮಹಿಳಾ ಬೋಧಕಿಯರಿಗೆ ಬೇರೆ ಕೊಠಡಿ ಇತ್ತು. ತರಬೇತಿ ಸಂಸ್ಥೆಯಲ್ಲಿ ಪ್ರಥಮ ಹಾಗೂ ದ್ವಿತೀಯ ಟಿ.ಸಿ.ಎಚ್. 2 ವರ್ಗವಿದ್ದು ಅವರಿಗಾಗಿ ಹೈಸ್ಕೂಲಿನಲ್ಲಿ ಬೇರೆ ಬೇರೆ 2 ಕೊಠಡಿ ಇತ್ತು. ಟಿ.ಸಿ.ಎಚ್. ತರಗತಿಗೆ 30 ವಿದ್ಯಾರ್ಥಿನಿಯರಿಗೆ ಎಸ್.ಎಸ್.ಎಲ್.ಸಿ.ಯಲ್ಲಿ ಹೆಚ್ಚಿನ ಅಂಕ ಪಡೆದರೆ ಮಾತ್ರ ಆಯ್ಕೆ ಮಾಡುತ್ತಿದ್ದರು. ಶಿಕ್ಷಕಿಯರಿಗೆ ಆವಾಗ ಕೆಲವು ನಿಬಂಧನೆಗಳಿದ್ದವು. ದಿನಾ ಸೀರೆ ಉಟ್ಟುಕೊಂಡೇ ಶಾಲೆಗೆ ಬರಬೇಕು. ಲಿಪ್ಸ್ಟಿಕ್, ನೈಲ್ ಪಾಲೀಶ್, ಹೈಹೀಲ್ಡ್ ಚಪ್ಪಲ್ ಹಾಕುವಂತಿರಲಿಲ್ಲ. ಕೂದಲನ್ನು ಕಡ್ಡಾಯವಾಗಿ ಸುತ್ತಿ ಕಟ್ಟಿಕೊಂಡೇ (ಸೂಡಿ) ತರಗತಿ ಪ್ರವೇಶಿಸಬೇಕು. ಇದು ನಿಯಮವಾಗಿತ್ತು. ಬಲ್ಮಠದ ಎಲ್ಲಾ ಶಿಕ್ಷಣ ವಿಭಾಗಗಳನ್ನು ಸೇರಿ ಬ್ರಿಟಿಷರ ಕಾಲದಿಂದಲೂ **"ಟ್ರೈನಿಂಗ್ ಶಾಲೆ"** ಎಂದೇ ಕರೆಯುತ್ತಿದ್ದರಂತೆ. ಯಾಕೆಂದರೆ ಬ್ರಿಟಿಷರ ಕಾಲದಲ್ಲಿ ಸ್ಥಾಪಿಸಲ್ಪಟ್ಟ ಅತೀ ಪುರಾತನವಾದ ಶಿಕ್ಷಣ

ಸಂಸ್ಥೆಗಳು ಮಂಗಳೂರಲ್ಲಿ ಎರಡು ಮಾತ್ರ ಇತ್ತಂತೆ. ಅದರಲ್ಲಿ ಒಂದನೆಯದು ಗಂಡು ಮಕ್ಕಳಿಗಾಗಿ ಈಗ ಇರುವ ನಗರದ ಮಧ್ಯ ಭಾಗದಲ್ಲಿರುವ **"ಸರಕಾರಿ ಪದವಿ ಕಾಲೇಜು"** ಮತ್ತು ಇನ್ನೊಂದು ಹೆಣ್ಣುಮಕ್ಕಳಿಗೆ ಟ್ರೈನಿಂಗ್‌ಗಾಗಿ **"ಬಲ್ಮಠ ಟ್ರೈನಿಂಗ್ ಶಾಲೆ"** ಇಲ್ಲಿ ಪ್ರಾರಂಭದಲ್ಲಿ ಪ್ರಾಥಮಿಕ ವಿಭಾಗ ಮಾತ್ರ ಬೋಧನೆಯ ಉದ್ದೇಶದಿಂದ ಇತ್ತು. ಗಂಡು ಮಕ್ಕಳು, ಹೆಣ್ಣು ಮಕ್ಕಳು ಪ್ರಾಥಮಿಕ ಸಂಸ್ಥೆಯಲ್ಲಿದ್ದರು. ಹೈಸ್ಕೂಲಿಗೆ ಗಂಡು ಮಕ್ಕಳು ಬೇರೆ ಸಂಸ್ಥೆಗೆ ಹೋಗಬೇಕಾಗಿತ್ತು. ಬಳಿಕ ಹೆಣ್ಣು ಮಕ್ಕಳ ಪ್ರೌಢಶಾಲೆ ಪ್ರಾರಂಭವಾಯ್ತು. ಎಷ್ಟೋ ವರ್ಷದ ಬಳಿಕ ಪದವಿಪೂರ್ವ ಕಾಲೇಜು ಈಗ ಮಹಿಳಾ ಪದವಿಕಾಲೇಜು ಕೂಡ ಈ ಸಮೂಹದಲ್ಲಿ ಸೇರಿಕೊಂಡಿದೆ.

## ಬಲ್ಮಠ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಚಿತ್ರಕಲಾ ಪ್ರಶಿಕ್ಷಕನಾಗಿ

ಶಿಕ್ಷಣ ತರಬೇತಿ ಸಂಸ್ಥೆಗೆ ನಾನು ಸೇರಿದಾಗ ತುಂಬಾ ಹೆದರಿಕೆಯಾಗಿತ್ತು. ಯಾಕೆಂದರೆ ಇಷ್ಟರತನಕ ನಾನು 16ವರ್ಷ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಚಿತ್ರಕಲೆ ಮತ್ತು ಹೊಲಿಗೆ ಕಲಿಸುತ್ತಿದ್ದೆ. ಆದರೆ ಈಗ ಎಸ್.ಎಸ್.ಎಲ್.ಸಿ. ಮುಗಿಸಿ ಬಂದು ಟಿ.ಸಿ.ಎಚ್. ಮಾಡುವವರಿಗೆ ಪಾಠ ಮಾಡಬೇಕಾಗಿತ್ತು. ಸಾಗರದಲ್ಲಿ ಚಿತ್ರಕಲಾ ಅಧ್ಯಾಪಕನಾಗಿದ್ದಾಗ ಬಿಡುವು ಇಲ್ಲದೆ 20 ತರಗತಿಗಳಿಗೆ 40 (ಫಿರೇಯ್ಡ್) ಕ್ಲಾಸ್ ಮಾಡುತ್ತಿದ್ದೆ. ಆದರೆ ಬಲ್ಮಠಕ್ಕೆ ಬಂದವನಿಗೆ ಕೇವಲ 2 ಪಿರೇಯ್ಡ್ (ಅವಧಿ)ಪಾಠ. ಇಡೀ ವಾರಕ್ಕೆ ಪ್ರಥಮ ಟಿ.ಸಿ.ಎಚ್.ಗೆ 2 ಅವಧಿ, ದ್ವಿತೀಯ ಟಿ.ಸಿ.ಎಚ್.ಗೆ 2 ಅವಧಿ. ಹಾಗಾಗಿ ಕೆಲಸವಿಲ್ಲದೇ ಬಹಳ ಕಷ್ಟವಾಗುತ್ತಿತ್ತು. ಹಾಗಾಗಿ ಟಿ.ಸಿ.ಎಚ್ ವಿದ್ಯಾರ್ಥಿನಿಯರಿಗೆ ಪಾಠ ಮಾಡಲು ಬೇಕಾಗುವ ಚಾರ್ಟುಗಳ ಚಿತ್ರಗಳನ್ನು ಪೆನ್ಸಿಲಿನಲ್ಲಿ ಬಿಡಿಸಿಕೊಡುತ್ತಿದ್ದೆ. ಬಳಿಕ ಅವರು ಬಣ್ಣಕೊಟ್ಟು ಚಂದಗೊಳಿಸಬೇಕಾಗಿತ್ತು. ಹೀಗೆ ಪ್ರತೀ ಟಿ.ಸಿ.ಎಚ್. ವಿದ್ಯಾರ್ಥಿನಿಯರಿಗೆ ಚಿತ್ರ ಬಿಡಿಸಿಕೊಡಲು ನನಗೆ ಸಮಯ ಸಾಕಾಗುತ್ತಿರಲಿಲ್ಲ. ಶಿಕ್ಷಕಿಯರಿಗೆ ಚಿತ್ರಕಲಿಸಲು ಅವಕಾಶ ಸಿಕ್ಕಿದ ನಾನೇ ಧನ್ಯ. ಯಾಕೆಂದರೆ ನಾನು ಚಿತ್ರ ಕಲಿಸಿದ ಶಿಕ್ಷಕಿಯರು ಸಾವಿರಾರು ಪ್ರಾಥಮಿಕ ಮಕ್ಕಳಿಗೆ ಚಿತ್ರ ಕಲಿಸಿದಾಗ ಸಾವಿರಾರು ಮಕ್ಕಳು ಚಿತ್ರಕಲೆಯಿಂದ ಸಂತೋಷ ಪಡೆಯುತ್ತಾರೆ. **"ಚಿತ್ರಕಲೆ ಎಂಬುದು ಎಲ್ಲಾ ವಿದ್ಯಾಭ್ಯಾಸದ ತಳಹದಿ".** ಆದ್ದರಿಂದ ಪ್ರಾಥಮಿಕ ಶಾಲೆ ಮಕ್ಕಳು ಚಿತ್ರಕಲೆ ಕಲಿತರೆ ಮುಂದೆ ಅವರು ಮುಂದುವರಿಸುವ ಎಲ್ಲಾ ವಿದ್ಯಾಭ್ಯಾಸಕ್ಕೂ ಸಹಕಾರಿಯಾಗುವುದರಲ್ಲಿ ಸಂದೇಹವೇ ಇಲ್ಲ. ಚಿತ್ರಕಲೆ ಕಲಿಯುವುದರಿಂದ ಜೀವನದಲ್ಲಿ ಹಲವಾರು ಉಪಯೋಗವಿದೆ. ಚಿತ್ರಕಲೆ ಕಲಿಯುವವನಿಗೂ ಸಂತೋಷ, ಚಿತ್ರಕಲೆ ನೋಡುವವನಿಗೂ ಸಂತೋಷ ಸಿಗುತ್ತದೆ. ಬಿಡುವಿನ ಸಮಯದ ಸದುಪಯೋಗವಾಗುತ್ತದೆ. ಮುಂದಿನ ವಿದ್ಯಾಭ್ಯಾಸಕ್ಕೆ ಸಹಕಾರಿಯಾಗುತ್ತದೆ. ಸಂಪಾದನೆಗಾಗಿ ಕೈಗಾರಿಕೆಗಳಿಗಾಗಿ – ಪ್ರಚಾರ ಕಲೆಗೆ– ಹೀಗೆ ಎಲ್ಲಾ ಸಂದರ್ಭದಲ್ಲೂ ಎಲ್ಲರಿಗೂ ಚಿತ್ರಕಲೆ ಒಂದಲ್ಲ ಒಂದು ರೀತಿಯಲ್ಲಿ ಬೇಕಾಗುತ್ತದೆ. ಟಿ.ಸಿ.ಎಚ್ ವಿದ್ಯಾರ್ಥಿನಿಯರು ಚಿತ್ರಕಲೆಯನ್ನು ಕಲಿತರೆ ಅದರಿಂದಾಗಿ ಸಾವಿರಾರು ಪ್ರಾಥಮಿಕ ವಿದ್ಯಾರ್ಥಿಗಳು ಸ್ವಲ್ಪ ಮಟ್ಟಿಗಾದರೂ ಚಿತ್ರಕಲೆಯನ್ನು

ಕಲಿಸಲು ಸಾಧ್ಯವಾಗುತ್ತದೆ. **"ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುವವಳೇ ನಿಜವಾದ ಶಿಕ್ಷಕಿ"** ಎಂದು ನನ್ನ ಅನುಭವಾಮೃತ (ಟಿ.ಸಿ.ಎಚ್. ವಿದ್ಯಾರ್ಥಿನಿಯರಿಗೆ ಎರಡು ಅವಧಿಯಲ್ಲಿ ಚಿತ್ರಕಲೆಯನ್ನು ಕಲಿಸಲು ಸಮಯ ಸಾಕಾಗುವುದಿಲ್ಲವಾಗಿತ್ತು). ಅದಕ್ಕಾಗಿ ಊಟದ ಮಧ್ಯಾಹ್ನ ಬಿಡುವಿನ ಸಮಯ 45 ನಿಮಿಷ ಅವಧಿಯಲ್ಲಿ ಪ್ರತೀದಿನ ಚಿತ್ರ ಕಲಿಸಲು ತೊಡಗಿದೆ. ಎಲ್ಲಾ ದ್ವಿತೀಯ ಟಿ.ಸಿ.ಎಚ್. ವಿದ್ಯಾರ್ಥಿನಿಯರು ಕಡ್ಡಾಯವಾಗಿ ಕಲಿಯಬೇಕೆಂಬ ಉದ್ದೇಶದಿಂದ ಸರಕಾರದ ವತಿಯಿಂದ ನಡೆಯುತ್ತಿದ್ದ ಚಿತ್ರಕಲಾ ಜೂನಿಯರ್ ಗ್ರೇಡ್ ಮತ್ತು ಹೈಯರ್ ಗ್ರೇಡ್ ಪರೀಕ್ಷೆಗಳಲ್ಲಿ **ಹೈಯರ್ ಗ್ರೇಡ್ ಪರೀಕ್ಷೆಗೆ** ಎಲ್ಲರನ್ನೂ ಕುಳಿತುಕೊಳ್ಳಲು ಅವಕಾಶ ಮಾಡಿಕೊಟ್ಟೆ. ಬಳಿಕ ಪ್ರತೀ ವರ್ಷ ಉರ್ವ ಕೆನರಾ ಹೈಸ್ಕೂಲಿನಲ್ಲಿ ನಡೆಯುತ್ತಿದ್ದ ಗ್ರೇಡ್ ಪರೀಕ್ಷೆಗೆ ನಮ್ಮ ವಿದ್ಯಾರ್ಥಿನಿಯರು ಕುಳಿತು ಪಾಸಾಗುತ್ತಿದ್ದರು. ಉತ್ತಮ ಫಲಿತಾಂಶ ಬರುತಿತ್ತು. ಸ್ವಲ್ಪ ವರ್ಷದ ಬಳಿಕ ನಮ್ಮ ಬಲ್ಮಠ ಸಂಸ್ಥೆಯಲ್ಲೇ ಪರೀಕ್ಷಾ ಕೇಂದ್ರವನ್ನಾಗಿ ಮಾಡಿಸಿ ನಮ್ಮ ಕೇಂದ್ರದ ಮೂಲಕವೇ ಪರೀಕ್ಷೆಗೆ ಮಕ್ಕಳು ಕುಳಿತರು. ಟಿ.ಸಿ.ಎಚ್. ಮಕ್ಕಳು ಗ್ರೇಡ್ ಪರೀಕ್ಷೆಯ ಪ್ರಮಾಣ ಪತ್ರ ಪಡೆದು ನನ್ನನ್ನು ಪ್ರತೀ ವರ್ಷ ಸ್ಮರಣಿಕೆಯನ್ನಿತ್ತು ಸನ್ಮಾನಿಸುತ್ತಿದ್ದರು.

## ರಥಬೀದಿ ಪ.ಪೂ. ಕಾಲೇಜಿನಲ್ಲಿ ಒಂದು ವರ್ಷ

**ಶ್ರೀಮತಿ ರಮಾ ಹಂದೆ** ಪದವಿಪೂರ್ವ ಕಾಲೇಜಿನಲ್ಲಿ ಪ್ರಾಚಾರ್ಯರಾಗಿದ್ದರು. ಹಂದೆಯವರಿಗೆ ಮತ್ತು ನಮ್ಮ ಸಂಸ್ಥೆಯ ಅಧೀಕ್ಷಕಿಯವರಾಗಿದ್ದ **ಸುಶೀಲ**ರವರಿಗೆ ಸ್ವಲ್ಪ ಮನಸ್ತಾಪ ಬಂದು ಸಹಪ್ರಶಿಕ್ಷಕರಾಗಿದ್ದ ನಮಗೆಲ್ಲಾ ತುಂಬಾ ಕಿರಿಕಿರಿಯಾಗುತ್ತಿತ್ತು. ನಮಗೆ ಆಗಾಗ ಹಂದೆಯವರಿಂದ ಮನಸ್ಸಿಗೆ ನೋವಾಗುವಂತಹ ನೋಟೀಸ್ ಬರುತ್ತಿತ್ತು. ಮನುಷ್ಯ ಆರೋಗ್ಯವಂತನಾಗಿರಬೇಕಾದರೆ **"ಹೆಡ್"** (ತಲೆ) ಮುಖ್ಯ. ಎರಡು ಹೆಡ್‌ಗಳ ಆದೇಶಗಳು ಪ್ರಶಿಕ್ಷಕರಾಗಿದ್ದ ನಮಗೆಲ್ಲಾ ತುಂಬ ಮನಸ್ಸಿಗೆ ನೋವು ಕೊಡುತ್ತಿತ್ತು. ಏನು ಮಾಡಬೇಕೆಂಬುದನ್ನು ತಿಳಿಯದೇ ಗೊಂದಲದಲ್ಲಿ ಬೀಳುತ್ತಿದ್ದೆವು ಇದನ್ನು ನೋಡಿದ ನನಗೆ ಒಂದು ಉಪಾಯ ಹೊಳೆದು ಮಂಗಳೂರಿನ **ರಥಬೀದಿಯಲ್ಲಿ ಮಹಿಳಾ ಸರಕಾರಿ ಪದವಿಪೂರ್ವ ಕಾಲೇಜಿನಲ್ಲಿ** ಚಿತ್ರಕಲಾ ಶಿಕ್ಷಕರ ಹುದ್ದೆ ಕಾಲಿ ಇದೆಯೆಂದು ತಿಳಿದು ಅಲ್ಲಿಗೆ ಶಿಕ್ಷಣ ಇಲಾಖೆಗೆ ಒತ್ತಡ ಹಾಕಿ **"ಡೆಪ್ಯುಟೇಶನ್"** ಮಾಡಿಸಿಕೊಂಡೆ. ಅಲ್ಲಿ **ಶ್ರೀಯುತ ವಾಸುದೇವ ರಾವ್** ಅನ್ನುವವರು, ಶ್ರೀಯುತ **ವಾಸುದೇವ ಗೌಡರು** ನನ್ನನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಅವರು ಉಪನ್ಯಾಸಕರಾಗಿದ್ದರೂ ಅವರ ಕೊಠಡಿಯಲ್ಲೇ ನನ್ನನ್ನು ಕೂತುಕೊಳ್ಳಿಸುತ್ತಿದ್ದರು. ಹೆಣ್ಣು ಮಕ್ಕಳ ಪದವಿಪೂರ್ವ ಕಾಲೇಜಿನಲ್ಲಿ ಪ್ರೌಢ ವಿಭಾಗಕ್ಕೆ ಚಿತ್ರ ಕಲಿಸಿಕೊಡುತ್ತಿದ್ದೆ. ಈ ಸಂಸ್ಥೆಗೆ 80% ಮುಸ್ಲಿಂ ವಿದ್ಯಾರ್ಥಿನಿಯರು ವಿದ್ಯಾಭ್ಯಾಸಕ್ಕೆ ಬರುತ್ತಿದ್ದರು. ಮುಸ್ಲಿಂ ವಿಧ್ಯಾರ್ಥಿನಿಯರಿಗೆ ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ ಇದೆ ಎಂಬುದನ್ನು ಈ ಸಂಸ್ಥೆಗೆ ಬಂದ ಬಳಿಕವೇ ನನಗೆ ತಿಳಿದದ್ದು. ಹೆಚ್ಚಿನ ಎಲ್ಲಾ ಮುಸ್ಲಿಂ ವಿದ್ಯಾರ್ಥಿನಿಯರು ಬೇರೆ ವಿಷಯಗಳ ಹೋಂವರ್ಕ್ಸ್ ಮಾಡದಿದ್ದರೂ ನಾನು ಹೇಳಿದ ಚಿತ್ರಗಳನ್ನು ತಪ್ಪದೇ ಬಿಡಿಸಿಕೊಂಡು ಬರುತ್ತಿದ್ದರು ಎಂದು ಹೆಮ್ಮೆಯಿಂದ ಹೇಳಬಹುದು. ರಥಬೀದಿ

ಸಂಸ್ಥೆಯಲ್ಲಿ ಒಂದು ವರ್ಷ ಕೆಲಸ ಮಾಡಿ ಸಂಬಳ ಬಲ್ಮಠ ಟಿ.ಸಿ.ಎಚ್. ಸಂಸ್ಥೆಯಿಂದ ಪಡೆದೆ. ಸ್ವಲ್ಪ ಸಮಯದ ನಂತರ ಬಲ್ಮಠ ಸಂಸ್ಥೆಯು ಎರಡು ವಿಭಾಗವಾಯ್ತು. ಒಂದು ವಿಭಾಗದಲ್ಲಿ ಪ್ರೌಢಶಾಲೆ ಮತ್ತು ಪದವಿಪೂರ್ವ ಕಾಲೇಜು, ಅದರ ಮುಖ್ಯಸ್ಥರು ಪ್ರಾಂಶುಪಾಲರು. ಇನ್ನೊಂದು ವಿಭಾಗ ಟಿ.ಸಿ.ಎಚ್ ಮತ್ತು ಪ್ರಾಥಮಿಕ ಶಾಲೆ, ಇದನ್ನು ನಡೆಸಿಕೊಂಡು ಹೋಗುವ ಮುಖ್ಯಸ್ಥರು ಅಧೀಕ್ಷಕಿಯವರು. ಎರಡು ವಿಭಾಗವಾದ ಬಳಿಕ ನಾನು ಬಲ್ಮಠದ ಟಿ.ಸಿ.ಎಚ್. ವಿಭಾಗಕ್ಕೆ ಪ್ರಶಿಕ್ಷಕನಾಗಿ ಡೆಪ್ಯೂಟೇಶನ್ ಅವಧಿ ಮುಗಿದ ಬಳಿಕ ಬಂದು ಸೇರಿದೆ.

## ಟಿ.ಸಿ.ಎಚ್. ವಿಭಾಗದಲ್ಲಿ ಪ್ರಶಿಕ್ಷಕನಾಗಿ

ಟಿ.ಸಿ.ಎಚ್. ಎರಡು ವರ್ಷದ ವ್ಯಾಸಂಗದಲ್ಲಿ ವಿದ್ಯಾರ್ಥಿನಿಯರಿಗೆ ಪ್ರಥಮ ವರ್ಷದಲ್ಲಿ 5–6 ದಿನದ ಶಿಬಿರವನ್ನೂ ದ್ವಿತೀಯ ವರ್ಷದಲ್ಲಿ ಒಂದು ಪ್ರವಾಸವನ್ನು ವ್ಯವಸ್ಥೆ ಮಾಡಬೇಕಾಗಿತ್ತು. 30 ವಿದ್ಯಾರ್ಥಿನಿಯರನ್ನು ಪ್ರತಿ ವರ್ಗಕ್ಕೆ ಸೇರಿಸುತ್ತಿದ್ದರು. ಟಿ.ಸಿ.ಎಚ್.ಗೆ ಸೇರಲು ಅವರಿಗೆ ಸಿಕ್ಕಿದ ಎಸ್.ಎಸ್.ಎಲ್.ಸಿ. ಅಂಕ ಶ್ರೇಣಿಯ ಮೇಲೆ ಜಾತಿಯ ಆಧಾರದ ಮೇಲೆ ಸರಕಾರದ ನಿರ್ದೇಶನದಂತೆ ಆಯ್ಕೆ ಪ್ರಕ್ರಿಯೆ ನಡೆಯುತ್ತಿತ್ತು. ಕರ್ನಾಟಕದ ಮೂಲೆ ಮೂಲೆಯಿಂದ (ಗುಲ್ಬರ್ಗಾ, ಬಿಜಾಪುರ, ಉತ್ತರ ಕರ್ನಾಟಕದ) ಕಡೆಯಿಂದ ಶಿಕ್ಷಕಿಯರಾಗಿ ಆಯ್ಕೆಯಾಗಿ ಬಲ್ಮಠ ವಿದ್ಯಾಸಂಸ್ಥೆಗೆ ಬರುತ್ತಿದ್ದರು. ಬಂದ ವಿದ್ಯಾರ್ಥಿನಿಯರಿಗೆ ಸರಿಯಾದ ವಿದ್ಯಾರ್ಜನೆಗೆ ಬೇಕಾದ ವಸತಿಗೃಹ ಇರಲಿಲ್ಲ. ಟಿಸಿಎಚ್ ವಿದ್ಯಾರ್ಥಿನಿಯರ ಈ ಪರಿಸ್ಥಿತಿಯನ್ನು ಕಂಡು ನನಗೆ ತುಂಬಾ ದುಃಖವಾಗುತ್ತಿತ್ತು. ವಿದ್ಯಾರ್ಥಿನಿಯರು ಸಂಬಂಧಿಕರ ಮನೆಯಲ್ಲಿ ಊಟ ಮಾಡುತ್ತಾ ವಸತಿ ನೀಡುವವರ ಮನೆಯಲ್ಲಿ ನಮ್ಮ ಟಿ.ಸಿ.ಎಚ್. ವಿದ್ಯಾರ್ಥಿನಿಯರು ವಾಸವಿರುತ್ತಿದ್ದರು. ಸರಕಾರದ ವತಿಯಿಂದ ಅಂಕ–ಜಾತಿ–ಪರಿಗಣಿಸಿ ವಸತಿಗೃಹ ನೀಡುತ್ತಿದ್ದರು. ಹಾಗೆ ಕೆಲವು ವಿದ್ಯಾರ್ಥಿನಿಯರು ವಸತಿಗೃಹದಿಂದ ಬರುತ್ತಿದ್ದರು.

ನನ್ನ ಜೊತೆಗೆ 17 ವರ್ಷದಲ್ಲಿ ಸಹೋದ್ಯೋಗಿಗಳಾಗಿದ್ದ ಎಲ್ಲರ ಹೆಸರು ನೆನಪು ಇಲ್ಲದಿದ್ದರೂ ಕೆಲವರ ಹೆಸರನ್ನು ಸದಾ ಜೀವನದಲ್ಲಿ ನೆನಪಿಸಿಕೊಳ್ಳುತ್ತಾ ಇರುತ್ತೇನೆ. 17 ವರ್ಷದ ಅವಧಿಯಲ್ಲಿ ನಮ್ಮ ಸಂಸ್ಥೆಯ (ಪ್ರಾಂಶುಪಾಲರಾಗಿ) ಅಧೀಕ್ಷಕಿಯಾಗಿದ್ದವರೆಂದರೆ **ಶ್ರೀಮತಿ ಬಿ. ಸುಶೀಲ, ಶ್ರೀಯುತ ಶಿವಪ್ಪ ಪೂಜಾರಿ, ಶ್ರೀಯುತ ಎಂ.ಎಂ.ಪ್ರಭು, ಶ್ರೀಮತಿ ಯಶೋಧ, ಶ್ರೀಯುತ ಅಬುಬಕ್ಕರ್. ನನ್ನೊಂದಿಗೆ ಇದ್ದ ಸಹೋದ್ಯೋಗಿಗಳು ಶ್ರೀಯುತ ಭಾಸ್ಕರ ಶೆಟ್ಟಿ, ಶ್ರೀಮತಿ ಸುನಂದ ಶೆಟ್ಟಿ, ಶ್ರೀಮತಿ ಮೈಥಿಲಿ, ಶ್ರೀಮತಿ ಸುನಂದ, ಶ್ರೀಮತಿ ಸಿರಿಯಾನ್, ಶ್ರೀ ಎಂ.ಎಂ. ಪ್ರಭು, ಶ್ರೀ ಅಬುಬಕ್ಕರ್, ಶ್ರೀ ತಿಮ್ಮೇಗೌಡ, ಶ್ರೀಮತಿ ಸುನೀತಿ, ಶ್ರೀಮತಿ ಸುನೀತ, ಶ್ರೀಮತಿ ರತ್ನ** (ಪ್ರ.ದ.ಗುಮಾಸ್ತೆ) **ಶ್ರೀಮತಿ ಗುಬ್ಬಿ, ಶ್ರೀಮತಿ ಎಲಿಜ, ಶ್ರೀಮತಿ ಸರೋಜಿನಿ, ಶ್ರೀ ಪದ್ಮನಾಭ, ಶ್ರೀ ಭಾಸ್ಕರ್** (ರಾತ್ರಿ ಕಾವಲುಗಾರರಾಗಿದ್ದರು) **ಶ್ರೀ ಪುರುಷೋತ್ತಮ** ಹೀಗೆ ಕೆಲವರೊಂದಿಗೆ ನಾನೂ ಪ್ರಶಿಕ್ಷಕರಾಗಿ ಜೀವನ ನಡೆಸಿದ್ದೆ.

**ಮಾತು ಬಂತು ಕೃತಿ ಹೋಯ್ತು, ಸ್ವಾತಂತ್ರ್ಯ ಬಂತು ಸೌಜನ್ಯ ಹೋಯ್ತು**

# ಶಿಕ್ಷಣ ಹೇಗಿರಬೇಕು? ಶಿಕ್ಷಕ ಶಿಕ್ಷಕಿಯರು ಹೇಗಿರಬೇಕು? ನನ್ನ ಅನಿಸಿಕೆ




ನಾನು ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಇರುವಷ್ಟು ಸಮಯ (17 ವರ್ಷ) ಚಿತ್ರಕಲೆ ಕಲಿಸುವುದಕ್ಕಿಂತಲೂ ಹೆಚ್ಚಾಗಿ ಮುಂದಕ್ಕೆ ಶಿಕ್ಷಕಿಯಾಗಲಿರುವ ವಿದ್ಯಾರ್ಥಿನಿಯರು ಜೀವನ ಪರ್ಯಂತ ಹೇಗೆ ಜೀವಿಸಬೇಕು. ಮಕ್ಕಳೊಂದಿಗೆ ಹೇಗೆ ಇರಬೇಕು. ಸಹೋದ್ಯೋಗಿಗಳೊಂದಿಗೆ ಹೇಗೆ ಇರಬೇಕು. ಸಮಾಜದಲ್ಲಿ ಜನರೊಂದಿಗೆ ಹೇಗೆ ವ್ಯವಹರಿಸಬೇಕು. ಮನೆಯಲ್ಲಿ ಹಿರಿಯರೊಂದಿಗೆ ಗೆಳೆಯರೊಂದಿಗೆ ಬಂಧುಗಳೊಂದಿಗೆ, ತಮ್ಮ ವಿದ್ಯಾರ್ಥಿಗಳೊಂದಿಗೆ ಹೇಗೆ ಪ್ರೀತಿವಿಶ್ವಾಸ ಗಳಿಸಿ ಮಾತನಾಡಬೇಕು ಎಂಬುದನ್ನು ಹೆಚ್ಚಾಗಿ ಕಲಿಸಿದ್ದೆ. ತರಗತಿಯಲ್ಲಿ ಬಂದು **"ಜೋಕ್"** ಹೇಳಿ ಎಲ್ಲ ಮಕ್ಕಳು ನನ್ನ ಪಾಠದ ಬಗ್ಗೆ ಲಕ್ಷ್ಯ ಕೊಡುವಂತೆ ಮಾಡುತ್ತಿದ್ದೆ. ಬಳಿಕ ನನ್ನ ಜೀವನದಲ್ಲಿ ಬಂದಿರುವ ಘಟನೆಗಳನ್ನು ಮೊದಲು ಅನುಭವಾಮೃತವನ್ನಾಗಿ ಪರಿವರ್ತಿಸಿ ಹೇಳುತ್ತಿದ್ದೆ. ಅನುಭವಾಮೃತದ ಬಗ್ಗೆ ವಿವರಣೆ ನೀಡಿ ಜೀವನದಲ್ಲಿ ಅನುಭವಾಮೃತದಂತೆ ಜೀವನ ನಡೆಯುವಂತೆ ಪ್ರೇರೇಪಿಸುತ್ತಿದ್ದೆ. ನಾನು ಜೋಕ್ ಹೇಳುವಾಗ ನನ್ನ ಜೀವನದಲ್ಲೇ ನಡೆದ ಘಟನೆ ಎಂಬ ರೀತಿಯಲ್ಲಿ ಹಾಸ್ಯ ರೂಪದಲ್ಲಿ ಹೇಳುತ್ತಿದ್ದೆ. **ಯಾಕೆಂದರೆ ನಗುವುದು ಮನುಷ್ಯನಿಗೆ ಆರೋಗ್ಯ ಕೊಡುತ್ತದೆ.** ಶಿಕ್ಷಕಿಯಾದವರು ತಾವೂ ನಗುತ್ತಾ ಇರಬೇಕು. ಇತರರನ್ನು ನಗಿಸುತ್ತಾ ಮಕ್ಕಳನ್ನು ನಗಿಸುತ್ತಾ ಶಾಲೆಯಲ್ಲಿ ಆನಂದದ ವಾತಾವರಣವನ್ನು ಕಲ್ಪಿಸಬೇಕು. ಇದೇ ನನ್ನ ಉದ್ದೇಶ, ಶಿಕ್ಷಕಿಯಾದವಳು ಪಾಠ ಮಾಡುವ ಮೊದಲು ವಿದ್ಯಾರ್ಥಿಗಳ ಪ್ರೀತಿವಿಶ್ವಾಸ ಗಳಿಸಿಕೊಳ್ಳಬೇಕು.

**ಪ್ರೀತಿ, ವಿಶ್ವಾಸ, ಗೌರವ ಕೊಂಡುಕೊಳ್ಳಲಾಗುವುದಿಲ್ಲ, ಪ್ರೀತಿ, ವಿಶ್ವಾಸ, ಗೌರವ ಕಂಡುಕೊಳ್ಳಬೇಕು.** ಮಕ್ಕಳು ಒಮ್ಮೆ ಶಿಕ್ಷಕಿಯನ್ನು ಪ್ರೀತಿಸಿದರೆ ಮತ್ತೆ ಎಂದಿಗೂ

ಮರೆಯುವುದಿಲ್ಲ. ತಮ್ಮ ಪ್ರೀತಿಯ ಶಿಕ್ಷಕಿಗೆ ಏನೇ ತೊಂದರೆಯಾದರೂ ದುಃಖವಾದರೂ ಅವರೂ ತುಂಬ ದು:ಖಿಸುತ್ತಾರೆ. ಪ್ರೀತಿಯ ಶಿಕ್ಷಕಿ ಏನು ಮನೆ ಕೆಲಸ ಹೇಳಿದರೂ ತಮಗೆ ಎಷ್ಟು ಕಷ್ಟವಾದರೂ ಮಾಡಿಕೊಂಡೇ ಬರುತ್ತಾರೆ. ಶಾಲೆಯಲ್ಲಿರುವ ಉಳಿದ ಶಿಕ್ಷಕಿಯರಿಗಿಂತ ತಮ್ಮ ಪ್ರೀತಿಯ ಶಿಕ್ಷಕಿಗೆ ಹೆಚ್ಚು ಗೌರವ ಕೊಡುತ್ತಾರೆ. ಅವರು ಹೇಳಿದ ಕೆಲಸಗಳನ್ನು ತಪ್ಪದೆ ಮಾಡುತ್ತಾರೆ. ಹಾಗಾಗಿ ಶಾಲೆಯಲ್ಲಿ ಶಿಕ್ಷಕರಾದವರು ಮೊದಲು ತಮ್ಮ ವಿದ್ಯಾರ್ಥಿಗಳನ್ನು ತಮ್ಮ ಮನೆಯ ಮಕ್ಕಳಿಗಿಂತ ಹೆಚ್ಚು ಪ್ರೀತಿಸಬೇಕು. **ಶಿಕ್ಷಕರನ್ನು ವಿದ್ಯಾರ್ಥಿಗಳು ಮೆಚ್ಚಬೇಕು.** ವಿನಹ **"ಜನ ಮೆಚ್ಚುವ ಶಿಕ್ಷಕರು"** ನಾವು ಆಗಬಾರದು. **ಶಿಕ್ಷಕರಾದವರಿಗೆ ವಿದ್ಯಾರ್ಥಿಗಳು ಪ್ರೀತಿಸಿದರೆ ಮೆಚ್ಚಿದರೆ ಗೌರವಿಸಿದರೆ ಅದಕ್ಕಿಂತ ದೊಡ್ಡದಾದ ಪ್ರಶಸ್ತಿಗಳು ಬೇರೆ ಇಲ್ಲ.** ಆದುದರಿಂದ ಶಿಕ್ಷಕ ವೃತ್ತಿಯಲ್ಲಿರುವಾಗ ಎಲ್ಲಾ ಶಿಕ್ಷಕ ಶಿಕ್ಷಕಿಯರು ತಮ್ಮ ವಿದ್ಯಾರ್ಥಿಗಳನ್ನು ಪ್ರೀತಿಯಿಂದ ಮಾತನಾಡಿಸುತ್ತಾ ಜೀವನ ಪರ್ಯಂತ ವಿದ್ಯಾರ್ಥಿಗಳೊಂದಿಗೆ ನಗುನಗುತ್ತಾ ಬಾಳಬೇಕು. **"ಬಹಳ ಒಳ್ಳೆ ನಮ್ಮ ಮಿಸ್..... ಶಾಲೆಗೆಲ್ಲಾ ಫೇಮಸ್ಸು,..... ಏನ್ ಹೇಳಿದರೂ ಎಸ್.ಎಸ್.... ನಗ್ತಾ ನಗ್ತಾ ಮಾತಾಡ್ತಾರೆ. ನಮ್ಮಿಸ್...."** ಇಂತಹ ಒಂದು ಪುಟ್ಟ ಮಗು ತನ್ನ ಮಿಸ್ (ಟೀಚರ್–ಶಿಕ್ಷಕಿ) ಬಗ್ಗೆ ನನ್ನ ಪ್ರೀತಿಯ ಶಿಕ್ಷಕಿಯ ಬಗ್ಗೆ ಹೇಳಿದ ಸಿನೇಮಾ ಪದ್ಯ ಎಲ್ಲ ಶಿಕ್ಷಕಿಯರ ಮನ ಮುಟ್ಟುವಂತಿದೆ. ಎಲ್ಲಾ ಶಿಕ್ಷಕಿಯರೂ ಮೇಲೆ ತಿಳಿಸಿದ ಶಿಕ್ಷಕಿಯಂತೆ ಆಗಬೇಕಾದರೆ ವಿದ್ಯಾರ್ಥಿಗಳೆಲ್ಲರೂ ಮೆಚ್ಚುವ ಪ್ರೀತಿಸುವ – ಗೌರವಿಸುವ ಶಿಕ್ಷಕಿಯರಾಗಬೇಕಾದರೆ ಏನು ಮಾಡಬೇಕೆಂದು ಈ ಕೆಳಗಿನ ಕೆಲವು ನನ್ನ ಅನಿಸಿಕೆಗಳು.

## ವಿದ್ಯಾರ್ಥಿಗಳು ಶಿಕ್ಷಕಿಯರನ್ನು ಪ್ರೀತಿಸಬೇಕಾದರೆ:

1. ತರಗತಿಯಲ್ಲಿ ಇರುವ ಎಲ್ಲಾ ವಿದ್ಯಾರ್ಥಿಗಳನ್ನು ತಮ್ಮ ಮಕ್ಕಳಂತೆ ಒಂದೇ ಭಾವನೆಯಿಂದ ಬೇಧ ಮಾಡದೆ ಮಾತನಾಡಿಸಬೇಕು.

2. ತರಗತಿಯಲ್ಲಿರುವ ಎಲ್ಲಾ ಮಕ್ಕಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ತನ್ನ ಬಳಿಗೆ ಕರೆದು ತಬ್ಬಿ ಹಿಡಿದುಕೊಂಡು ಮಗುವಿನ ಪರಿಚಯ ಮಾಡಿಕೊಳ್ಳಬೇಕು. ಮಗುವಿನ ತಂದೆ–ತಾಯಿ, ಅಕ್ಕ, ಅಣ್ಣ, ತಮ್ಮ, ತಂಗಿ, ಅಜ್ಜ, ಅಜ್ಜಿಯ ಬಗ್ಗೆ ತಿಳಿದುಕೊಳ್ಳಬೇಕು. ಅವರೆಲ್ಲಾ ಏನು ಮಾಡುತ್ತಿದ್ದಾರೆ? ಮನೆಯ ವಾತಾವರಣ, ಅವರ ಕಷ್ಟ–ಸುಖಗಳ ಬಗ್ಗೆ ತಿಳಿದುಕೊಳ್ಳಲೇಬೇಕು.

3. ಪಾಠಗಳಷ್ಟೇ ಪಠ್ಯೇತರ ಚಟುವಟಿಕೆಗಳಿಗೂ (ಪಾಠಕ್ಕಿಂತಲೂ ಹೆಚ್ಚು ಪಠ್ಯೇತರ ವಿಷಯಗಳಿಗೆ) ಪ್ರಾಶಸ್ತ್ಯ ಕೊಡಬೇಕು.

   ಲೆಕ್ಕ, ಇಂಗ್ಲೀಷ್ ಪಾಠ ಆದನಂತ್ರ ಪಠ್ಯೇತರ ವಿಷಯಗಳನ್ನು ಅಳವಡಿಸಿ ಉದಾ : ಪ್ರತೀ ಎರಡು ಪಾಠದ ವಿಷಯ ಆದನಂತ್ರ ಒಂದು ಪಠ್ಯೇತರ ವಿಷಯ, ಚಿತ್ರ, ವೃತ್ತಿ, ಸಂಗೀತ, ಕಲಿಸಿದರೆ ಮಕ್ಕಳ ಮನಸ್ಸು ಪುನಶ್ಚೇತನಗೊಂಡು ಪುನಃ

ಮುಂದಿನ ಪಾಠಕ್ಕೆ ಆಸಕ್ತಿ ವಹಿಸುವುದು ಕಂಡಿತಾ. ಮಕ್ಕಳಿಗೆ ಪಾಠಕ್ಕಿಂತಲೂ ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿ ಇರುತ್ತದೆ. ಒಂದು ತರಗತಿಯಲ್ಲಿ 40 ವಿದ್ಯಾರ್ಥಿಗಳಿದ್ದರೆ ಕೆಲವರಿಗೆ ಪಾಠದಲ್ಲಿ ಆಸಕ್ತಿ ಇದ್ದರೆ ಕೆಲವು ಮಕ್ಕಳು ಸಂಗೀತದಲ್ಲಿ ಕೆಲವು ಮಕ್ಕಳು ಚಿತ್ರಕಲೆಯಲ್ಲಿ, ಕೆಲವರು ಆಟದಲ್ಲಿ, ಕೆಲವರು ಕೈಗಾರಿಕೆಗಳಲ್ಲಿ ಆಸಕ್ತರಾಗಿರುತ್ತಾರೆ. ಪಠ್ಯೇತರ ವಿಷಯಗಳಲ್ಲಿ ಆಸಕ್ತಿ ಇರುವ ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಅವಕಾಶಕೊಟ್ಟು ಪ್ರೋತ್ಸಾಹ ಕೊಟ್ಟಾಗ ಅವರ ಪ್ರತಿಭೆ ಬೆಳೆಯುದರಲ್ಲಿ ಸಂದೇಹವೇ ಇಲ್ಲ. **"ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವವಳೇ ನಿಜವಾದ ಶಿಕ್ಷಕಿ"**

**"ಪ್ರತಿಭೆಗಳನ್ನು ಪ್ರೋತ್ಸಾಹಿಸುವ ರೀತಿ"** ಉದಾ: **ಚಿತ್ರಕಲೆ**

1. ಚಿತ್ರಕಲಾ ಪಾಠದ ಸಮಯಕ್ಕೆ **ಚಿತ್ರಕಲೆಯನ್ನೇ** ಕಲಿಸಬೇಕು.
2. ಚಿತ್ರಕಲೆ ಗೊತ್ತಿಲ್ಲದ ಶಿಕ್ಷಕಿಯಾದರೂ ಯಾವುದಾದರೊಂದು ವಿಷಯ ಹೇಳಿ ಮಕ್ಕಳಲ್ಲಿ **ಬಿಡಿಸಲು** ಹೇಳಬೇಕು.
3. ಬಿಡಿಸಿದ ಚಿತ್ರದಲ್ಲಿ ಕಾಣುವ ಸಣ್ಣಪುಟ್ಟ ತಪ್ಪುಗಳನ್ನು (ತಾವು ತಿದ್ದಿಕೊಡಬಾರದು) ಮಕ್ಕಳಲ್ಲೇ **ತಿದ್ದಲು** ಹೇಳಬೇಕು.
4. ಉತ್ತಮ ಚಿತ್ರಗಳಿಗೆ **"ಗುಡ್"** ಎಂದು ಬರೆದು 6–7 ಅಂಕ ನೀಡಬೇಕು. ಅತ್ಯುತ್ತಮ ಚಿತ್ರಗಳಿಗೆ 8,9 ಅಂಕ ಕೊಟ್ಟು **"ವೆರಿಗುಡ್"** ಎಂದು ಬರೆದು ಅವರ ಚಿತ್ರಗಳನ್ನು ತರಗತಿಗೆ ಎಲ್ಲಾ ಮಕ್ಕಳು ನೋಡುವಂತೆ ಎತ್ತಿಹಿಡಿದು ಪ್ರದರ್ಶಿಸಬೇಕು.
5. **"ವೆರಿವೆರಿಗುಡ್"** ಬರೆದ ಚಿತ್ರ ಬಿಡಿಸಿದ ವಿದ್ಯಾರ್ಥಿಗಳನ್ನು ನಿಲ್ಲಲು ಹೇಳಿ ಅವರಿಗೆ ಪ್ರೋತ್ಸಾಹಕವಾಗಿ ಎಲ್ಲ ಮಕ್ಕಳಿಂದ ಜೋರಾಗಿ **ಕೈ ಚಪ್ಪಾಳೆ** ತಟ್ಟಿಸಬೇಕು.
6. ಶಾಲೆಯಲ್ಲಿ ಚಿತ್ರವನ್ನು ಪ್ರದರ್ಶಿಸುವ ಒಂದು **ಫಲಕದ** ವ್ಯವಸ್ಥೆ ಮಾಡಿ ಚಿತ್ರ ಬಿಡಿಸಿ ಕೊಟ್ಟು ಮಕ್ಕಳ ಚಿತ್ರವನ್ನು ಶಾಲೆಯ ಎಲ್ಲಾ ಮಕ್ಕಳು ನೋಡಿ ಸಂತೋಷಪಡುವಂತೆ ಪ್ರದರ್ಶಿಸಬೇಕು.
7. ಚಿತ್ರಕಲಾ ಆಸಕ್ತಿ ಇರುವ ಮಕ್ಕಳ ಪೋಷಕರನ್ನು ಕರೆದು ಅವರ ಬಗ್ಗೆ ಪ್ರೋತ್ಸಾಹಕ **ಹೊಗಳಿಕೆ ಮಾತ**ನ್ನು ಹೇಳಿ ಮಕ್ಕಳ ಚಿತ್ರವನ್ನು ಮನೆಯಲ್ಲಿ ಪ್ರದರ್ಶಿಸಲು ಹೇಳಬೇಕು. ಅತಿಥಿಗಳು ಬಂದಾಗ ಮಗು ಬಿಡಿಸಿದ **ಚಿತ್ರವನ್ನು ತೋರಿಸಿ** ಪ್ರೋತ್ಸಾಹಿಸಲು ಹೇಳಬೇಕು.
8. ಶಾಲಾ ವಾರ್ಷಿಕೋತ್ಸವದ ಸಮಯದಲ್ಲಿ – ವಿಶೇಷ ಸಂದರ್ಭಗಳಲ್ಲಿ ಮಕ್ಕಳ **"ಚಿತ್ರಕಲಾ ಪ್ರದರ್ಶನ"** ಏರ್ಪಡಿಸಬೇಕು.
9. ಮಕ್ಕಳಿಂದ **ಹಸ್ತಪತ್ರಿಕೆ** ರಚಿಸಲು ಹೇಳಿ ಅದರಲ್ಲಿ ಸಾಹಿತ್ಯಾಸಕ್ತ ಮಕ್ಕಳ ಆಸಕ್ತಿಗೆ ಸರಿಯಾಗಿ ಕತೆ, ಕವನ – ನಗೆಹನಿ – ಚಿತ್ರಕಲಾಸಕ್ತರಿಂದ ಚಿತ್ರಗಳನ್ನು ಬಿಡಿಸಲು ಹೇಳಿ **"ಉದ್ಘಾಟನಾ"** ಸಮಾರಂಭವಿರಿಸಬೇಕು.

10.ಪತ್ರಿಕೆಗಳಿಗೆ ಉತ್ತಮ **ಚಿತ್ರ**ಗಳನ್ನು ಪ್ರಕಟಿಸಲು ಕಳುಹಿಸಬೇಕು.

11. ತಾಲೂಕು ಮಟ್ಟದ – ಜಿಲ್ಲಾ ಮಟ್ಟದ **ಚಿತ್ರಕಲಾ ಸ್ಪರ್ಧೆ**ಗಳಿದ್ದರೆ ಉತ್ತಮ ಚಿತ್ರ ಬಿಡಿಸುವ ವಿದ್ಯಾರ್ಥಿಗಳನ್ನ ತಮ್ಮ ಖರ್ಚಿನಲ್ಲೇ ಕರೆದೊಯ್ದು ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಮಾಡಬೇಕು. ಸ್ಪರ್ಧೆಯಲ್ಲಿ ಗೆದ್ದರೆ ಅವರನ್ನು ಶಾಲಾ **ಅಸೆಂಬ್ಲಿ**ಯಲ್ಲಿ ವೇದಿಕೆಗೆ ಕರೆಸಿ ಹೊಗಳಿ ಪ್ರಶಸ್ತಿಪದಕಗಳನ್ನು ವಿತರಿಸುವ ವ್ಯವಸ್ಥೆ ಮಾಡಬೇಕು.

**ಒಂದು ಪ್ರತಿಭೆ "ಪ್ರಖ್ಯಾತಿ"ಗೆ ಬರಬೇಕಾದರೆ ಪ್ರತಿಭೆ, ಪ್ರಯತ್ನ, ಪ್ರೋತ್ಸಾಹ, ಪ್ರದರ್ಶನ, ಪ್ರೇಕ್ಷಕ, ಪ್ರಚಾರ ಅತೀ ಅಗತ್ಯ.**

ಇದೇರೀತಿ ಸಂಗೀತ – ಆಟ – ವೃತ್ತಿ ವಿಷಯಗಳಲ್ಲೂ ವಿದ್ಯಾರ್ಥಿಗಳಲ್ಲಿ ಇರುವ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸಿದರೆ ಮಕ್ಕಳ ಪ್ರತಿಭೆ ಪ್ರಖ್ಯಾತಿಗೆ ಬರುವುದಲ್ಲದೆ ಪ್ರತಿಭಾನ್ವಿತ ವಿದ್ಯಾರ್ಥಿಗಳು ಶಿಕ್ಷಕಿಯನ್ನು ತುಂಬಾ ಪ್ರೀತಿಸುತ್ತಾರೆ. ಶಿಕ್ಷಕವೃತ್ತಿ ಪ್ರಾರಂಭಿಸುವ ಮೊದಲು ಮನಸ್ಸಿನಲ್ಲೇ **"ನಾನು ಜೀವನ ಪರ್ಯಂತ ವಿದ್ಯಾರ್ಥಿಯಾಗಿರುತ್ತೇನೆಂದು"** ಪ್ರತಿಜ್ಞೆ ಮಾಡಿಕೊಳ್ಳಬೇಕು. ಪ್ರಪಂಚದಲ್ಲಿ ಎಲ್ಲವನ್ನೂ ತಿಳಿದವ ಎಂದರೆ ಪರಮಾತ್ಮ ಮಾತ್ರ. ನಾವು ದಿನಾಲೂ ಪ್ರತಿಯೊಂದು ವಿಷಯವನ್ನು ಓದುತ್ತಾ, ಕಲಿಯುತ್ತಾ ಇರಬೇಕಾಗುತ್ತದೆ. ನಾವು ದಿನಾ ವಿದ್ಯಾರ್ಥಿಗಳಾಗಿದ್ದರೆ ಮಾತ್ರ ಉತ್ತಮ ಶಿಕ್ಷಕರಾಗಬಹುದು. ಶಿಕ್ಷಕರ ನಡೆ, ನುಡಿಗಳಲ್ಲಿ ಮಾನವೀಯತೆ ಇರಲೇಬೇಕು. ಮಾನವೀಯ ಮೌಲ್ಯ ಬೋಧನೆಮಾಡುವ ಮೊದಲು ಶಿಕ್ಷಕರಾದವರು ತಾವು ಮಾನವೀಯ ಮೌಲ್ಯದಿಂದ ಜೀವನ ನಡೆಸಲು ಕಲಿಯಬೇಕು. ಬಳಿಕ ಬೋಧಿಸಬೇಕು. **ಕಾಯಾ, ವಾಚಾ, ಮನಸಾ ಪರಿಶುದ್ಧರಾಗಿರಬೇಕು.**

**ಕಾಯಾ :** ಶಿಕ್ಷಕರು ದೇಹದಾರ್ಢ್ಯ ಹೊಂದಿರಬೇಕು. ಎತ್ತರವಾಗಿ ದಷ್ಟಪುಷ್ಟರಾಗಿ ಇದ್ದಾಗ ವಿದ್ಯಾರ್ಥಿಗಳು ಸ್ವಾಭಾವಿಕವಾಗಿ ಗೌರವಿಸುತ್ತಾರೆ. ಹಾಗಾಗಿ ಶಿಕ್ಷಕರು ದಿನಾ ಯೋಗಾಸನ ನಿಯಮಿತ ಪೌಷ್ಟಿಕ ಆಹಾರ ಸೇವಿಸುತ್ತಾ, ನೀರುಚಿಕಿತ್ಸೆ ದಿನಾ ಮಾಡಬೇಕು. ನೀರು ಚಿಕಿತ್ಸೆ ಎಂದರೆ ಬೆಳಿಗ್ಗೆ ಎದ್ದ ಕೂಡಲೇ 4–5 ಲೋಟ ನೀರು ಕುಡಿಯಬೇಕು. ದಿನಕ್ಕೆ 4 ಲೀಟರ್ ನೀರು ಕುಡಿಯಲೇಬೇಕು. ಸರಿಯಾದ ಸಮಯದಲ್ಲಿ ಊಟ, ನಿದ್ರೆ, ತಿಂಡಿ ಮಾಡುತ್ತಿದ್ದು ದಿನಾ ತರಕಾರಿ, ಹಣ್ಣು ತಿನ್ನಲೇಬೇಕು. ಆವಾಗ ಬೋಧನೆಯಲ್ಲಿ ಆಸಕ್ತಿ ಶಿಸ್ತು ಇರುತ್ತದೆ. ಮಕ್ಕಳು ಶಿಕ್ಷಕರನ್ನು ಅನುಸರಿಸಿ ಆರೋಗ್ಯ ಪ್ರಜೆಗಳಾಗುವುದರಲ್ಲಿ ಸಂದೇಹವೇ ಇಲ್ಲ.

**ವಾಚಾ** : ಮಾತು ಬಲ್ಲವನಿಗೆ ಜಗಳವಿಲ್ಲ. **"ಮಾತು ಆಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು" "ಮಾತು ಬಂಗಾರ ಮೌನ ಬೆಳ್ಳಿ"** ಹೀಗೆ ಮಾತಿನ ಬಗ್ಗೆ ನೂರಾರು ಗಾದೆಗಳು, ಶುಭಾಷಿತಗಳಿವೆ. ಈ ಗಾದೆಗಳಿರುವುದು ಬೇರೆಯವರಿಗೆ ಹೇಳಲು ಅಲ್ಲ. ನಾವು ಅನುಸರಿಸಲು. ಹಾಗಾಗಿ ಶಿಕ್ಷಕರಾದವರು ಮಾತಿನ ಬಗ್ಗೆ ತುಂಬಾ ತಿಳಿದುಕೊಳ್ಳಬೇಕು.

ನಾವು ಹೇಗೆ **ಸೌಜನ್ಯಯುತವಾಗಿ, ಮೃದುವಾಗಿ, ಮಿತವಾಗಿ, ಹಿತವಾಗಿ** ಮಾತನಾಡುತ್ತೇವೆ ಎಂದು ವಿದ್ಯಾರ್ಥಿಗಳು ಗಮನಿಸುತ್ತಾರೆ. ಬಳಿಕ ಅವರೂ ಅನುಸರಿಸುತ್ತಾರೆ. ಇಂಗ್ಲೀಷಿನಲ್ಲಿ ಮೂರು ಶಬ್ದಗಳು ಅತ್ಯುತ್ತಮ ನಿದರ್ಶನವಾಗಿದೆ. **Thanks, Sorry, Please** ಈ ಮೂರು ಶಬ್ದ ಎಲ್ಲರ ಬಾಯಿಯಲ್ಲಿ ಸಂದರ್ಭಕ್ಕೆ ಸರಿಯಾಗಿ ಬರುತ್ತಿರಬೇಕು. ಇದು ನಮ್ಮ ಗುಣನಡತೆ ವರ್ತನೆಗಳನ್ನು ಮೇಲಕ್ಕೆ ಒಯ್ಯುತ್ತದೆ. ಸ್ವಾಭಾವಿಕವಾಗಿ ಇನ್ನೊಬ್ಬರು ನಮ್ಮನ್ನು ಗೌರವಿಸುತ್ತಾರೆ. ನನ್ನ ಒಬ್ಬ ಆತ್ಮೀಯ ಗೆಳೆಯ ಸೈಂಟ್ ಲಾರೆನ್ಸ್ ಹೈಸ್ಕೂಲಿನಲ್ಲಿ ಇದ್ದ. ನಾನು ಅವನನ್ನು ತುಂಬಾ ಪ್ರೀತಿಸುತ್ತಿದ್ದೆ. ಅವನೂ ನನ್ನನ್ನು ತುಂಬಾ ಪ್ರೀತಿಸುತ್ತಿದ್ದ. ನಾನು ಅವನ ಮನೆಯಲ್ಲಿ ಅವನು ನನ್ನ ಮನೆಯಲ್ಲಿ 2–3 ದಿವಸ ಜೊತೆಯಾಗಿ ಕಳೆದದ್ದೂ ಉಂಟು. ನನ್ನ ನಿವೃತ್ತಿ ಜೀವನದ ತನಕವೂ ನಾನೂ ಅವನು ಅನ್ಯೋನ್ಯವಾಗಿ ಇದ್ದೆವು. ನಿವೃತ್ತಿ ಸಮಯ ನನಗೆ ಹೃದಯಾಘಾತವಾಗಿ ರಕ್ತಬೇಕಾದಾಗ ಅವನು ರಕ್ತವನ್ನು ಬೇರೆಯವರಿಂದ ಕೊಡಿಸಿದ್ದ. ನನ್ನ ಮಗನ ಪದವಿ ಮುಗಿಸಲು ಅವನ ಮಗಳೇ (10 ದಿನ ಕೋಚ್ ಮಾಡಿ) ಕಲಿಸಿ ನನ್ನ ಮಗ ಪದವಿ ಮುಗಿಸುವಂತಾಯ್ತು. ಇದು ಅವನಿಗೆ ಮತ್ತು ನನಗಿರುವ ಪ್ರೀತಿಯ ಬಾಂಧವ್ಯ. ಆದರೆ ನಿವೃತ್ತಿ ಸಮಯ ನಾನು ಅವನ ಮನೆಯಲ್ಲಿ ನಾಲ್ಕು ತಿಂಗಳು (ಪಿ.ಜಿ.) ಪೇಯಿಂಗ್ ಗೆಸ್ಟ್ ಆಗಿ ಸಂತೋಷವಾಗಿದ್ದೆ. ಸ್ವಲ್ಪ ಸಮಯದ ಬಳಿಕ ಮನ ನೋಯುವಂತೆ ನನ್ನಲ್ಲಿ ಕೆಲವು ಮಾತನಾಡಲು ತೊಡಗಿದ. ಒಂದು ದಿನ ನನ್ನನ್ನು ಹೀನಾಯವಾಗಿ ಹೃದಯಕ್ಕೆ ಚುಚ್ಚುವಂತೆ ಮಾತನಾಡಿದ. ಆ ಮೂರೇ ಮಾತು ನನ್ನ ಮನಸ್ಸಿನಲ್ಲಿ ಅಚಲವಾಗಿ ಉಳಿದು ಬಿಟ್ಟಿದೆ. ಅಂದೇ ನಾನು ಮತ್ತು ಅವನ ಸ್ನೇಹ ಗೆಳೆತನಕ್ಕೆ ಪೂರ್ಣವಿರಾಮ ಹೇಳಿದೆ. **"ದೇಹಕ್ಕೆ ಆದ ಗಾಯ ಮಾಸಬಹುದು, ಮನಸ್ಸಿಗಾದ ಮಾತಿನ ಗಾಯ ಮಾಸಲೇ ಇಲ್ಲ"** ಆದುದರಿಂದ ಮನುಷ್ಯನಾದವನಿಗೆ ನಾಲಿಗೆ ಶುದ್ಧವಾಗಿರಬೇಕು. ಶಿಕ್ಷಕರು ಎಂದಿಗೂ ವಿದ್ಯಾರ್ಥಿಗಳಿಗೆ ಬೈಯುವುದಾಗಲಿ, ಹೀಯಾಳಿಸುವುದಾಗಲಿ, ಸಾಮೂಹಿಕ ಅವಹೇಳನದ ಮಾತುಗಳನ್ನು ಆಡಲೇಬಾರದು. ಹಾಗೇನಾದರೂ ಶಿಕ್ಷಕರು ಮಾಡಿದರೆ ಜೀವನ ಪರ್ಯಂತ ವಿದ್ಯಾರ್ಥಿ ಅಂತಹ ಅಧ್ಯಾಪಕರ ಬಗ್ಗೆ ಅಸಹ್ಯಪಡುತ್ತಾನೆ. ಅಲ್ಲದೆ ಅವರು ಹೇಳಿದ ಯಾವ ವಿಷಯವೂ ಬೇಡವಾಗಿರುತ್ತದೆ. ಅವರು ಕಲಿಸುವ ವಿಷಯದಲ್ಲಿ ದಡ್ಡನಾಗುತ್ತಾ ಹೋಗುತ್ತಾನೆ. (ಉದಾ: ನಾನು ಶಿರ್ವ ಸೈಂಟ್ ಮೇರೀಸ್ ಹೈಸ್ಕೂಲಿನಲ್ಲಿ ಪ್ರೌಢಶಿಕ್ಷಣ ಅಭ್ಯಾಸ ಮಾಡುತ್ತಿದ್ದ ವೇಳೆ ಶ್ರೀಯುತ ಗಣಪತಿ ಪ್ರಭುಗಳು ಇಂಗ್ಲೀಷ್ ಬೋಧಕರಾಗಿ ಇದ್ದರು. (ಎಂಟನೇ ತರಗತಿಗೆ) ಅಂದು ಇಂದಿನಂತಲ್ಲ ಬೆತ್ತದಿಂದಲೇ ಶಿಕ್ಷಣ. ಶಿಕ್ಷೆಯೊಂದೇ ಶಿಕ್ಷಣದ ಕ್ರಮವಾಗಿತ್ತು. ಇವರು ತುಂಬಾ ಶಿಸ್ತುಬದ್ಧ ಶಿಕ್ಷಕರು ತಪ್ಪಿದರೆ ತುಂಬಾ ಶಿಕ್ಷೆ ಕೊಡುತ್ತಿದ್ದರು. ಇಂಗ್ಲೀಷ್ ಪ್ರಥಮ ಪಾಠದಿಂದಲೂ ಇವರನ್ನು ಕಂಡರೆ ತುಂಬಾ ಹೆದರುತ್ತಿದ್ದೆ. ಬರಬರುತ್ತಾ ಇಂಗ್ಲೀಷ್ ಕಷ್ಟವಾಗುತ್ತಾ ಬಂತು. ಯಾವುದನ್ನು ಅವರು ಹೇಳಿದರೂ ಹೆದರಿಕೆಯಿಂದ ಅರ್ಥ ಆಗುವುದಿಲ್ಲವಾಯ್ತು. ಆದುದರಿಂದಲೇ ನಾನು ಇಂಗ್ಲೀಷ್‌ನಲ್ಲಿ ದಡ್ಡನಾಗುತ್ತಾ ಹೋದೆ.

## ಜಿ.ಆರ್. ಉಪಾಧ್ಯಾಯರ (ವಿ)ಚಿತ್ರ ಜೀವನ

ನೀತಿ ಪಾಠ : ಪ್ರಾಥಮಿಕ ಹಂತದಲ್ಲಿ ನಾನು ಅಭ್ಯಾಸ ಮಾಡುತ್ತಿರುವಾಗ 1950–60 ಇಸವಿ ಸಮಯ ನೀತಿಪಾಠವೂ ಉಳಿದ ಪಾಠಗಳಂತೆ ಅತೀ ಮುಖ್ಯವಾಗಿತ್ತು. 2012–13ರಲ್ಲಿಯ ಸಮಯದ ದಿನ ಪತ್ರಿಕೆಗಳನ್ನು ಕಂಡಾಗ ನನಗೆ ದುಃಖವಾಗುತ್ತಿದೆ. ದಿನಪತ್ರಿಕೆಗಳ ಮೊದಲ ಪುಟದ ವಾರ್ತೆಗಳು ಎಂದರೆ 2–3ವರ್ಷದ ಬಾಲಕಿಯ (ಮಗುವಿನ) ಮೇಲೆ 50 ವರ್ಷದ ವ್ಯಕ್ತಿಯಿಂದ ಅತ್ಯಾಚಾರ, ಬೆಂಗಳೂರು ನಗರ ಪ್ರದೇಶದಲ್ಲಿ ಮಧ್ಯಾಹ್ನ 12 ಗಂಟೆಗೆ ದುಷ್ಕರ್ಮಿಗಳಿಂದ ಮಚ್ಚು ಕತ್ತಿಯಿಂದ ಮಧ್ಯರಸ್ತೆಯಲ್ಲಿ ಕೊಚ್ಚಿ ಕೊಚ್ಚಿ ಕೊಲೆ, ಅಧಿಕಾರಿಗಳ ಮನೆಯಲ್ಲಿ ಲೋಕಾಯುಕ್ತ ದಾಳಿಯಿಂದ ಭ್ರಷ್ಟಾಚಾರದ ಕೋಟಿಗಟ್ಟಲೆ ಹಣ ಹಾಗೂ ಆಸ್ತಿ ಪತ್ತೆ, ಆಭರಣದ ಅಂಗಡಿಯಲ್ಲಿ ಹಗಲು ದರೋಡೆ, ಮಧ್ಯಾಹ್ನ 12 ಗಂಟೆಗೆ ಹೆಣ್ಣು ಮಗಳು ದಾರಿಯಲ್ಲಿ ನಡಕೊಂಡು ಹೋಗುವ ಸಮಯ ಕರಿಮಣಿ ಕಸಿದು ಪರಾರಿ, ಕಾರ್ಖಾನೆಗೆ ಬೆಂಕಿ ಹಚ್ಚಿ ಅಗ್ನಿ ದುರಂತದಿಂದ ಕೋಟಿಗಟ್ಟಲೆ ನಷ್ಟ ದುಷ್ಕರ್ಮಿಗಳಿಂದ ಕೃತ್ಯ, ಜಾತಿ ಕಲಹದಿಂದ ಗಲಾಟೆ, ಲಾಠಿ ಪ್ರಹಾರ, ಪ್ರತಿಭಟನೆ ಹೀಗೆ ಹತ್ತು ಹಲವು ಇಂತಹ ವಾರ್ತೆಗಳನ್ನು ಓದುವಾಗ 50–60ವರ್ಷದ ಹಿಂದಿನ ಭಾರತದ ಸಂಸ್ಕೃತಿ ಪರಂಪರೆ ಎಷ್ಟೊಂದು ಸುಂದರವಾಗಿತ್ತು. ಈಗ ಎಷ್ಟೊಂದು ಅಸಹ್ಯವಾದ ಪರಿಸ್ಥಿತಿಗೆ ನಾವು ಬಂದಿದ್ದೇವೆ ಎಂದು ದುಖಃವಾಗುತ್ತಿದೆ. ಇದಕ್ಕೆಲ್ಲಾ ಕಾರಣ ನಮ್ಮ ಈಗಿನ ಶಿಕ್ಷಣ ಪದ್ಧತಿ. “ಪ್ರಾಥಮಿಕ ಶಿಕ್ಷಣವೇ ಜೀವನದ ಶಿಕ್ಷಣ” ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. 10 ವರ್ಷದ ಒಳಗಿನ ಮಕ್ಕಳಲ್ಲಿ ನಾವು ನೀತಿಪಾಠ, ಮಾನವೀಯ ಸತ್ಯ, ಧರ್ಮ, ನೀತಿನಿಯಮ, ಶಿಸ್ತು, ನೀತಿಕಥೆ, ಸತ್ಕಾರ್ಯ, ಸಹಾಯ, ಸಹಬಾಳ್ವೆ, ಸಮಯಪ್ರಜ್ಞೆ, ಗುರುಹಿರಿಯರಲ್ಲಿ ಗೌರವ ಪ್ರೀತಿ, ವಿಶ್ವಾಸ, ಪ್ರಾಣಿಪ್ರೇಮ, ಭಕ್ತಿ, ದೇಶಪ್ರೇಮ ಇವುಗಳ ಬಗ್ಗೆ ತಿಳಿಸಿದರೆ ಮಕ್ಕಳು ಜೀವನಪರ್ಯಂತ ಎಂದಿಗೂ ಮರೆಯುವುದಿಲ್ಲ. ನೀತಿಪಾಠ ಇಲ್ಲದೆ ಬೆಳೆದ ಮಕ್ಕಳು–ಜಾತಿ ಬೇಧದ ಈಗಿನ ವಿದ್ಯಾಭ್ಯಾಸದಿಂದಾಗಿ ಅನ್ಯಾಯ, ಅತ್ಯಾಚಾರ, ಅನಾಚಾರ ಮಾಡುತ್ತಿರುವುದು ಖಂಡಿತಾ. ನನ್ನ ಅನಿಸಿಕೆ ಪ್ರಕಾರ ಚೈತನ್ಯವಿಲ್ಲದ ಖಾಲಿ ಪೆಟ್ಟಿಗೆಗಳನ್ನು ನಾವು ತಯಾರಿಸುತ್ತಿದ್ದೇವೆ. ಜೀವನಕ್ಕೆ – ಉದ್ಯೋಗಕ್ಕೆ ಬೇಕಾದ ಶಿಕ್ಷಣಪದ್ಧತಿ ಬಂದರೆ ನಮ್ಮ ದೇಶದ ನಿರುದ್ಯೋಗ ಸಮಸ್ಯೆ ಪೂರ್ಣ ನಿಲ್ಲುತ್ತದೆ. ಕರೆಂಟ್, ಸೆಟ್‌ಲೈಟ್ ಇಲ್ಲದಿದ್ದರೆ ನಮ್ಮ ದೇಶದ 99% ಜನ ಉದ್ಯೋಗವಿಲ್ಲದೆ ತೊಳಲಾಡುವ ಪರಿಸ್ಥಿತಿ ಇದೆ ಎಂಬುದನ್ನು ನಮ್ಮ ರಾಜಕೀಯ ನಾಯಕರು, ಶಿಕ್ಷಣತಜ್ಞರು ಶಿಕ್ಷಣಮಂತ್ರಿಗಳು ತಿಳಿದುಕೊಂಡರೆ ನಮ್ಮ ದೇಶ ಪ್ರಪಂಚದಲ್ಲೇ ಅತ್ಯುತ್ತಮ ಶ್ರೀಮಂತ ದೇಶ ಅನಿಸಿಕೊಳ್ಳುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. 70 ವರ್ಷದ ನನಗೆ ಈಗಲೂ ಸುಳ್ಳು ಹೇಳುವುದಕ್ಕೆ, ಮೋಸಮಾಡುವುದಕ್ಕೆ, ಮಾತು ತಪ್ಪುವುದಕ್ಕೆ ಹೆದರಿಕೆಯಾಗುತ್ತದೆ. ಸಣ್ಣವನಿರುವಾಗ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿ ಹೇಳಿದ ಸತ್ಯ ಹರಿಶ್ಚಂದ್ರನ ಕಥೆ, ಪುಣ್ಯಕೋಟಿಯ ಕಥೆ ಕಾರಣ. ನಮ್ಮ ಈಗಿನ ಶಿಕ್ಷಣ ಪದ್ದತಿಗಳಿಂದಲಾಗಿ, ಜಾತಿಪದ್ಧತಿ, ಶಿಕ್ಷಣದಿಂದಲಾಗಿ ಪ್ರತಿಭಾವಂತ ವಿದ್ಯಾರ್ಥಿಗಳು ಪರದೇಶಕ್ಕೆ ಹೋಗಿ ಜೀವನ ಕಳೆಯುವಂತೆ ಆಗಿದೆ. ಶಿಕ್ಷೆ ಇಲ್ಲದ ಶಿಕ್ಷಣದಿಂದಲಾಗಿ ನಾವೆಲ್ಲಾ ಅವನತಿಯ ದಾರಿಯನ್ನು ಹಿಡಿಯುತ್ತಿದ್ದೇವೆ. ಶಿಕ್ಷಕರಿಗೆ ಗೌರವ ಇಲ್ಲವಾಗಿದೆ.

## ಸೂರ್ಯೋದಯದ ನಂತರ ಏಳುವುದರಿಂದ ದಾರಿದ್ರ್ಯ ಪ್ರಾಪ್ತಿ

**ನೀತಿ ಪಾಠ** : ಪ್ರತೀ ಶಿಕ್ಷಕ ಶಿಕ್ಷಕಿ 200–300 ಪುಟದ ಪುಸ್ತಕವೊಂದನ್ನು ಇರಿಸಿಕೊಂಡು ಮಾನವೀಯತೆಗೆ ಸಂಬಂಧಿಸಿದ ಕಥೆಗಳನ್ನು (ಸಂಗ್ರಹಿಸಿ) ಬರೆದು ಇಡಬೇಕು. ನೀತಿ ಪಾಠಕ್ಕೆ ಸಂಬಂಧಿಸಿದ ಪದ್ಯಗಳನ್ನು ಬರೆದಿಟ್ಟುಕೊಂಡು ಮಕ್ಕಳ ಬಿಡುಸಮಯದಲ್ಲಿ ತರಗತಿಗೆ ಹೋಗಿ ಕಥೆ ಕವನ ಹೇಳಿದರೆ ಶಿಕ್ಷಕರನ್ನು ತುಂಬಾ ಪ್ರೀತಿಸುತ್ತಾರೆ. ಅಲ್ಲದೆ ಜೀವನಪರ್ಯಂತ ನೀತಿ, ಸತ್ಯ, ಧರ್ಮದಿಂದ ಬಾಳುತ್ತಾರೆ.

**ಶಿಕ್ಷಕರ ಉಡುಪು** : ಶಿಕ್ಷಕರಾದವರು ಶುಭ್ರವಾದ, ಶುಚಿಯಾದ ಉಡುಪು ಧರಿಸಿಕೊಂಡೇ ಶಾಲೆಗೆ ಹೋಗಬೇಕು. ಉಡುಪು ಶುದ್ಧವಾಗಿದ್ದರೆ ಸಮಾಜ ನಮ್ಮನ್ನು ಗೌರವಿಸುತ್ತದೆ. ಶಿಕ್ಷಕರು ಸಮಾಜದ ವಿದ್ಯಾರ್ಥಿಗಳ ಗೌರವಕ್ಕೆ ಪಾತ್ರರಾಗಬೇಕು. ಶಿಕ್ಷಕ ಶಿಕ್ಷಕಿಯರು ಬಣ್ಣ ಬಣ್ಣದ ಚಿತ್ರ ವಿಚಿತ್ರದ ಡಿಸಾಯನ್ ಇರುವ ಉಡುಪನ್ನು ಶಾಲೆಗೆ ಬರುವಾಗ ಧರಿಸಿದರೆ ಅವರ ಉಡುಪನ್ನೇ ಮಕ್ಕಳು ನೋಡುತ್ತಿರುತ್ತಾರೆ. ಪಾಠದ ಲಕ್ಷ್ಯ ಕಡಿಮೆಯಾಗುತ್ತದೆ ಅಲ್ಲದೆ ಗೌರವವೂ ಕಡಿಮೆಯಾಗುತ್ತದೆ.

**ಶಾಲೆಯಲ್ಲಿ ನಡೆಯುವ ಎಲ್ಲಾ ಸಭೆ ಸಮಾರಂಭಗಳಲ್ಲಿ ಸಮರ್ಥರಾಗಿ ಭಾಗವಹಿಸುವುದು** : ಇದು ವಿದ್ಯಾರ್ಥಿಗಳ ಪ್ರೀತಿ ವಿಶ್ವಾಸಗಳಿಸಿಕೊಳ್ಳಲು ಶಿಕ್ಷಕರು ಮಾಡಲೇಬೇಕಾದ ಕರ್ತವ್ಯ. ಸಭೆ ಸಮಾರಂಭಗಳಲ್ಲಿ ಅಲಂಕಾರ ಮಾಡುವ ಕೆಲಸ – ತಿಂಡಿ ತಿನಿಸು ತಯಾರಿಸುವ ಕೆಲಸ – ವಿತರಿಸುವ ಕೆಲಸ – ಮನೋರಂಜನೆಗೆ ತರಬೇತಿ ನೀಡುವ ಕೆಲಸ (ನೃತ್ಯ–ನಾಟಕ) ಕಾರ್ಯಕ್ರಮ ನಿಯೋಜನೆಯ ಕೆಲಸ – ರಂಗ ಸಜ್ಜಿಕೆಯ ಕೆಲಸ – ಮೇಕಪ್, ವೇಷ ಭೂಷಣಗಳ ಕೆಲಸ – ಹೀಗೆ ಹತ್ತು ಹಲವು ಕಾರ್ಯಕ್ರಮಗಳು ಇರುತ್ತವೆ. ಇವುಗಳನ್ನು ಎಲ್ಲವನ್ನೂ ಸ್ವಲ್ಪಮಟ್ಟಿಗಾದರೂ ತಿಳಿದುಕೊಂಡು, ಗೊತ್ತಿಲ್ಲದಿದ್ದರೆ ತಿಳಿದವರಲ್ಲಿ ಶಾಲೆಗೋಸ್ಕರ ತನ್ನ ವಿದ್ಯಾರ್ಥಿಗಳಿಗೋಸ್ಕರ ತಿಳಿದುಕೊಳ್ಳಲೇಬೇಕು. ವಿದ್ಯಾರ್ಥಿಗಳಿಗೆ ಎಲ್ಲಾ ಕಾರ್ಯದಲ್ಲಿ ಸೇರಿ ಸಹಾಯ ಮಾಡುವ, ಮಾರ್ಗದರ್ಶನ ನೀಡುವ ಅಧ್ಯಾಪಕರನ್ನು ವಿದ್ಯಾಥಿಗಳು ತುಂಬಾ ಪ್ರೀತಿಸುತ್ತಾರೆ.

**ಸೌಂದರ್ಯ ಪ್ರಜ್ಞೆ**: ಶಿಕ್ಷಕ ಶಿಕ್ಷಕಿಯರಲ್ಲಿ ಇರುವ ಸೌಂದರ್ಯಪ್ರಜ್ಞೆಯು ಮಕ್ಕಳ ಪ್ರೀತಿಗೆ ಕಾರಣವಾಗುತ್ತದೆ. ಶಿಕ್ಷಕರನ್ನು ವಿದ್ಯಾರ್ಥಿಗಳು ಗಮನಿಸುತ್ತಾ ಇರುತ್ತಾರೆ, ಹಾಗಾಗಿ ಶಿಕ್ಷಕರಾದವರು ತಮ್ಮ ಪುಸ್ತಕಗಳನ್ನು ಶಿಸ್ತುಬದ್ಧವಾಗಿ ಜೋಡಿಸಿ ಇಡಬೇಕು.. ಶಾಲಾ ಪರಿಸರದಲ್ಲಿ ಕಸಕಡ್ಡಿ ಹಾಕದಂತೆ ಮಕ್ಕಳಲ್ಲಿ ಹೇಳಿ ಅದನ್ನು ಶುಚಿಗೊಳಿಸಬೇಕು, ಶಾಲೆಯ ತರಗತಿಗಳಲ್ಲಿ ಜೇಡರಬಲೆ ಇಲ್ಲದಂತೆ ನೋಡಿಕೊಳ್ಳಬೇಕು. ಶಾಲಾ ಗೋಡೆಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಚಿತ್ರಗಳನ್ನು ಶುಭಾಷಿತಗಳನ್ನು ಬರೆಸಬೇಕು, ಶಾಲಾ ಹೂ ತೋಟದಲ್ಲಿ ಹೂಗಳು ಇರುವಂತೆ ಕ್ರಾಟನ್ ಗಿಡಗಳು ಚಂದವಾಗಿ ಕಾಣುವಂತೆ ಕತ್ತರಿಸುವ ವ್ಯವಸ್ಥೆ ಮಾಡುವುದು ವಿದ್ಯಾರ್ಥಿಗಳಿಗೆ ಕುಶಿಕೊಡುವ ವಿಷಯವಾಗಿದೆ. ಎಲ್ಲದಕ್ಕಿಂತಲೂ ಮುಖ್ಯವಾಗಿ **ಶಿಕ್ಷಕರಾದವರ ಅಕ್ಷರ ಅತೀ ಸುಂದರವಾಗಿರಬೇಕು.** ಶಿಕ್ಷಕರು ಕರಿಹಲಗೆಯಲ್ಲಿ ಸುಂದರ ಅಕ್ಷರದಿಂದ ಬರೆದಾಗ ವಿದ್ಯಾರ್ಥಿಗಳೂ ಅದೇ

ರೀತಿ ಸುಂದರವಾಗಿ ಬರೆಯಲು ಪ್ರಯತ್ನಿಸುತ್ತಾರೆ, ಬಳಿಕ ಅದೇ ರೀತಿ ಸುಂದರವಾಗಿ ಬರೆಯುತ್ತಾರೆ, ಹೀಗೆ ಸೌಂದರ್ಯಪ್ರಜ್ಞೆಯ ಅದ್ಯಾಪಕರನ್ನು ವಿದ್ಯಾರ್ಥಿಗಳು ತುಂಬಾ ಪ್ರೀತಿಸುತ್ತಾರೆ. ಪರಿಸರ ಶುದ್ಧ ಎಂಬುದು ಮಾನವೀಯ ಮೌಲ್ಯವನ್ನು ಪ್ರತಿ ಬಿಂಬಿಸುತ್ತದೆ.

**ಶುಭಾಷಿತಗಳು** : ಶಿಕ್ಷಕರಾದವರು ಹತ್ತು ಹಲವು ಶುಭಾಷಿತಗಳನ್ನು ಸಂಗ್ರಹಿಸಿ ಇಡುವ, ಬರೆದಿಟ್ಟುಕೊಳ್ಳುವ ಹವ್ಯಾಸ ಬೆಳೆಸಿಕೊಳ್ಳಬೇಕು. ಪ್ರತಿದಿನ ಪ್ರತೀ ತರಗತಿಯಲ್ಲಿ ಒಂದು ಶುಭಾಷಿತ ಕರಿಹಲಗೆಯಲ್ಲಿ ಬರೆಯುವಂತೆ ವಿದ್ಯಾರ್ಥಿಗಳಿಗೆ ತಿಳಿಸಿ ಅದರ ಬಗ್ಗೆ ತರಗತಿಗೆ ಹೋದಾಗ ವಿವರಣೆ ನೀಡಿದರೆ ಮಕ್ಕಳ ಮುಗ್ದ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿಯುತ್ತದೆ. ಎಲ್ಲಾ ಶುಭಾಷಿತಗಳೂ ಮಾನವೀಯ ಮೌಲ್ಯಕ್ಕೆ ಒತ್ತು ನೀಡುವುದರಿಂದ ಶಿಕ್ಷಕರಾದವರ ಅತೀ ಮುಖ್ಯವಾದ ಕರ್ತವ್ಯ ಎಂದು ತಿಳಿದಿರಬೇಕು. ಶುಭಾಷಿತ ಓದಿಓದಿ ಮಕ್ಕಳೂ ತಮ್ಮ ಜೀವನದಲ್ಲಿ ಅದನ್ನು ಅಳವಡಿಸುವುದರಲ್ಲಿ ಸಂದೇಹವೇ ಇಲ್ಲ.

**ಹಸನ್ಮುಖ** : **"ನಗುತ ನಗಿಸುತ ಬಾಳಿದರೆ ಅದುವೇ ಸ್ವರ್ಗ"** ಎಂಬಂತೆ ಸದಾ ಹಸನ್ಮುಖಿಗಳಾಗಿ ಶಿಕ್ಷಕರು ಇರಬೇಕು. ಆವಾಗ ವಿದ್ಯಾರ್ಥಿಗಳು ನಿಮ್ಮನ್ನು ಪ್ರೀತಿಸುವುದು ಅಲ್ಲದೆ ನೀವು ಯಾವ ಕೆಲಸ ಹೇಳಿದರೂ ಸಂತೋಷದಿಂದ ನಗುನಗುತ್ತಾ ಮಾಡುತ್ತಾರೆ. ಖಂಡಿತಾ ನೀವು ಸಿಟ್ಟಿನಲ್ಲಿ ಗದರಿಸಿ ಮಾಡಿಸಿದ ಯಾವ ಕೆಲಸವೂ ನಿಮ್ಮ ಮನಸ್ಸಿಗೆ ಸರಿಯಾಗಿ ಆಗುವುದಿಲ್ಲ. ವಿದ್ಯಾರ್ಥಿಗಳು ನಿಮ್ಮ ಹತ್ತಿರ ಬಂದು ಸುಖ-ಕಷ್ಟ ಹೇಳಿಕೊಳ್ಳಬೇಕಾದರೆ ನಿಮ್ಮನ್ನು ಹೆಚ್ಚು ಪ್ರೀತಿಸಬೇಕಾದರೆ ನಿಮ್ಮ ಕೆಲಸಗಳೆಲ್ಲಾ ನೀವು ಅನಿಸಿದಂತೆ ಆಗಬೇಕಾದರೆ, ನೀವು ಇತರರಿಂದ ಬೈಯಿಸಿಕೊಳ್ಳಬಾರದಾದರೆ, ನಿಮಗೆ ಒಳ್ಳೆಯ ಶಿಕ್ಷಕ ಎಂಬ ಹೆಸರು ಬರಬೇಕಾದರೆ ಜೀವನ ಪರ್ಯಂತ ಆರೋಗ್ಯವಂತರಾಗಿ ಇರಬೇಕಾದರೆ, ಎಷ್ಟೇ ಕಷ್ಟ ಬಂದರೂ ಎಲ್ಲಾ ಸಂದರ್ಭದಲ್ಲೂ ಮಂದಹಾಸದಲ್ಲಿ ಇರಬೇಕು. ಸಮಾಜ, ಬಂಧು ಭಾಂದವರು, ಸಹೋದ್ಯೋಗಿಗಳು, **ವಿದ್ಯಾರ್ಥಿಗಳು ಪ್ರೀತಿಸಿ ಗೌರವಿಸಬೇಕಾದರೆ ಸದಾ ಹಸನ್ಮುಖದಿಂದ ಇರಿ.**

**ಸಮಯ ಪ್ರಜ್ಞೆ** : ಸಮಯಪ್ರಜ್ಞೆ ಇಲ್ಲದ ಅಧ್ಯಾಪಕನಾದವನು ಶಿಕ್ಷಕ ವೃತ್ತಿಯನ್ನು ಮಾಡಲೇಬಾರದು. ಜೀವನದ ಅತೀ ಮುಖ್ಯವಾದ, ಆರೋಗ್ಯಕ್ಕೆ ಕಾರಣವಾದ, ಗೌರವಕ್ಕೆ ಯೋಗ್ಯವಾದ ವಿಷಯ ಸಮಯಪ್ರಜ್ಞೆ, ಸಮಯ ಪ್ರಜ್ಞೆ ಎಂಬುದು ಶಿಕ್ಷಕರಾದವರಿಗೆ ಮಾತ್ರವಲ್ಲ, ಎಲ್ಲರಿಗೂ ಅತೀ ಅಗತ್ಯ. ಶಿಕ್ಷಕರಂತೂ ಸಮಯ ಪರಿಪಾಲಿಸಲೇಬೇಕು. ಶಾಲೆಗೆ ಸಮಯಕ್ಕೆ ಸರಿಯಾಗಿ ಬಂದರೆ ಮಕ್ಕಳೂ ಸಮಯ ಪರಿಪಾಲನೆ ಮಾಡುತ್ತಾರೆ. ನಾವು ಸಮಯಕ್ಕೆ ಸರಿಯಾಗಿ ಶಾಲೆಗೆ ಬಾರದಿದ್ದರೆ ಕೆಲಸಗಳನ್ನು ಮಾಡದಿದ್ದರೆ ವಿದ್ಯಾರ್ಥಿಗಳಿಗೆ ಸಮಯಪ್ರಜ್ಞೆಯ ಬಗ್ಗೆ ಹೇಳುವ ನೈತಿಕ ಹಕ್ಕನ್ನು ಕಳಕೊಳ್ಳುತ್ತೇವೆ. **ಪ್ರತಿಯೊಂದು ಕೆಲಸ ಮಾಡುವಾಗಲೂ ಸಮಯಪ್ರಜ್ಞೆ ಅತೀ ಅಗತ್ಯ.**

# ಬಲ್ಮಠ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ 17 ವರ್ಷ

## (1983ರಿಂದ 2000 ತನಕ)

**ಮರೆಯಲಾರದ ಪ್ರವಾಸ ಘಟನೆಗಳು:** ಶಿಕ್ಷಕ ತರಬೇತಿ ಸಂಸ್ಥೆಯ ಟಿ.ಸಿ.ಎಚ್ ವಿದ್ಯಾರ್ಥಿನಿಯರಿಗೆ ಎರಡು ವರ್ಷದ ಅವಧಿಯಲ್ಲಿ ಒಂದು ಪ್ರವಾಸ ಕಡ್ಡಾಯವಾಗಿತ್ತು. ಪ್ರವಾಸದಲ್ಲಿ ಒಂದು ಬಸ್ಸಿಗೆ ಬೇಕಾದ ಜನ 50. ಆದರೆ ನಮ್ಮ ಒಂದು ತರಗತಿಯಲ್ಲಿ 30 ವಿದ್ಯಾರ್ಥಿನಿಯರು ಇರುತ್ತಿದ್ದರು. ಉಳಿದ 20 ಮಂದಿಯನ್ನು ಸೇರಿಸಿ ಕರಕೊಂಡು ಹೋಗುವುದು ಸಂಸ್ಥೆಯ ಪ್ರವಾಸ ವ್ಯವಸ್ಥೆ ಮಾಡುವ ಪ್ರಶಿಕ್ಷಕರ ಜವಾಬ್ದಾರಿಯಾಗಿತ್ತು. ಹೆಚ್ಚಾಗಿ ನಮ್ಮ ಸಹೋದ್ಯೋಗಿ ಪ್ರಶಿಕ್ಷಕರಾದ **ಶ್ರೀಯುತ ಎಂ.ಎಂ. ಪ್ರಭು**ಗಳು ಪ್ರವಾಸಕ್ಕೆ ವ್ಯವಸ್ಥೆ ಮಾಡುತ್ತಿದ್ದರು. ಮಹಿಳಾ ಸಂಸ್ಥೆಯಾದ ಕಾರಣ ಇಬ್ಬರು ಮಹಿಳಾ ಪ್ರಶಿಕ್ಷಕಿಯರು ಇಬ್ಬರು ಪುರುಷ ಪ್ರಶಿಕ್ಷಕರು ಪ್ರವಾಸದಲ್ಲಿ ಹೋಗುವ ನಿಯಮವಿತ್ತು. ಒಂದು ತಿಂಗಳ ಮೊದಲೇ 50 ವಿದ್ಯಾರ್ಥಿನಿಯರಿಗೆ ರಾತ್ರಿ ಉಳಕೊಳ್ಳಲು ಬೇಕಾದ ವಸತಿಗ್ರಹಕ್ಕಾಗಿ (5 ದಿನದ ರಾತ್ರಿಗೆ) ಮುಂಗಡ ಹಣ ಎಮ್.ಓ ಮಾಡುತ್ತಿದ್ದರು. 6 ದಿನದ ಪ್ರವಾಸದಲ್ಲಿ ನೋಡಲಿರುವ ಪ್ರೇಕ್ಷಣೀಯ ಸ್ಥಳ, ಸಮಯ, ತಂಗುವ ಸ್ಥಳ, ಹಾಗೂ ದೂರವಾಣಿ ಸಂಖ್ಯೆ, ಮಾರ್ಗಸೂಚಿ ವಸ್ತುಗಳು ಹೀಗೆ ಎಲ್ಲಾ ವಿಷಯ ಒಳಗೊಂಡ ಕಾಗದವನ್ನು **ಸೈಕ್ಲೋ ಸ್ಟೈಲ್** ಮಿಷನಿನಲ್ಲಿ ಕೋಪಿ ಮಾಡಿ ಎಲ್ಲಾ ವಿದ್ಯಾರ್ಥಿನಿಯರಿಗೆ 2 ಕೋಪಿ ಕೊಡುತ್ತಿದ್ದೆವು. ಒಂದು ಕೋಪಿ ಮನೆಗೆ ಇನ್ನೊಂದು ಕೋಪಿ ಮಕ್ಕಳಲ್ಲಿ ಇನ್ನೊಂದು ಬದಿಯಲ್ಲಿ ಪ್ರವಾಸಕ್ಕೆ ಹೋಗುವವರ ಹೆಸರು ಪ್ರಾಯ ಬರೆಯುತ್ತಿದ್ದೆವು. 17 ವರ್ಷದ ಬಲ್ಮಠದ ನನ್ನ ಸೇವಾ ಅವಧಿಯಲ್ಲಿ 7 ಬಾರಿ ನಾನು (ಒಂದು ಪ್ರವಾಸ ಹೊರತುಪಡಿಸಿ) ಎಲ್ಲಾ ಪ್ರವಾಸಕ್ಕೂ ಹೋಗಬೇಕಾಯ್ತು. ಎರಡು ಬಾರಿ **ಎಂ.ಎಂ. ಪ್ರಭುಗಳು,** ಒಂದು ಬಾರಿ **ಶ್ರೀಯುತ ಭಾಸ್ಕರ ಶೆಟ್ರು,** ಒಂದು ಬಾರಿ **ತಿಮ್ಮೆಗೌಡರು,** ಒಂದು ಬಾರಿ ಶಿಕ್ಷಕ ಸಂಸ್ಥೆಯ ಪ್ರಾಚಾರ್ಯರು ಸುಪರಿಂಟೆಂಡೆಂಟ್ **ಶ್ರೀಯುತ ಶಿವಪ್ಪ ಪೂಜಾರಿ** ನನ್ನ ಜೊತೆಗೆ ಇದ್ದರು. ಒಂಧು ಬಾರಿ ನಾನೊಬ್ಬನೇ ಪುರುಷ ಪ್ರಶಿಕ್ಷಕನಿದ್ದೆ. ಪ್ರವಾಸದಲ್ಲಿ ಅವಶ್ಯಕತೆಗೆ ಅನುಗುಣವಾಗಿ ತಿಂಡಿ ತಿನಸು ಮದ್ದು ನೀರಿನ ಡ್ರಂ ಕೊಂಡುಹೋಗುತ್ತಿದ್ದೆವು. ಪ್ರತಿ ಬಾರಿಯೂ ನಾವು ಪ್ರವಾಸಕ್ಕೆ ಹೋದಾಗಲೂ ಕಾಸರಗೋಡಿನ ಬಸ್ಸನ್ನು ವ್ಯವಸ್ಥೆ ಮಾಡುತ್ತಿದ್ದೆವು. ಮಹಿಳೆಯರೇ ಇದ್ದ ಕಾರಣ ನಾವು ಹಗಲು ಪ್ರಯಾಣ ಮಾಡುತ್ತಿದ್ದೆವು. ಆದರೆ ಒಂದು ಪ್ರವಾಸದಲ್ಲಿ ಮಾತ್ರ ರಾತ್ರಿ ಪ್ರಯಾಣ ಮಾಡಬೇಕಾದ ಪ್ರಸಂಗ ಬಂತು. (ಅದು ಉತ್ತರ ಕರ್ನಾಟಕಕ್ಕೆ)

**6 ಬಾರಿ ನಾವು ಹೋದ ಸ್ಥಳಗಳು: ಮಧೂರು, ಬೇಕಲಕೋಟೆ, ಗುರುವಾಯೂರು,** ರಾತ್ರಿ ಗುರುವಾರೂಪ್ಪ ದರ್ಶನ (ಖರೀದಿ ಮಾಡಿ ಇದ್ದರೆ) ವಸತಿಗೃಹದಲ್ಲಿ ವಿಶ್ರಾಂತಿ. 4 ಗಂಟೆಯ ಒಳಗೆ ಗುರುವಾರೂಪ್ಪನ ದರ್ಶನ ಮಾಡಿ (ಗುರುವಾಯೂರಲ್ಲಿ ದೇವರ ದರ್ಶನ ಮಾಡಬೇಕಾದರೆ ಕೆಲವು ನಿಯಮಗಳನ್ನು ಪಾಲಿಸಲೇಬೇಕು. ಪ್ಯಾಂಟ್, ಚೂಡಿದಾರ ಹಾಕಿದರೆ ಪ್ರವೇಶವಿಲ್ಲ. ಗಂಡಸರು ಬನಿಯನ್ ಅಂಗಿ ಹಾಕಬಾರದು. ಲುಂಗೀಶಾಲು ಮಾತ್ರ, ಸ್ತ್ರೀಯರಾದರೆ ಉದ್ದ ಲಂಗ ಮತ್ತು ಸೀರೆಯನ್ನೇ ಉಡಬೇಕು. ಕ್ರಿಶ್ಚಿಯನ್ ಮುಸ್ಲಿಂ ಜನಕ್ಕೆ ಪ್ರವೇಶವಿಲ್ಲ. ಹಾಗಾಗಿ ನಮ್ಮ ಸರಕಾರದಿಂದ ಆಯ್ಕೆಯಾದ ವಿದ್ಯಾರ್ಥಿನಿಯರಲ್ಲಿ ಕೆಲವರು ಮುಸ್ಲಿಂ ಕೆಲವರು ಕ್ರಿಶ್ಚಿಯನ್ ಇರುತ್ತಿದ್ದರು. ಹಾಗಾಗಿ ಅವರಿಗೆ ಒಳಗೆ ಪ್ರವೇಶಕ್ಕಾಗಿ

ಹೆಸರನ್ನು ಬದಲಾಯಿಸಿ ಇಡುತ್ತಿದ್ದೆವು. ಇದು ಕೆಲವು ವಿದ್ಯಾರ್ಥಿನಿಯರಿಗೆ ಹಿಂಸೆ ಆಗುತ್ತಿತ್ತು. ಅಂತವರು ಒಳಗೆ ಬರುತ್ತಿರಲಿಲ್ಲ. 4 ಗಂಟೆಗೆ ಗುರುವಾಯೂರಿಂದ ಹೊರಟವರು ಸುಪ್ರಭಾತ ಪದ್ಯಗಳೊಂದಿಗೆ ಟಿಫಿನ್ ಹೋಟೇಲಿನಲ್ಲಿ ಮುಗಿಸಿ **ಕಲ್ಲಿಕೋಟೆ, ಹಡಗು ನಿರ್ಮಾಣದ ಸ್ಥಳ, ಫಿಶ್‌ನೆಟ್** ದೋಣಿ (ಮನುಷ್ಯರೇ ಅತ್ತಿಂದಿತ್ತಾಗೆ ಹೋಗಿ ಸಮುದ್ರದಲ್ಲಿ ಮೀನು ಹಿಡಿಯುವ ದೋಣಿ) **ವಾಸ್ಕೋಡಗಾಮನ** ಅಂತ್ಯಸಂಸ್ಕಾರ ಮಾಡಿದ **ಚರ್ಚ್, ಯಹೂದಿಗಳ ದೇವಮಂದಿರವನ್ನು** ನೋಡಿ **ಎರ್ನಾಕುಳಂಗಾಗಿ ತಿರುವನಂತಪುರ**. (ಮಧ್ಯದಾರಿಯಲ್ಲಿ ಬರುವ ಬ್ರಿಟಿಷರ ಕಾಲದ ಸೇತುವೆ ದಾಟುವಾಗ ಆಗುವ ಅನುಭವ ಈಗಲೂ ಮೈ ನಡುಕ ಹುಟ್ಟಿಸುತ್ತಿದೆ. ಎರಡು ವಾಹನ ಎದುರುಬದುರಾಗಿ ಹೋಗುತ್ತಿರುವಾಗ ನಾವು ಕುಳಿತಿರುವ ಬಸ್ಸು ಕಂಪಿಸುವುದು ಎಂದರೆ ನಿಮಗೆ ಭಯವಾಗಲಿಕ್ಕಿಲ್ಲವೇ). ರಾತ್ರಿ ಸುಮಾರು 10–11 ಗಂಟೆಗೆ **ತಿರುವನಂತಪುರ** ಹೋಟೇಲಿಗೆ ಫೋನ್ ಮಾಡಿ ಊಟ ಇರಿಸಲು ಹೇಳುತ್ತಿದ್ದೆವು. ತಿರುವನಂತಪುರದ ಹುಡುಗರಂತೂ ನಮಗೆ ಹಾಗೂ ನಮ್ಮ ಹುಡುಗಿಯರಿಗೆ ತಲೆಬಿಸಿ. ನಮ್ಮ ಹುಡುಗಿಯರನ್ನು ಮಾತನಾಡಿಸುವುದು, ಹಲ್ಲು ಕಿಸಿಯುವುದು ಹೀಗೆ ಹುಡುಗಿಯರನ್ನೇ ಕಂಡಿರದವರಂತೆ ವರ್ತಿಸುತ್ತಿದ್ದರು. ಹಾಗಾಗಿ ನಮ್ಮ ಹುಡುಗಿಯರಿಗೆ ಟ್ರಿವೆಂಡ್ರಂ ಮುಗಿಯುವ ತನಕ ಆದಷ್ಟು ಜಾಗ್ರತೆಯಿಂದ ವರ್ತಿಸಲು ಹೇಳುತ್ತಿದ್ದೆವು. ನಮ್ಮ ವಿದ್ಯಾರ್ಥಿನಿಯರು ಮುಂದಕ್ಕೆ ಶಿಕ್ಷಕಿಯರೇ ಆಗಲಿರುವುದರಿಂದ ಎಲ್ಲರೂ ಪ್ರಶಿಕ್ಷಕರುಗಳ ಮಾತನ್ನು ತಪ್ಪದೇ ಪರಿಪಾಲಿಸುತ್ತಿದ್ದರು. ಹಾಗಾಗಿ ನಮ್ಮ ವಿದ್ಯಾರ್ಥಿನಿಯರಿಂದ ಯಾವುದೇ ತೊಂದರೆಗಳು ಬರುತ್ತಿರಲಿಲ್ಲ.

**ಮರೆಯಲಾಗದ ಘಟನೆ:** ಒಂದು ವರ್ಷದ ಪ್ರವಾಸದಲ್ಲಿ ವಿದ್ಯಾರ್ಥಿನಿಯರು 30 ಇರುವುದರಿಂದ 15 ವಿದ್ಯಾರ್ಥಿನಿಯರನ್ನು ಬಲ್ಮಠ ಪದವಿ ಪೂ. ಕಾಲೇಜಿನಿಂದ, ಅವರಿಗೆ ಅವಕಾಶ ಕೊಟ್ಟು ಕರಕೊಂಡು ಹೋಗಬೇಕಾಯ್ತು. 15 ಪಿಯುಸಿ ಮಂದಿ ವಿದ್ಯಾರ್ಥಿನಿಯರಿಗೆ ಒಬ್ಬ ಉಪನ್ಯಾಸಕಿ ಬಂದಿದ್ದರು. ಹೊರಡುವಾಗ ಯಾವ ಉಡುಪನ್ನೂ ಧರಿಸಬಹುದು ಎಂದು ಹೇಳಿದ್ದರಿಂದ ಹೊರಡುವ ದಿವಸ ಗುರುವಾಯೂರು ದೇವಸ್ಥಾನಕ್ಕೆ ಹೋಗುವ ಕಾರ್ಯಕ್ರಮದ ನಿಮಿತ್ತ ಅವರಿಗೂ ಸೀರೆ ಉಟ್ಟುಕೊಂಡು ಬನ್ನಿ ಎಂದು ಹೇಳಿದ್ದೆವು. ಅವರಲ್ಲಿ ನಮ್ಮ ಒತ್ತಾಯಕ್ಕೆ 6–7 ಮಂದಿ ಸೀರೆ ಉಟ್ಟಿದ್ದರು. ಉಳಿದ 7–8 ಮಂದಿ ಚೂಡಿದಾರದಲ್ಲೇ ಇದ್ದರು. ಉಪನ್ಯಾಸಕಿಯೂ ಚೂಡಿದಾರ ಹಾಕಿದ್ದು ನಮಗೆ ತುಂಬಾ ಮುಜುಗರವಾಯ್ತು. 15 ಮಂದಿಯಲ್ಲಿ 4–5 ಮಂದಿ ಮಾತ್ರ ದೇವಸ್ಥಾನದ ಒಳಗೆ ಹೋಗಿ ಉಳಿದವರು ಮಾರ್ಕೆಟಿಂಗ್ ಮಾಡಿದರು. ತಿರುವನಂತಪುರಕ್ಕೆ ಹೊರಟಾಗ 15 ವಿದ್ಯಾರ್ಥಿನಿಯರು ಒಬ್ಬರು ಉಪನ್ಯಾಸಕಿ ಸೇರಿ 16 ಮಂದಿಯೂ ಚೂಡಿದಾರದಲ್ಲಿ ಇದ್ದು ನಮ್ಮ ಮಾತನ್ನು ನಿರ್ಲಕ್ಷ್ಯ ಮಾಡಿ ಅವಮಾನವಾಗುವಂತೆ ವರ್ತಿಸಿದರು. ತಿರುವನಂತಪುರದ ಹುಡುಗರ ಕೀಟಲೆ ಗೊತ್ತಿದ್ದ ಎಂ.ಎಂ.ಪ್ರಭುಗಳು ಬಸ್ಸಿನಲ್ಲಿ ಹೊರಗೆ ಕೈ ಹಾಕಿ ಟಾಟಾ ಎಂದು ಹೇಳಬಾರದು ಎಂದು ಮೈಕದಲ್ಲಿ ಹೇಳಿದರೂ ಅವರ ಮಾತಿಗೆ ಮೂರು ಕಾಸಿನ ಬೆಲೆ ಕೊಡಲಿಲ್ಲ. ಟಾಟಾ ಹೇಳಿ ಹೇಳಿ 2–3 ಹುಡುಗರು ನಮ್ಮ ಬಸ್ಸನ್ನು ಬೆಂಬತ್ತಿ ಬೈಕ್‌ಗಳಲ್ಲಿ ಬಂದರು. ನಾವು ರಾತ್ರಿ ಊಟಕ್ಕೆ ಹೋದಾಗ ಅದೇ ಹುಡುಗರು ಹೋಟೇಲಿಗೂ ಬಂದರು. ಅಲ್ಲಿ ಊಟ

ಮಾಡುತ್ತಿರುವಾಗ ಹುಡುಗಿಯರ ಈ ವರ್ತನೆ ನೋಡಿ ಪ್ರಭುಗಳು ಬಹಳ ಸಿಟ್ಟಾಗಿದ್ದರೂ ಬೈಯುವ ಗೊಡವೆಗೆ ಹೋಗಲಿಲ್ಲ, ಯಾಕೆಂದರೆ ಅವರು ನಮ್ಮ ವಿದ್ಯಾರ್ಥಿನಿಯರು ಅಲ್ಲ. ರಾತ್ರಿ ದೇವಸ್ಥಾನದ ಛತ್ರದಲ್ಲಿ (ತಿರುವನಂತಪುರದಲ್ಲಿ ಒಂದು ವರ್ಷ ಛತ್ರದಲ್ಲಿ ಮಲಗಿದ್ದೆವು. ರಾತ್ರಿ 2 ಗಂಟೆ ಒಬ್ಬಳು ವಿದ್ಯಾರ್ಥಿನಿ ಕ್ಯಾಂಡಲ್ ಬೆಳಕಿನಲ್ಲಿ ನಾವು ಇದ್ದಲ್ಲಿ ಬಂದು ಸಾರ್ ಸಾರ್ ಒಬ್ಬಳಿಗೆ ಜ್ವರ ಬರುತ್ತಿದೆ ಎಂದಳು. ಮೈ ಸುಡುವಷ್ಟು ಜ್ವರ, ನಮ್ಮ ಪ್ರವಾಸದ ಡ್ರೈವರ್ ಸಹಾಯದಿಂದ ನಾನು ಪ್ರಭುಗಳು ಛತ್ರ ಕಾವಲುಗಾರನ ಜೊತೆಗೆ ಡಾ। ಮನೆ ಹುಡುಕಿಕೊಂಡು ರಾತ್ರಿ 2.30 ಗಂಟೆಗೆ ಸುತ್ತಾಡಿ ಡಾ।ರನ್ನು ಕರತಂದು ಇಂಜೆಕ್ಷನ್ ಕೊಟ್ಟು ಗುಣಮುಖವಾದ ಘಟನೆ ಪ್ರವಾಸದ ಕಹಿ ನೆನಪಿನಲ್ಲಿ ಒಂದು). ತಿರುವನಂತಪುರದ **ಅನಂತಪದ್ಮನಾಭ ದೇವರ ದರ್ಶನ**ಕ್ಕೆ ಪ್ರಾರಂಭ. ಅಲ್ಲಿಯೂ ಒಳ ಹೋಗಲು ಗುರುವಾಯೂರಿನದ್ದೇ ನಿಯಮ. ಹುಡುಗಿಯರಲ್ಲಿ ಕೆಲವರು ಬಂದ–ರೆ ಕೆಲವರು ತಿರುಗಾಟಕ್ಕೆ ತೊಡಗಿದರು. ಬಸ್ಸು ಹೊರಡುವ ವೇಳೆಗೆ ಎಲ್ಲಿದ್ದರೂ ಬರಬೇಕೆಂದು ತಿಳಿಸಿದೆವು. ಪ್ರಪಂಚದಲ್ಲೇ 14ನೇ ಶ್ರೀಮಂತ ದೊರೆಯಿಂದ ನಡೆಸಲ್ಪಡುವ ದೇವಸ್ಥಾನ ಒಂದು ಅದ್ಭುತ, ವಿಶೇಷ ವಿಚಿತ್ರ ವಿನ್ಯಾಸವನ್ನೊಳಗೊಂಡಿದೆ. ದೇವಸ್ಥಾನದ ದೊರೆ–ರಾಜ ಎನಿಸಿದವರು ಲುಂಗಿ ಶಾಲು ಹೊದ್ದುಕೊಂಡು ದೇವಸ್ಥಾನಕ್ಕೆ ಪ್ರವೇಶಮಾಡಿ ಪೂಜೆ ವೀಕ್ಷಿಸುವುದನ್ನು ನಾವು ನೋಡಿದೆವು. ದೇವಸ್ಥಾನದ ಹಿಂಭಾಗದಲ್ಲಿದ್ದ ಒಂದು ಕೋಣೆಯಲ್ಲಿ ಎದುರು **ಗೋಪುರದ ಅಡಿ ಮೇಲಾಗಿ ಇರುವ ನೆರಳನ್ನು ಕಂಡೆವು**. ಬಳಿಕ ಟಿಫಿನ್ ಮುಗಿಸಿ ಮೃಗಾಲಯ ವೀಕ್ಷಣೆಗೆ ಹೋದೆವು. ಅಲ್ಲಿ ನಮ್ಮ ಹುಡುಗಿಯರು ಜೊತೆಗೆ ಅವರಿಗೂ ತಿಳಿಸಿದ್ದೆವು. ಒಂದೇ ಕ್ಯೂನಲ್ಲಿ ಇರಬೇಕು. ಮಧ್ಯ ಮಧ್ಯ ನಾವು ನಿಂತಿರುತ್ತೇವೆ. 3 ಕಿ.ಮೀ ನಷ್ಟು ಒಳಗೆ ಮೃಗಗಳ ವೀಕ್ಷಣೆ ಇರುವುದರಿಂದ ಎಲ್ಲಿಗೂ ತಪ್ಪಿಸಿಕೊಂಡು ಹೋಗಬೇಡಿ ಎಂದಿದ್ದೆವು. ಆದರೂ ನಮ್ಮ ಮಾತನ್ನು ಕೇಳದೆ 15 ಹುಡುಗಿಯರು (ಪಿಯುಸಿ) ಸ್ವಲ್ಪ ದೂರ ಹೋದಾಗಲೇ ದಾರಿ ತಪ್ಪಿ ನಡೆದರು. 10 ನಿಮಿಷದಲ್ಲೇ ಕಾಣೆಯಾದ ಹುಡುಗಿಯರು ಎಲ್ಲಿ ಎಂದು ಅವರ ಉಪನ್ಯಾಸಕಿಯನ್ನು ಕೇಳಿದರೆ ನನಗೆ ಗೊತ್ತಿಲ್ಲ ಎಂದು ಬಿಡುವುದೇ? ಹಾಗಾಗಿ ನಮ್ಮ ಶಿಕ್ಷಕಿ ವಿದ್ಯಾರ್ಥಿನಿಯರ ಜೊತೆಗೆ ಪ್ರಾಣಿ ಪಕ್ಷಿ, ಉರಗಗಳನ್ನೆಲ್ಲಾ ನೋಡುತ್ತಾ ಮುಂದೆ ಸಾಗಿದೆವು. ಸುಮಾರು 2 ಗಂಟೆ ಮೃಗಾಲಯ ವೀಕ್ಷಿಸಿ ಹೊರಗೆ ಬರುವ ವೇಳೆಗೆ ಗೇಟಿನ ಬಳಿ 15 ಹುಡುಗಿಯರೂ ನಮ್ಮನ್ನೇ ಕಾಯುತ್ತಿರುವಂತೆ ಕುಳಿತ್ತಿದ್ದರು. ಪ್ರವೇಶ ದ್ವಾರದಲ್ಲಿ ಕೊಟ್ಟ ಚೀಟಿ ಅರ್ಧಾಂಶ ನನ್ನ ಬಳಿಯಲ್ಲಿ ಇತ್ತು. ಹೊರಗಿನ ದ್ವಾರದಲ್ಲಿ ಅದನ್ನು ಕೊಟ್ಟರೆ ಮಾತ್ರ ಹೊರಗೆ ಬಿಡುವ ಪದ್ದತಿ. ಅದ್ಯಾವುದೂ ನಮಗೂ ತಿಳಿದಿರಲಿಲ್ಲ, ಅವರಿಗೂ ತಿಳಿದಿರಲಿಲ್ಲ, ಹಾಗೆ 15 ಮಂದಿ ಸಿಕ್ಕಿದರಲ್ಲಾ ಎಂಬ ಸಂತೋಷದಿಂದ ಮೃಗಾಲಯದ ಮ್ಯೂಸಿಯಂ, ಹಾವುಗಳ ಮ್ಯೂಸಿಯಂ, ಚಿತ್ರಕಲಾ ಪ್ರದರ್ಶನ ನೋಡಿ ಊಟಕ್ಕೆ ಹೋದೆವು. ಬಳಿಕ **ಪ್ಲಾನೋಟೇರಿಯಂ** ನೋಡಿ ಸಂತೋಷಪಟ್ಟು ಅಲ್ಲಿಂದ ಕನ್ಯಾಕುಮಾರಿಗೆ ನಮ್ಮ ಪ್ರಯಾಣ. ಪ್ರಯಾಣದ ಸಂಜೆವೇಳೆ ನಾವು ಹೋಟೇಲಿಗೆ ಹೋಗುತ್ತಿದ್ದುದು ಚಹಾ, ಕಾಫೀ, ಹಾಲು ಕುಡಿಯಲು ಮಾತ್ರ, ತಿಂಡಿ ಎಲ್ಲಾ ನಮ್ಮ ಬಸ್ಸಿನಲ್ಲೇ ವಿತರಿಸುತ್ತಿದ್ದೆವು. ಈ 15 ಪಿ.ಯು.ಸಿ ಹುಡುಗಿಯರು ಟಾ–ಟಾ ಹೇಳಿದ ಕಾರಣ 3 ಹುಡುಗರು ಕನ್ಯಾಕುಮಾರಿಗೆ ಹೋಗುವ ನಮ್ಮ ಬಸ್ಸಿನ ಹಿಂದೆ ಬರತೊಡಗಿದರು. ನಮ್ಮಲ್ಲಿ ಭಯ ಪ್ರಾರಂಭವಾಗಿ

ಈ 15 ಹುಡುಗಿಯರಿಂದಾಗಿ ನಮ್ಮ 30 ವಿದ್ಯಾರ್ಥಿನಿಯರ ಪ್ರವಾಸ (ಆ ವರ್ಷದಲ್ಲಿ) ನಿರಾಸಕ್ತಿಯಿಂದ ಸಾಗಿತ್ತು. ಎಂ.ಎಂ.ಪ್ರಭುಗಳ ನಿರ್ದೇಶನದಂತೆ ನಮ್ಮ ಬಸ್ಸು ಕನ್ಯಾಕುಮಾರಿಯ ಪೊಲೀಸ್ ಸ್ಟೇಷನ್ ಕಡೆ ತಿರುಗಿಸಿದ್ದನ್ನು ಗಮನಿಸಿದ ಹುಡುಗರು ಅಲ್ಲಿಂದ ಪಲಾಯನಗೈದರು.

**ಕನ್ಯಾಕುಮಾರಿಗೆ** ಹೋಗಿ (4 ಗಂಟೆಯ ಒಳಗೆ) ನಾವು **ವಿವೇಕಾನಂದರ ಸ್ಮಾರಕ** ಸ್ಥಳಕ್ಕೆ ಹೋಗಬೇಕಾದ ದೋಣಿಗೆ ಟಿಕೇಟ್ ತೆಗೆದುಕೊಳ್ಳಬೇಕು. ಬಳಿಕ ದೋಣಿ ಇಲ್ಲ. (50 ಜನರನ್ನು ಕೊಂಡೊಯ್ಯಬಹುದಾದ ಬೋಟ್) ಕ್ಯೂ ನಿಂತು **ವಿವೇಕಾನಂದರ ಮಂಟಪ** ಅಲ್ಲಿಯ ಸಮುದ್ರದ ಗಾಳಿ, ವಿವೇಕಾನಂದರ ಕೊಠಡಿ, ನೋಡಿ ನಾವೂ ಧ್ಯಾನ ಮಾಡಿ, ಎಲ್ಲಾ ರೀತಿಯ ಮನಸ್ಸಿನ ಆನಂದದಿಂದ ಇದ್ದು ಬೋಟಿನಲ್ಲಿ 3ಕಿ.ಮೀ ದೂರ ಸಮುದ್ರ ದಾಟಿ ದಡ ಸೇರಿದೆವು. ಬಳಿಕ ಅಲ್ಲಿ **ಕನ್ಯಾಕುಮಾರಿ ದೇವಿ** ದರ್ಶನ ಮಾಡಿ ದೇವಿಯ **ಮೂಗುತಿ** (ಮಾಣಿಕ್ಯದ್ದು) ನೋಡಿದೆವು ದೀಪದಂತೆ ಹೊಳೆಯುತ್ತದೆ. ಬಳಿಕ ಗಾಂಧಿ ಸ್ಮಾರಕ ಅಲ್ಲಿ ಪ್ರತಿ ಜನವರಿ 31ರಂದು ಗೋಪುರದ ಶಿಖರದಿಂದ ಒಂದು ಸಣ್ಣ ಬೆಳಕು **ಗಾಂಧಿ ಸ್ಮಾರಕ**ದ ಮಧ್ಯಭಾಗದಲ್ಲಿ ಹುತಾತ್ಮ ಬಸ್ಮವನ್ನು ಇರಿಸಿದ ಜಾಗದಲ್ಲಿ ಬೀಳುವುದನ್ನು ಕಂಡು ವಿಸ್ಮಿತರಾದೆವು. ಬಳಿಕ ನಮ್ಮ ವಿದ್ಯಾರ್ಥಿನಿಯರೆಲ್ಲಾ ಚಿಪ್ಪು ಆಭರಣ, ಚಿಪ್ಪು ಸರ, ಚಿಪ್ಪು ಅಲಂಕಾರಿಕ ವಸ್ತು, ಸಾರಿಗಳನ್ನು, ಶಂಖವನ್ನು ಕೊಂಡು ಸಂತೋಷಪಟ್ಟರು. ಬಳಿಕ ನಾವು ಮೊದಲೇ ನಿಗದಿ ಪಡಿಸಿದ್ದಂತೆ ಎಂ.ಒ. ಕಳುಹಿಸಿದ ಪ್ರಕಾರ ಮಕ್ಕಳಿಗೆ 50 ಮಂದಿ ಉಳಕೊಳ್ಳಲು ದೊಡ್ಡದಾದ ಹಾಲ್‌ನಲ್ಲಿ ತಂಗಿದ್ದೆವು.

**ಘಟನೆ:** ಒಂದು ವರ್ಷದ ಪ್ರವಾಸದಲ್ಲಿ 30+20 ಆಗುವ ಉದ್ದೇಶದಿಂದ 20 ಮಂದಿ ಹೆಂಗಸರನ್ನು ಕರೆದೆವು. ಪಬ್ಲಿಕ್ ಯಾರೂ ಬರಬಹುದು. ನಮ್ಮ ವಿದ್ಯಾರ್ಥಿನಿಯರ ಸಂಬಂಧಿಗಳೂ ಬರಬಹುದು ಎಂದು ತಿಳಿಸಿದ್ದೆವು. ಹಾಗೆ ನನ್ನ ಪತ್ನಿಯನ್ನು ಮಗಳು ಸೌಮ್ಯ ಮತ್ತು ಮಗ ಪ್ರಸಾದನನ್ನು ಕರಕೊಂಡು ಹೋಗುವ ಅವಕಾಶ ಸಿಕ್ಕಿತ್ತು. ಎಲ್ಲ ಮಕ್ಕಳು ಕೊಡುವಷ್ಟೇ ಹಣವನ್ನು ನನ್ನ ಹೆಂಡತಿ ಮಕ್ಕಳ ಲೆಕ್ಕದಲ್ಲೂ ಕೊಟ್ಟಿದ್ದೆ. ಕನ್ಯಾಕುಮಾರಿಯಲ್ಲಿ ಸಾವಿರಾರು ಪ್ರೇಕ್ಷಕರು ಬರುವುದರಿಂದ ಬೆಳಿಗ್ಗೆ 4 ಗಂಟೆಗೆ ಹೆಂಗಸರ ಸ್ನಾನಗೃಹದಲ್ಲಿ ಸಾಲಾಗಿ ನಿಲ್ಲತೊಡಗುತ್ತಾರೆ. ನನ್ನ ಹೆಂಡತಿ ಹಿಂದೆ ಬೇರೆ ಯಾರೋ ಇದ್ದರು. ಎದುರಿಗೆ 3–4 ಮಂದಿ ನಮ್ಮ ವಿದ್ಯಾರ್ಥಿನಿಯರು ಇದ್ದರು. ನಮ್ಮ ಮಕ್ಕಳ ಸ್ನಾನ ಆದ ನಂತರ ನನ್ನ ಪತ್ನಿ ಸ್ನಾನಕ್ಕೆಂದು ಹೋದಾಗ ನೀರಿನ ಟ್ಯಾಪ್‌ನಲ್ಲಿ ಒಂದು ಆಭರಣ ಜೋತು ಹಾಕಿದ್ದುದನ್ನು ಕಂಡು ಸ್ನಾನ ಮುಗಿಸಿ ಬರುವಾಗ ಅದನ್ನು ತಂದು ಪ್ರಶಿಕ್ಷಕಿ ಶ್ರೀಮತಿ ಸುನಂದ ಶೆಟ್ಟಿಯವರಲ್ಲಿ ಕೊಟ್ಟು ಅವರಿಗೆ ಕೊಟ್ಟ ವಿಷಯ ನನಗೆ ತಿಳಿಸಿದಳು. (ಆಭರಣ ಹಾಕಿಕೊಂಡು ಬರಬಾರದೆಂದು ನಾವು ಕಡ್ಡಾಯವಾಗಿ ಹೇಳುತ್ತೇವೆ). ಕೂಡಲೇ ಹೋಗಿ ಸುನಂದರವರಲ್ಲಿ ಆ ಹುಡುಗಿಗೆ ಆಭರಣ ಕೊಟ್ಟು ಬಿಡಿ ಎಂದು ಹೇಳಿದೆ. ಆದರೆ ಆ ಆಭರಣ ಯಾರದ್ದೆಂದು ತಿಳಿಯುವುದು ಹೇಗೆ? ಹಾಗಾಗಿ ಅವರು ಅವಸರ ಬೇಡ ಎಂದರು.

ಸ್ವಲ್ಪ ಹೊತ್ತಿನಲ್ಲಿ ನಮ್ಮ ವಿದ್ಯಾರ್ಥಿನಿಯರಲ್ಲಿ ಒಬ್ಬಳು ಅಳುತ್ತಾ ಸ್ನಾನ ಗೃಹದ ಹತ್ತಿರ ಟಾರ್ಚ್‌ಲೈಟ್ ಹಿಡಿದುಕೊಂಡು ಓಡಿದಳು. ಸಾವಿರಾರು ಮಂದಿ ಬಂದು ಸ್ನಾನ

ಮಾಡಿ ಹೋಗುವ ಬಾತ್‌ರೂಂನಲ್ಲಿ ಹುಡುಕಿದರೆ ಏನು ತಾನೇ ಸಿಗಬಹುದು? 3–4 ವಿದ್ಯಾರ್ಥಿನಿಯರು ಟಾರ್ಚ್ ಲೈಟಿನಲ್ಲಿ ದಾರಿಯಲ್ಲಿ ಕೊಠಡಿಯಲ್ಲಿ ಹಾಲ್‌ನಲ್ಲಿ ಚೀಲದಲ್ಲಿ ಹುಡುಕಿ ಹುಡುಕಿ ಸುಸ್ತಾಗಿ ಗೋಳೋ ಎಂದು ಹುಡುಗಿ ಕೂಗುವುದನ್ನು ನೋಡಿ ಕೆಲವು ವಿದ್ಯಾರ್ಥಿನಿಯರು ಪ್ರಶಿಕ್ಷಕಿ ಅಡ್ವೆ ಸುನಂದರವರಲ್ಲಿ ತಿಳಿಸಿದಾಗ ಬಂಗಾರ ಕಳೆದುಕೊಂಡ ವಿದ್ಯಾರ್ಥಿನಿಯನ್ನು ಕರೆದು ಕೇಳಿದರು. ಬಂಗಾರದ ಆಭರಣ ಕಳೆದುದು ತಿಳಿಯಿತ್ತು. ಮತ್ತೆ ಬುದ್ಧಿವಾದ ಹೇಳಿ "ಬಂಗಾರದ ಆಭರಣ ಹಾಕಿಕೊಂಡು ಬರಬೇಡಿ ಎಂದರೂ ಹಾಕಿಕೊಂಡು ಬಂದರೆ ಏನಾಗುತ್ತದೆ?" ಎಂಬುದನ್ನು ಹೇಳುತ್ತಾ ನನ್ನ ಪತ್ನಿ ಅವರ ಕೈಯಲ್ಲಿ ಕೊಟ್ಟಿದ್ದ ಆಭರಣ ಕೊಟ್ಟಾಗ ಅವಳಿಗೆ ಆದ ಆನಂದ ಅಷ್ಟಿಷ್ಟಲ್ಲ. ಎಲ್ಲಾ ವಿದ್ಯಾರ್ಥಿನಿಯರೂ ಸಂತೋಷಪಟ್ಟರು. ಯಾರದೋ ಕೈ ಸೇರುತ್ತಿದ್ದರೆ ಇಡೀ ಪ್ರವಾಸ ಎಲ್ಲರ ದುಃಖಕ್ಕೆ ಕಾರಣವಾಗುತ್ತಿತ್ತು.

ಬೆಳಿಗ್ಗೆ 5 ಗಂಟೆಗೆ ನಾವು ಸೂರ್ಯೋದಯ ನೋಡುವ ಸ್ಥಳಕ್ಕೆ 2–3 ಕಿ.ಮೀ ನಡಕೊಂಡೇ ಪದ್ಯ ಹೇಳುತ್ತಾ ಹೋದೆವು. ಸೂಯಾಸ್ಥಮಾನವಾಗುವುದನ್ನೂ ಸೂರ್ಯೋದಯವಾಗುವುದನ್ನೂ (ಸಮುದ್ರದಲ್ಲಿ ಸೂರ್ಯಾಸ್ಥ ಸಮುದ್ರದಲ್ಲಿ ಸೂರ್ಯೋದಯ ನೋಡಲು ಸಾಧ್ಯವಾಗುವ ಸ್ಥಳ) **ಕನ್ಯಾಕುಮಾರಿಯಲ್ಲಿ** ಮಾತ್ರ ನೋಡಲು ಸಾಧ್ಯ. ಬೆಳಿಗ್ಗೆ ಹೋಟೇಲಿನಲ್ಲಿ ಉಪಾಹಾರ.

ಪಿ.ಯು.ಸಿ. ವಿದ್ಯಾರ್ಥಿನಿಯರು ಪ್ರವಾಸದಲ್ಲಿ ಬಂದ ವರ್ಷ ರಾತ್ರಿ ಕನ್ಯಾ ಕುಮಾರಿ ಹೋಟೇಲಿನಲ್ಲಿ ರಾತ್ರಿ ಊಟಕ್ಕೆ ಕುಳಿತಿದ್ದೆ. ನಮ್ಮ ವಿದ್ಯಾರ್ಥಿನಿಯರೊಂದಿಗೆ ಪಿ.ಯು.ಸಿ ವಿದ್ಯಾರ್ಥಿನಿಯರೂ ಇದ್ದರು. ಅವರೆಲ್ಲರ ವರ್ತನೆ ಕಂಡು ನಾನು ತಾಳ್ಮೆ ಗೆಟ್ಟೆ. ನಮ್ಮ ವಿದ್ಯಾರ್ಥಿನಿಯರ ಊಟ ಆದ ನಂತರ ನಾವು ಊಟ ಮಾಡುವ ಮೊದಲು ಕ್ಯಾಶರ್ ಬಳಿ ಹಣ ಕೊಡಲು ಹೋದೆ. ಆವಾಗ ಕ್ಯಾಶ್‌ನಲ್ಲಿ ಕುಳಿತ ವ್ಯಕ್ತಿ **"ಏನ್ರೀ ನಿಮ್ಮ ಸಂಸ್ಥೆಯಲ್ಲಿ ನಿಮಗೆ ಕಂಟ್ರೋಲ್ ಇಲ್ವಾ"** ನಿಮಗೆ ವಿದ್ಯಾರ್ಥಿನಿಯರು ಇಷ್ಟೇ ಗೌರವ ಕೊಡುವುದಾ? ಎಂದು ನನ್ನ ಮುಖಕ್ಕೆ ಉಗುಳಿದಂತೆ ಮಾತನಾಡಿದರು. ಕಾರಣ 15 ಪಿ.ಯು.ಸಿ. ಹುಡುಗಿಯರು ಹೊಟೇಲಿಗೆ ಬಂದ ಹುಡುಗರನ್ನು ಮಾತನಾಡಿಸುವ ರೀತಿ ಅವರ ವರ್ತನೆ ಹೊಟೇಲಿನವರಿಗೂ ಅಸಹ್ಯವೆನಿಸಿರಬೇಕು. ಇದನ್ನು ಕಂಡ ಕ್ಯಾಶರ್ ನನ್ನಲ್ಲಿ ಹೇಳಿದ್ದರಿಂದ ನನ್ನ ಸಿಟ್ಟು ತಡೆಯಲಾಗಲಿಲ್ಲ. ಪಿ.ಯು.ಸಿ ಮಕ್ಕಳಿಗೆ ಬೈದರೆ ನನ್ನ ಬೈಗಳಿಗೂ ಬೆಲೆ ಕೊಡಲಿಕ್ಕಿಲ್ಲ ಹಾಗಾಗಿ ಸುಮ್ಮನೆ ಕೂತೆ. ಎಂ.ಎಂ. ಪ್ರಭುಗಳ ಜೊತೆ ಊಟಕ್ಕೆ ಕೂತೆ ಹಾಗೆಯೇ ಡ್ರೈವರ್, ಕಂಡೆಕ್ಟರ್, ಕ್ಲೀನರ್ ಬಂದರು. ಅವರಿಗೆಲ್ಲಾ ಬೇಕಾದ್ದನ್ನು ಕೊಡಿ ಎಂದು ಹೇಳಿ ನನಗೆ ಬರೇ ಅನ್ನ ಸಾರು ಮಜ್ಜಿಗೆ ಸಾಕು ಎಂದೆ. ಅವರಿಗೆಲ್ಲಾ ಸ್ವೀಟ್ ಮೊಸರು ಎಲ್ಲಾ ಕೊಟ್ಟರು ನನಗೆ ಸಾರು ಮಜ್ಜಿಗೆ ಅನ್ನ ಕೊಟ್ಟು ಹೋದರು. ನಾವೆಲ್ಲಾ ಊಟಕ್ಕೆ ಪ್ರಾರಂಭಿಸಿದಾಗ, ನಮ್ಮ ಟಿ.ಸಿ.ಎಚ್. ವಿದ್ಯಾಥಿನಿಯೊಬ್ಬಳು ನನ್ನಲ್ಲಿ ಬಂದು ತಮಾಷೆಗೆ ವ್ಯಂಗವಾಗಿ ಕೇಳಿದಳು **"ನಿಮಗೆಲ್ಲಾ ಮೊಸರು ಸ್ವೀಟ್ ನಮಗೆ ಏನೂ ಇಲ್ಲವಾ?"** ಎಂದು. (ನಾನು ನನ್ನ ಟಿ.ಸಿ.ಎಚ್. ವಿದ್ಯಾರ್ಥಿನಿಯರನ್ನು ಎಂದೂ ಬೈದಿರಲಿಲ್ಲ. ನನ್ನ ಸಹೋದರಿಯರಂತೆ ಅವರಲ್ಲಿ ತಮಾಷೆ ಮಾಡುತ್ತಾ, ಮಾತನಾಡುತ್ತಾ, ಯಾವಾಗಲೂ ನಗುನಗುತ್ತಾ ಯಾರಿಗೂ ನೋವಾಗದಂತೆ ಪ್ರೀತಿಯಿಂದ ಅವರನ್ನೆಲ್ಲಾ

ನೋಡಿಕೊಳ್ಳುತ್ತಿದ್ದೆ). ಇವಳ ಪ್ರಶ್ನೆಯನ್ನು ಕೇಳಿ ಪಿ.ಯು.ಸಿ ವಿದ್ಯಾರ್ಥಿನಿಯರಿಂದಲಾಗಿ ಕ್ಯಾಶರ್‌ನಿಂದ ಉಗಿಸಿಕೊಂಡಿದ್ದ, ಸಿಟ್ಟಿಗೆದ್ದಿದ್ದ ಮನಸ್ಸು ನನ್ನನ್ನು ಮತ್ತೂ ಕೋಪಕ್ಕೆ ತಳ್ಳಿತು. ಅವಳ ಮೇಲೆ ಕೆಂಡಾ ಮಂಡಲವಾಗಿ ಬೈದೆ. ನನ್ನ ಊಟದ ಬಟ್ಟಲಲ್ಲಿ ಸಾರು ಮತ್ತು ಮಜ್ಜಿಗೆ ಮಾತ್ರ ಇದ್ದುದನ್ನು ಅವಳೂ ನೋಡಿರಲಿಲ್ಲ. ಪಾಪ ಇಡೀ ಪ್ರವಾಸ ಮುಗಿಯುವ ತನಕ ಆ ವಿದ್ಯಾರ್ಥಿನಿ ನನ್ನ ಮುಖವನ್ನೂ ನೋಡಲಿಲ್ಲ, ಆ ಘಟನೆ ನೆನಪಿಸಿದಾಗ ನನಗೆ ಈಗಲೂ ದು:ಖ ಬರುತ್ತಿದೆ. ಪಿ.ಯು.ಸಿ. ವಿದ್ಯಾರ್ಥಿನಿಯರ ಮೇಲಿದ್ದ ಸಿಟ್ಟನ್ನೆಲ್ಲಾ ನಮ್ಮ ವಿದ್ಯಾರ್ಥಿನಿಯಲ್ಲಿ ತೋರಿಸಿ ನನ್ನ ಮೂರ್ಖತನವನ್ನು ಪ್ರದರ್ಶಿಸಿದೆ. ಆ ವಿದ್ಯಾರ್ಥಿನಿಯ ಹೆಸರು ನನಗೆ ಈಗ ನೆನಪಿಗೆ ಬರುತ್ತಿಲ್ಲವಾದರೂ ಘಟನೆ ಇಂದೂ ಮರೆಯಲಿಲ್ಲ.

ಅಲ್ಲಿಂದ ನಮ್ಮ ಪ್ರಯಾಣ ಒಂದು ವರ್ಷದಲ್ಲಿ **ರಾಮೇಶ್ವರಕ್ಕಾಗಿ ಪಳನಿ**ಯಾಗಿತ್ತು. ಹೆಚ್ಚಾಗಿ ನಾವು ಕನ್ಯಾಕುಮಾರಿಯಿಂದ **ಮಧುರೆಗೆ** ಬರುತ್ತಿದ್ದೆವು. ಮಧುರೆಯಲ್ಲಿ **ಮೀನಾಕ್ಷಿ ದೇವಾಲಯ** ದಕ್ಷಿಣಭಾರತದಲ್ಲಿ ವಿಶಾಲವಾದ ದೇವಸ್ಥಾನ, ಹೊರಗಿನ ಸುತ್ತುಪೌಳಿ ಒಂದು ಬದಿ 1/2 ಕಿ.ಮೀ ಇದೆ. ಹೊರಗೆ ನಾವು ಮೀನಾಕ್ಷಿ ದೇವಸ್ಥಾನಕ್ಕೆ ಸುತ್ತು ಬರಬೇಕಾದರೆ 2 ಕಿ.ಮೀ. ಆಗುತ್ತದೆ. ನಾವು ಒಳಗಡೆ ಹೋದರೆ ಎಲ್ಲಿ ಇದ್ದೇವೆ ಹೇಗೆ ಹೊರ ಬರಬೇಕೆಂದೇ ತಿಳಿಯುವುದಿಲ್ಲ.

**ಮರೆಯಲಾಗದ ಘಟನೆ :** ಒಂದು ವರ್ಷ ಮಧುರೆಯಲ್ಲಿ ಹೋಟೇಲಿನಲ್ಲಿ ಊಟ ಮಾಡಿ ನಮ್ಮ ವಿದ್ಯಾರ್ಥಿನಿಯರನ್ನು ಕರೆದು ನಮ್ಮ ಬಸ್ಸು ನಿಂತಿರುವ ಸ್ಥಳ, ಅಲ್ಲಿಂದ ದೇವಸ್ಥಾನ ರಾಜಾಂಗಣ – ಹೊರ ಆವರಣದ ವಿಸ್ತಾರವಾಗಿರುವ ರಸ್ತೆ ದೇವಸ್ಥಾನದ ಸುತ್ತಲಿನ ನಾಲ್ಕು ಬೀದಿ, ಬೀದಿಯ ಪಕ್ಕದಲ್ಲಿರುವ ಅಂಗಡಿಗಳು ಎಲ್ಲಾ ತೋರಿಸಿ ನಾಲ್ಕು ಬೀದಿಯಲ್ಲಿ ಇರುವ ನಾಲ್ಕು ಗೋಪುರ ತೋರಿಸಿ, ಒಂದು ಗೋಪುರದಿಂದ ದೇವಸ್ಥಾನದ ಒಳಗೆ ದೇವರ ದರ್ಶನಕ್ಕಾಗಿ ಹೋದೆವು. ಒಳಗೆ ಅದ್ಭುತವಾಗಿರುವ ಕೆತ್ತನೆ ಕೆಲಸಗಳನ್ನು ವೀಕ್ಷಿಸುತ್ತಾ, ವಿಶಾಲವಾದ ಸರೋವರ ನೋಡಿ, ದೇವಸ್ಥಾನದ ಮಾದರಿಯನ್ನು (ಗ್ಲಾಸ್ ಬಾಕ್ಸ್‌ನಲ್ಲಿ) ನೋಡಿ **ಮಧುರೆ ಮೀನಾಕ್ಷಿಯನ್ನು ವಿಶ್ವನಾಥನನ್ನು** ಕಣ್ತುಂಬ ನೋಡಿ ಸಂತೋಷಗೊಂಡು ಸುವರ್ಣದಿಂದ ರಚಿಸಿದ ಗರ್ಭಗುಡಿಯ ಶಿಖರವನ್ನು ದೂರದಿಂದ ನೋಡಿ ಹೊರಬಂದು ಒಂದು ದ್ವಾರದ ಬಳಿ ನಿಂತು ಎಲ್ಲರೂ ಇದೇ ಜಾಗಕ್ಕೆ 1 ಗಂಟೆಯ ಬಳಿಕ ಬನ್ನಿರೆಂದು ಹೇಳಿ, ಬಳೆ–ಆಭರಣ–ಸೀರೆ ಏನಾದರೂ ಖರೀದಿಸುವುದಿದ್ದರೆ ಖರೀದಿಸಿ ಎಂದು 4 ಗುಂಪುಗಳನ್ನಾಗಿ ಮಾಡಿ ಬಿಟ್ಟೆವು. 10–12 ಜನ ವಿದ್ಯಾರ್ಥಿನಿಯರ ಗುಂಪು ಅತೀ ಆಸಕ್ತಿಯಿಂದ ಹೊರಟರು.

ಅವರಿಗೆ ಬೇಕಾದ ವಸ್ತುಗಳನ್ನು ಖರೀದಿಸಿ ಒಂದು ಗಂಟೆಯಲ್ಲಿ ಸರಿಯಾಗಿ ನಾನು ಹೇಳಿದ ಜಾಗಕ್ಕೆ ಬಂದರು. ಆದರೆ ಒಂದು ಗುಂಪು ವಿದ್ಯಾರ್ಥಿನಿಯರು ಬರಲೇ ಇಲ್ಲ. 15–20–25–30 ನಿಮಿಷ ಕಾದರೂ ಬಾರದಿರುವುದನ್ನು ನೋಡಿ ನನಗೆ ಹೆದರಿಕೆ ಪ್ರಾರಂಭವಾಯ್ತು. 2 ಕಿ.ಮೀ. ದೂರವಿರುವ ಸುತ್ತು ಪೇಟೆಯಲ್ಲಿ ಹುಡುಕಲು ಯಾರಿಂದಲೂ ಸಾಧ್ಯವಿಲ್ಲ. ಹಾಗಾಗಿ ಪೊಲೀಸರಲ್ಲಿ ಈ ವಿಷಯ ಹೇಳಿದೆವು.

ಅವರು ಅವರ ವ್ಯಾನಿನಲ್ಲಿ ಮೈಕ್‌ದಲ್ಲಿ ಒಂದು ಸುತ್ತು **"ಮಂಗಳೂರಿನ ಟ್ರೈನಿಂಗ್ ಶಾಲಾ ವಿದ್ಯಾರ್ಥಿನಿಯರನ್ನು ಅವರ ಅಧ್ಯಾಪಕರು ಕಾಯುತ್ತಿದ್ದಾರೆ, ಎಲ್ಲಿದ್ದರೂ ಅವರು ತಿಳಿಸಿದ ಜಾಗಕ್ಕೆ ಬನ್ನಿ"** ಎನ್ನುತ್ತಾ ಬಂದರು. ಒಂದೈದು ನಿಮಿಷದಲ್ಲಿ ಒಬ್ಬಳು ಓಡಿ ಬಂದು ನಮ್ಮ ಗುಂಪಿನವರು ದಾರಿ ಗೊತ್ತಾಗದೆ ಬಸ್ಸಿನಲ್ಲಿ ಕುಳಿತಿದ್ದಾರೆ ಎಂದಳು. ಬಳಿಕ ನಾವೆಲ್ಲಾ ಬಸ್ಸಿಗೆ ಬಂದ ಬಳಿಕ ಬಸ್ಸು **ಪಳನಿ ಸುಬ್ರಹ್ಮಣ್ಯ** ದೇವಸ್ಥಾನದ ಕಡೆಗೆ ಹೊರಟಿತು. ಸ್ವಲ್ಪ ಬಸ್ಸು ವಿಳಂಬವಾಗಿ ಹೊರಟ ಕಾರಣ ಪಳನಿಗೆ ಅತೀ ವೇಗವಾಗಿ ಡ್ರೈವರ್ ಬಸ್ಸು ಚಲಾಯಿಸುತ್ತಿದ್ದ. ಮಧ್ಯದಲ್ಲಿ ಒಂದು ರಸ್ತೆ ವೇಗತಡೆಗೆ ಹಾಕಿದ್ದ **"ಉಬ್ಬು"** ಡ್ರೈವರಿಗೆ ಗೊತ್ತಾಗದೆ ಬಸ್ಸು 1/2 ಮೀಟರಿನಷ್ಟು ಎತ್ತರ ಹಾರಿದಂತೆ ಆಯಿತು. ಸಿನೇಮಾ ಚಿತ್ರಗೀತೆಗೆ ತಕ್ಕ ಡಿಸ್ಕೋ ಬ್ರೇಕ್‌ಡ್ಯಾನ್ಸ್ ಮಾಡುತ್ತಿದ್ದ ಹುಡುಗಿಯರಲ್ಲಿ ಒಬ್ಬಳ ತಲೆ ಬಸ್ಸಿನ ಟಾಪ್‌ಗೆ ತಾಗಿತು. ಕಣ್ಣುಕತ್ತಲೆ ಹೋದಂತಾಗಿ ಆ ವಿದ್ಯಾರ್ಥಿನಿ ಏನೇನೋ ಮಾಡನಾಡಲು ತೊಡಗಿದಳು. **"ಅಮ್ಮ ಬೇಕು, ಅಮ್ಮಾ ಬಾ, ನನಗೆ ಅಮ್ಮ ಬೇಕು"** ಎಂದು ಹೇಳಲು ತೊಡಗಿದಳು. ನಾನು ಮತ್ತು ನಮ್ಮ ಅದೀಕ್ಷರಾಗಿದ್ದ ಶಿವಪ್ಪ ಪೂಜಾರಿಯವರು ಕಂಗಾಲಾಗಿದ್ದೆವು. ಧೈರ್ಯ ಹೇಳಲು ಶ್ರೀಮತಿ ಅಡ್ವೆ ಸುನಂದಾ ಮೇಡಂ ಇದ್ದರು. ಹಾಗಾಗಿ ಅವರು ಆ ಹುಡುಗಿಯ ಅಮ್ಮನಂತೆ ಸಮಜಾಯಿಷಿ ಮಾತನಾಡಿ ನಿದ್ರೆ ಮಾಡುವಂತೆ ಮಾಡಿದರು. ಗಡಿಬಿಡಿಯಾದ ನಮ್ಮ ಪ್ರಾಂಶುಪಾಲರು ಶಿವಪ್ಪ ಪೂಜಾರಿಯವರು ಪಳನಿಗೆ ಹೋಗುವ ತನಕ ವಿದ್ಯಾರ್ಥಿನಿಯರಿಂದ ದೇವರ ಭಜನೆ ಮಾಡುವಂತೆ ಆದೇಶ ನೀಡಿದರು. ಮಕ್ಕಳೆಲ್ಲಾ ಭಜನೆ ಮಾಡುತ್ತಾ ಪಳನಿ ಸೇರುವಾಗ ರಾತ್ರಿ ಘಂಟೆ 11 ಆಗಿತ್ತು. ಮೊದಲೇ ನಾವು ಕಾದಿರಿಸಿದ್ದ ಹೋಟೇಲಿನ ಹಾಲ್‌ನಲ್ಲಿ ವಿದ್ಯಾರ್ಥಿನಿಯರಿಗೆ ವಿಶ್ರಾಂತಿಗೆ ಸೂಚಿಸಿದೆವು. ನಮ್ಮ ಮಕ್ಕಳು ಹಾಲ್ ಸೇರುವ ಮೊದಲೇ ಒಬ್ಬ ಅಡಗಿ ಕುಳಿತಿದ್ದುದು, ಅವನು ಲೈಟ್ ಹಾಕಿದ ಕೂಡಲೇ ಓಡಿದ್ದು ಎಲ್ಲಾ ಘಟನೆ ಈಗಲೂ ನನ್ನ ಮೈ ರೋಮಾಂಚನಗೊಳಿಸುತ್ತದೆ. (ಬಳಿಕ ಇಡೀ ರಾತ್ರಿ ವಿದ್ಯಾರ್ಥಿನಿಯರು ಬೆಳಕಿನಲ್ಲೇ ನಿದ್ದೆ ಮಾಡಿದ್ದರು.)

ಪ್ರತೀ ಬಾರಿಯಂತೆ 5 ಗಂಟೆಗೆ ಬಸ್ಸಿಗೆ ತಮ್ಮತಮ್ಮ ಲಗೇಜು ಹಾಕಿದ ಬಳಿಕ ವಿದ್ಯಾರ್ಥಿನಿಯರು ಪಳನಿ ಬೆಟ್ಟಕ್ಕೆ ನಡೆದುಕೊಂಡು ಹೋಗುವ ಕ್ರಮ. ಹೋಗುವಾಗ ಮೆಟ್ಟಲಿನಲ್ಲಿ ಹೋಗದೆ ರಸ್ತೆಯಲ್ಲಿ ಭಜನೆ ಮಾಡುತ್ತಾ ಮೇಲಕ್ಕೆ ಹೋಗುವುದು. 800–900 ಮೆಟ್ಟಲಿನಷ್ಟು ಏರಬೇಕಾದ ಬೆಟ್ಟವನ್ನು ಭಜನೆ ಮಾಡಿಕೊಂಡು ಹೋದಾಗ ಮೇಲೇರಿದ್ದೇ ಗೊತ್ತಾಗುತ್ತಿರಲಿಲ್ಲ. ಅಷ್ಟು ಎತ್ತರದಲ್ಲೂ ಅತೀ ಸುಂದರವಾಗಿ ಕಪ್ಪು ಶಿಲೆಯಿಂದಲೇ ರಚಿಸಿದ್ದ ಅದ್ಭುತವಾದ ದೇವಸ್ಥಾನ ನೋಡಿ **ಸುಬ್ರಹ್ಮಣ್ಯ ದೇವರ ದರ್ಶನ** ಕ್ಯೂನಲ್ಲಿ ನಿಂತು ನೋಡಿ ಮನಸ್ಸಿಗೆ ಸಂತೋಷವಾಯ್ತು. ಒಂದು ವರ್ಷ ಒಂದು ಮಂಗ ನಮ್ಮ ವಿದ್ಯಾರ್ಥಿನಿಯ ಕೂದಲಿನಲ್ಲಿದ್ದ ಹೂವಿನ ಆಕಾರದ ರಬ್ಬರ್ ಬ್ಯಾಂಡನ್ನು ಎಳೆದೊಯ್ದು ಮಾಡಿನ ಮೇಲೆ ಕುಳಿತುಕೊಂಡಿತು. ಬಾಳೆ ಹಣ್ಣು ಬಿಸಾಡಿ ಬ್ಯಾಂಡನ್ನು ಪಡೆದೆವು. ದೇವರ ದರ್ಶನವಾದ ಬಳಿಕ ಎಲ್ಲರೂ ಒಟ್ಟಾಗಿ ಕೆಳಗೆ ಇಳಿದೆವು. ಒಂದು ವರ್ಷ ಹೀಗೆ ಇಳಿಯುವಾಗ ಒಬ್ಬ ವಿದ್ಯಾರ್ಥಿನಿಗೆ ಕೈಕಾಲು ನಿಶ್ಶಕ್ತಿ ಬಂದು ಕೊನೆಯ ಹಂತದಲ್ಲಿ ಮೂರ್ಛೆ ತಪ್ಪಿ ಬಿದ್ದಳು. ಅವಳನ್ನು 5–6 ಹುಡುಗಿಯರು ಎತ್ತಿಕೊಂಡು

ಬಸ್ಸಿನ ತನಕ ಬಂದರು. ಬಳಿಕ ಬಸ್ಸಿನಲ್ಲಿ ನಾವು ತಂಗಿದ್ದ ಹೋಟೇಲಿಗೆ ಹೋಗಿ ಎಲ್ಲಾ ವಿದ್ಯಾರ್ಥಿನಿಯರನ್ನು ಬೆಳಗ್ಗಿನ ಟಿಫಿನಿಗೆ ಕಳುಹಿಸಿ 5–6 ವಿದ್ಯಾರ್ಥಿನಿಯರು ಹಾಗೂ ನಾಲ್ಕು ಪ್ರಶಿಕ್ಷಕರು ನಾವು ಆಸ್ಪತ್ರೆಗೆ ಬಸ್ಸಿನಲ್ಲಿ ಹೋದೆವು. ಅಲ್ಲಿ ಅವಳಿಗೆ ಸ್ಮೃತಿ ಬಂದಾಗ ಅವಳು ಹೆದರಿ ನಡುಗುತ್ತಿದ್ದಳು. ಆಸ್ಪತ್ರೆಗೆ ಇಷ್ಟರತನಕ ಹೋಗಿರದ ಆಕೆ **"ನಾವು ಇಲ್ಲಿಂದ ಹೋಗುವ,** ನನಗೆ ಹೋಗಬೇಕೆಂದು ಹಟ ಹಿಡಿದಳು. ಡಾ| 9 ಗಂಟೆಗೆ ಬಂದರು. ಡಾಕ್ಟರರು 103" ಜ್ವರ ಇದ್ದುದರಿಂದ ಅವಳಿಗೆ ಇಂಜೆಕ್ಷನ್ ಕೊಡಬೇಕಾಗುತ್ತದೆ" ಎಂದರು. **ಬೇಡವೇ ಬೇಡ – "ನಾನು ಹೋಗುತ್ತೇನೆಂದು"** ಕಿರುಚಾಡಿದಳು. ಅನಿವಾರ್ಯವಾಗಿ 5–6 ಹುಡುಗಿಯರು ಕೈಕಾಲು ಗಟ್ಟಿ ಹಿಡಿದು ಇಂಜೆಕ್ಷನ್ ಕೊಟ್ಟು ಕಳುಹಿಸಿದ ಘಟನೆ ಈಗಲೂ ನನ್ನ ನೆನಪಿನಲ್ಲಿ ಅಚ್ಚಳಿಯದೆ ಉಳಿದಿದೆ.

**ಮರೆಯಲಾಗದ ಘಟನೆ :** ಒಂದು ವರ್ಷ ರಾತ್ರಿ ಪಳನಿಗೆ ಹೋದಾಗ 12 ಗಂಟೆ. ವಿದ್ಯಾರ್ಥಿನಿಯರನ್ನು ವಿಶ್ರಾಂತಿ ಪಡೆಯಲು ಹೇಳಿ ನಾನು ಮತ್ತು ಅಧೀಕ್ಷಕರಾಗಿದ್ದ ಶಿವಪ್ಪ ಪೂಜಾರಿಯವರು ಒಂದು ಕೊಠಡಿ ಬಾಡಿಗೆ ಪಡೆದು ಮಲಗಿದ್ದೆವು. 5–30ಕ್ಕೆ ಎಲ್ಲರೂ ಬಸ್ಸಿಗೆ ಲಗೇಜು ಹಾಕಿ ರೆಡಿಯಾಗಲು ಮೊದಲ ರಾತ್ರಿ ವಿಶ್ರಾಂತಿಗೆ ತೆರಳುವಾಲೇ ಸೂಚಿಸಿದ್ದೆ. ನಾನು ನಾಲ್ಕು ಗಂಟೆಗೆ ಎದ್ದು **ಹೂ ಮಾರಾಟಗಾರನ ವೇಷ** ಹಾಕಿದೆ. ಕೂಲಿಂಗ್ ಗ್ಲಾಸ್ ಕನ್ನಡಕ ಹಾಕಿ ಗಡ್ಡ ಎಲ್ಲ ಇಟ್ಟು ಮುಸ್ಲಿಂ ಟೋಪಿ ಹಾಕಿ ಮಕ್ಕಳು ಹೊರಗೆ ಹೋಗುವ ದಾರಿ ಬೆಂಚಿನಲ್ಲಿ ಕುಳಿತು ಹೂ ಮಾರಾಟಕ್ಕೆ ತೊಡಗಿದೆ. ಹೂವನ್ನು 5 ಗಂಟೆಗೆ ಹೊಟೇಲಿನ ಎದುರು ಗಾಡಿಯಲ್ಲಿ ಹೂ ಮಾರುವವನಲ್ಲಿ ಪಡೆದು ಸಣ್ಣ ಸಣ್ಣ ತುಂಡನ್ನಾಗಿ ಕತ್ತರಿಸಿ ಇಟ್ಟಿದ್ದೆ. ವಿದ್ಯಾರ್ಥಿನಿಯರು ಬ್ಯಾಗ್ ಬೆಡ್‌ಗಳನ್ನು ತರುತ್ತಿರುವಾಗ ಹೂ ಮಾರುವ ನನ್ನನ್ನು ನೋಡಿಕೊಂಡು ಹೋದರು. ಬಸ್ಸಿಗೆ ಲಗ್ಗೇಜು ಹಾಕಿ ನನ್ನ ಬಳಿ ಬಂದು ಹೂವಿನ ಬೆಲೆ ಎಲ್ಲ ಕೇಳಿದರು. ನನಗೆ ಭಾಷೆ ಮಲೆಯಾಳಂ ಬಾರದ ಕಾರಣ ಸ್ವಲ್ಪ ಸ್ವಲ್ಪ ಕ್ಯಾಷರ್‌ನಲ್ಲಿ ಕಲಿತುಕೊಂಡಿದ್ದೆ. ಕೆಲವು ಮೂಕ ಭಾಷೆಯಲ್ಲೇ ಹೇಳಿದಾಗ ವಿದ್ಯಾರ್ಥಿನಿಯರು ಅರ್ಥೈಸಿಕೊಂಡು ಹೂ ತೆಗೆದುಕೊಂಡರು. ನನ್ನನ್ನು ನೋಡಿದ ಕೆಲವು ವಿದ್ಯಾರ್ಥಿನಿಯರು ತುಳುವಿನಲ್ಲಿ ನನ್ನನ್ನು ಕುರಿತು **"ಆಯೆ ಕಲ್ವನಕ್ಕಾ ಉಲ್ಲೆಯಾ? ರಾತ್ರಿಗ್ ಕೂಲಿಂಗ್ ದಾಯೆಗ್ ಉಂಬ್ಯಗ್"** ಆದನ್ನು ಹೇಳುತ್ತಾ 10–12 ಜನ ವಿದ್ಯಾರ್ಥಿನಿಯರು ಲಗೇಜ್ ಮಾಡಿದ ಬಳಿಕ ಬಂದು ನನ್ನಲ್ಲಿ ಹೂ ತೆಗೆದುಕೊಂಡರು. 1 ರೂಪಾಯಿಗೆ ಮಾರುತ್ತಿದ್ದ ಹೂವನ್ನು ಹೊರಗೆ ಗಾಡಿಯವ 25 ಪೈಸೆಗೆ ಕೊಡುತ್ತಿದ್ದ. ಗಾಡಿಯವನಲ್ಲಿ ಕೆಲವು ವಿದ್ಯಾರ್ಥಿನಿಯರು ಹೂ ತೆಗೆದುಕೊಂಡರು. 1 ರೂಪಾಯಿಗೆ ನಾಲ್ಕು ಪಟ್ಟು ಹೂ ಗಾಡಿಯವನಲ್ಲಿ ಸಿಗುವುದಾದ್ದರಿಂದ ನನ್ನಲ್ಲಿ ಹೂ ತೆಗೆದುಕೊಂಡ ಹುಡುಗಿಯರು ಹೂ ತಂದು ನನ್ನ ಬುಟ್ಟಿಗೆ ಬಿಸಾಡಿ ತುಳುವಿನಲ್ಲಿ ಬೈದರು. **"ಕಲ್ವೆ, ಆಯನ ಪೂ ಆಯಗೇ ಇಪ್ಪಡ್"** ಎಂದು ಕೆಲವರು **"ಬಜೀ ಮೋಸಗಾರೇ – ನಮನ್ ಮಂಗೆ ಮಲ್ತಿನಿ ತೂಲಗೆ"** ಎಂದು ಕೆಲವರು ಹೇಳಿದರು. ನನ್ನ ಒಳ ಮನಸ್ಸು ಇವರ ವರ್ತನೆಗೆ ನಗುತ್ತಾ ಇತ್ತು. 5.30ಕ್ಕೆ ಸರಿಯಾಗಿ ಶಿವಪ್ಪ ಪೂಜಾರಿಯವರು 8–10 ವಿದ್ಯಾರ್ಥಿನಿಯರ ಜೊತೆಗೆ ಬಸ್ಸಿಗೆ


**ನನ್ನ ವೇಷ**

ಬರುತ್ತಾ ನನ್ನನ್ನು ಕುರಿತು ಹೇಳಿದರು. **"ಬಡವ ಕಾಣಿಸುತ್ತದೆ ಅವನಲ್ಲಿ ಹೂ ತೆಗೆದು ಕೊಳ್ಳಿ ಮಕ್ಕಳೇ"** ಎಂದರು. ಸಾರ್ ಅವನು ಬಹಳ **"ದಗಲ್ ಬಾಜಿ"** ಮೋಸಗಾರ ಇಷ್ಟು ಸಣ್ಣ ಹೂವಿಗೆ 1 ರೂಪಾಯಿಯಂತೆ ಹೊರಗೆ 1 ರೂಪಾಯಿಗೆ ದೊಡ್ಡ ಮಾಲೆ ಸಿಗುತ್ತದೆ ಸಾರ್ ಎನ್ನುತ್ತಾ ಹೊರ ನಡೆದರು. ಬಸ್ಸಿನಲ್ಲಿ ಎಲ್ಲಾ ಮಕ್ಕಳು ಕುಳಿತ ಬಳಿಕ ನಾನು ನನ್ನ ಬುಟ್ಟಿ ಹಿಡಿದುಕೊಂಡು ಬಸ್ಸಿನ ಬಳಿ ಬಂದಾಗ ಮುಸುಕು ಮುಸುಕಾಗಿ ಬೆಳಗ್ಗಿನ ಬೆಳಕಿನಲ್ಲಿ ನಾನು ಕುಂಟುತ್ತಾ ಬಂದುದನ್ನು ಗಮನಿಸಿದ ವಿದ್ಯಾರ್ಥಿನಿಯರಿಗೆ ಬಸ್ಸು ಹತ್ತಿದನಂತ್ರ ತಿಳಿಯಿತು. **'ಇದು ನಮ್ಮ ಡ್ರಾಯಿಂಗ್ ಸಾರ್'** ಎಂದು ಜೋರಾಗಿ ಬೊಬ್ಬೆ ಹೊಡೆದು **"ಡ್ರಾಯಿಂಗ್ ಸಾರ್"** ಎಂದು ಎಲ್ಲಾ ಮಕ್ಕಳು ನಕ್ಕಿದ್ದೇ ನಕ್ಕಿದ್ದು. ಈಗಲೂ ಘಟನೆ ನೆನಪಿಸಿದಾಗ ನಗು ಬರುತ್ತಿದೆ. ಮಕ್ಕಳ ಪ್ರವಾಸದಲ್ಲಿ ಪ್ರತೀ ವರ್ಷ ಏನಾದರೂ ವೇಷ ಹಾಕಿ ಪ್ರವಾಸದಲ್ಲಿ ಮನೋರಂಜನೆ ಮಾಡುತ್ತಿದ್ದೆ. ವಿದ್ಯಾರ್ಥಿನಿಯರೊಂದಿಗೆ ನಾನೂ ಸಹೋದರನಂತೆ ಪ್ರೀತಿ ವಿಶ್ವಾಸದಿಂದ ಮಾತನಾಡಿಸುತ್ತಿದ್ದೆ. ಪಳನಿಯಿಂದ ಊಟಿಗೆ ಬರುವಾಗ 2–3 ಗಂಟೆ ಊಟಿಯಲ್ಲಿ ಸರಿಯಾದ ಸಸ್ಯಹಾರಿ ಹೊಟೇಲಿಲ್ಲದೆ ಪರದಾಡಬೇಕಾಗುತ್ತದೆ. ಊಟಿಯಲ್ಲಿ ತುತ್ತತುದಿಗೆ ಹೋಗಿ ಹೂತೋಟ ವೀಕ್ಷಿಸುತ್ತಾ ಹೋಗುವುದು ದೋಣಿ ವಿಹಾರ ಮಾಡುವುದು ಕುದುರೆ ಸವಾರಿ ಚಳಿಗೆ ಸ್ವೆಟರ್ ತೆಗೆದುಕೊಳ್ಳುವುದು ಸಾಮಾನ್ಯ. ಇಲ್ಲಿಯ ಮಸಾಲೆ ಚಹಾ ಬಹಳ ರುಚಿ ಇರುತ್ತದೆ. ಬಳಿಕ ನಾವು **ಸುಸೈಡ್ ಸ್ಪಾಟ್** ನೋಡಿ ಬಂದೆವು. ಬಳಿಕ ಊಟಿಯಿಂದ ಮೈಸೂರು ತಲುಪುವಾಗ ರಾತ್ರಿ 11 ಗಂಟೆ ಆಗುತ್ತದೆ ಮೊದಲೇ ಹರ್ಷ ರೋಡಿನಲ್ಲಿರುವ **"ಹೋಟೇಲ್ ಗೋವರ್ಧನ"**ದಲ್ಲಿ ಹಾಲ್ ಬುಕ್ ಮಾಡಿರುತ್ತೇವೆ. ವಿದ್ಯಾರ್ಥಿನಿಯರು ಊಟ ಮಾಡಿದ ಬಳಿಕ ವಿಶ್ರಾಂತಿಗೆ ಕಳುಹಿಸಿ ನಾವು ಕೊಠಡಿಯಲ್ಲಿ ವಿಶ್ರಾಂತಿ ಪಡೆಯುವುದು ಸಾಮಾನ್ಯ.

**ಒಂದು ವರ್ಷ** ಮೈಸೂರಿಗೆ ರಾತ್ರಿ ಬಂದು ವಿದ್ಯಾರ್ಥಿನಿಯರನ್ನು ವಿಶ್ರಾಂತಿಗೆ ಕಳುಹಿಸಿದ ಬಳಿಕ ನನ್ನ ಕೊಠಡಿಯಲ್ಲಿ ಮಲಗಿ 4 ಗಂಟೆಗೆ ಎದ್ದು ಹೂ ಮಾರುವವನ ವೇಷ ಹಾಕಿ ಬಸ್ಸು ನಿಂತಿದ್ದ ಇನ್ನೊಂದು ಬದಿ ಬೀದಿ ಬೆಳಕಿನಲ್ಲಿ ಹೂ ಮಾರಲು ಕುಳಿತೆ. ಮೈಸೂರಲ್ಲಿ ಕಡಿಮೆ ದುಡ್ಡಿಗೆ ದೊಡ್ಡ ಹೂ ಸಿಕ್ಕಿದ್ದರಿಂದ 1 ರೂ. ಗೆ ಒಂದು ಮೊಳದಷ್ಟು ಹೂ ಕೊಡಲು ಅನುಕೂಲವಾಯ್ತು, ಹಾಗಾಗಿ ವಿದ್ಯಾರ್ಥಿನಿಯರು ಬಸ್ಸಿಗೆ ಲಗೇಜು ಹಾಕಿ ನನ್ನ ಗುರುತು ಹಿಡಿಯದೆ (ನನ್ನ ಸ್ವರ ಬದಲಾಯಿಸಿ ಹೂ ಮಾರಾಟ ಮಾರುತ್ತಿದ್ದೆ) ನನ್ನ ಮಾತು ಕನ್ನಡ ಆದ್ದರಿಂದ ಹೆಚ್ಚಿನ 20–25 ವಿದ್ಯಾರ್ಥಿನಿಯರು ಹೂ ಪಡೆದರು. ಹತ್ತಿರದ ಮಸೀದಿಯಲ್ಲಿ ಬೆಳಿಗ್ಗೆ 5.45ಕ್ಕೆ ಸುಪ್ರಭಾತ ಬಾಂಗ್ ಆದಾಗ ನಾನು ಸಾಮಾನ್ಯನಂತೆ ಕುಳಿತು ಹೂ ಮಾರುತ್ತಿದ್ದೆ. ಇದನ್ನು ಕಂಡ 2–3 ಮುಸ್ಲಿಂ ಹುಡುಗಿಯರಿಗೆ ಸಂಶಯ ಬಂದು ಮುಸ್ಲಿಂ ಆದ ಈತ ಬಾಂಗ್ ಆಗುವಾಗ ಟೋಪಿ ತೆಗೆಯಲಿಲ್ಲ. ಆದ್ದರಿಂದ ಇವ ಯಾರೋ ಬೇರೆ ಜನ ಎಂದು ನನ್ನ ಹತ್ತಿರ ಬಂದು ನಿಂತು ವೇಷ ಹಾಕಿ ಕುಳಿತಿದ್ದ ವಿಷಯ ತಿಳಿಯಿತು. ಮತ್ತೆ ಓಡಿ ಹೋಗಿ ಬಸ್ಸಿನಲ್ಲಿದ್ದ ಎಲ್ಲರನ್ನೂ ಕರಕೊಂಡು ಬಂದು **"ಡ್ರಾಯಿಂಗ್ ಸಾರ್"** ಎಂದು ಎಲ್ಲರೂ ಒಟ್ಟಾಗಿ ಬೊಬ್ಬೆ ಹೊಡೆದು ನಕ್ಕರು, ನಲಿದಾಡಿದರು, ಕುಶಿಪಟ್ಟರು. ಬಳಿಕ ನಾನು ಎಲ್ಲರಿಗೂ ಹೂ ಕೊಟ್ಟು ಡ್ರಾಯಿಂಗ್ ಮಾಸ್ಟರ್ ಆಗಿ ಬಸ್ಸಿನ ಟ್ರಿಪ್ಪಿನ ಮಾರ್ಗದರ್ಶಕನಾಗಿ ಡ್ರೈವರಲ್ಲಿ ಚಾಮುಂಡಿ ಬೆಟ್ಟಕ್ಕೆ

ಕರಕೊಂಡು ಹೋದೆ. ಮಹಿಷಾಸುರನ ಎದುರು ಗ್ರೂಪ್ ಪೋಟೋ ತೆಗೆಸಿಕೊಂಡು ಸಾಲಾಗಿ ನಮ್ಮ ವಿದ್ಯಾರ್ಥಿನಿಯರು **ಚಾಮುಂಡೇಶ್ವರಿ ದರ್ಶನ** ಪಡೆದು ಹಿಂದಿರುಗಿ ಬರುವಾಗ ನಂದಿಯನ್ನು ನೋಡಿ ಕೆಳಗೆ ಬಂದೆವು.

**ಮರೆಯಲಾಗದ ಘಟನೆ:** ಒಂದು ವರ್ಷ ಚಾಮುಂಡಿ ಬೆಟ್ಟದಲ್ಲಿ ನಮ್ಮ ವಿದ್ಯಾರ್ಥಿನಿಯರನ್ನು ಅಲ್ಲಿಯ ಲೈಬ್ರೆರಿಗೆ ಪುಸ್ತಕ ಖರೀದಿಸಲು ಕಳುಹಿಸಿದೆ. ಎಲ್ಲರೂ ಹೊರ ಬಂದ ಬಳಿಕ ಬಸ್ಸಿಗೆ ಹತ್ತುವಾಗ ಒಬ್ಬ ಲೈಬ್ರೇರಿಯ ಜವಾನ ನಮ್ಮ ಒಂದು ಪುಸ್ತಕ ಕಳುವಾಗಿದೆ. ನಿಮ್ಮ ವಿದ್ಯಾರ್ಥಿನಿಯರು ಕದ್ದಿದ್ದಾರೆ ಎಂದು ಅಪವಾದ ಹಾಕಿದ. ಎಲ್ಲರಲ್ಲೂ ಮೈಕ್ ಹಿಡಿದು ಗಟ್ಟಿಯಾಗಿ ಸಿಟ್ಟಿನಿಂದ ವಿಚಾರಿಸಿದೆ. ಯಾರೂ ಹೇಳಲಿಲ್ಲ, ಯಾರೂ ಹೇಳದ ಕಾರಣ ಸಿಟ್ಟು ತಡೆಯಲಾರದೆ ಎಲ್ಲರ ಬ್ಯಾಗ್, ಹ್ಯಾಂಡ್ ಬ್ಯಾಗ್ ಚೆಕ್ ಮಾಡಿದಾಗ ಒಬ್ಬ ವಿದ್ಯಾರ್ಥಿನಿಯಲ್ಲಿ ಆ ಪುಸ್ತಕ ಸಿಕ್ಕಿತು. ಬಳಿಕ ಅರ್ಧ ಗಂಟೆ ಕಳ್ಳತನ ಮಾಡಿದರೆ ಎಷ್ಟೊಂದು ಅಪಹಾಸ್ಯಕ್ಕೆ ಈಡಾಗುತ್ತೀರಿ ಎಂದು ಸಾಮೂಹಿಕ ಬುದ್ದಿ ಹೇಳಿ ಕೆಳಗೆ ಇಳಿದು **ಮೈಸೂರು ಅರಮನೆಯ** ಅಂದವನ್ನು ವೀಕ್ಷಿಸಿದೆವು. ಅಂದಿನ ರಾಜರು ಚಿತ್ರಕಲೆಗೆ ಕೊಡುತ್ತಿದ್ದ ಮಹತ್ವ, ರಾಜ ಸಿಂಹಾಸನ, ಸಭಾ ಮಂಟಪ, ಎಲ್ಲವನ್ನೂ ನೋಡಿದ ಬಳಿಕ **ಸೈಂಟ್ ಫಿಲೋಮಿನಾ ಚರ್ಚ್, ಜಯಚಾಮರಾಜೇಂದ್ರ** ಚಿತ್ರಕಲಾ ಶಾಲೆಯಲ್ಲಿ ಪ್ರದರ್ಶನಕ್ಕೆ ಇಟ್ಟಿದ್ದ, ನೂರಾರು ಪೈಂಟಿಂಗ್‌ಗಳು, ರಾಜಾ ರವಿವರ್ಮನು ರಚಿಸಿದ ಅದ್ಭುತವಾದ ದೊಡ್ಡದೊಡ್ಡ ಮೂಲ ತೈಲವರ್ಣ ಚಿತ್ರ ನೋಡಿ ಬೆರಗಾದೆವು.

ಬಳಿಕ **ಮೃಗಾಲಯ** ವಿವಿಧ ಹಕ್ಕಿ, ಪ್ರಾಣಿಗಳು ಕಾಡುಮೃಗಗಳು, ಹಾವುಗಳು, ಹುಲಿ, ಸಿಂಹಗಳು ಎಲ್ಲವೂ ಅದ್ಭುತ. ಬಳಿಕ **ಮ್ಯೂಸಿಯಂ** ವೀಕ್ಷಿಸಿ ಹೊರಬಂದು ಊಟದ ಬಳಿಕ **ಶ್ರೀರಂಗಪಟ್ಟಣ**ದ ಕಡೆಗೆ ನಮ್ಮ ಪ್ರಯಾಣ. ಟಿಪ್ಪು **ಅರಮನೆ ಬೇಸಿಗೆ ಅರಮನೆ ತ್ರಿವೇಣಿ ಸಂಗಮ – ಶ್ರೀರಂಗಸ್ವಾಮಿ ದೇವಸ್ಥಾನ ರಂಗನತಿಟ್ಟು ಪಕ್ಷಿಧಾಮ,** ಎಲ್ಲ ನೋಡಿ ಅಲ್ಲಿಂದ ಅತೀ ಸುಂದರವಾದ ಕೃಷ್ಣರಾಜಸಾಗರದ **ಕನ್ನಂಬಾಡಿ ಅಣೆಕಟ್ಟು** ನೋಡಲು ಹೋದೆವು. ಅರ್ಧಾಂಶ ಅಣೆಕಟ್ಟಿನಲ್ಲಿ ಹೋದಬಳಿಕ ನೀರಿನ ಅತೀ ಸುಂದರವಾದ ಅಗಾಧವಾಗಿ ಹೂಗಳಿಂದ ತುಂಬಿರುವ ಗಾರ್ಡನ್ ನೋಡಿದಾಗ ಅದೆಷ್ಟು ಸಂತೋಷವಾಗುತ್ತದೆ ಎಂದು ವರ್ಣಿಸಲು ಕಷ್ಟ. ಅಲ್ಲಿ ಹೋಗಿಯೇ ಆ ಸಂತೋಷ ಅನುಭವಿಸಬೇಕು. **ಸರ್. ಎಂ. ವಿಶ್ವೇಶ್ವರಯ್ಯರು** ಕಟ್ಟಿದ ನಮ್ಮ ರಾಜ್ಯಕ್ಕೆ ನೀಡಿದ ಅಮೂಲ್ಯವಾದ ವಿಶ್ವದ ಎಲ್ಲಾ ಜನರು ಜೀವನದಲ್ಲಿ ಒಮ್ಮೆಯಾದರೂ ನೋಡಲೇಬೇಕಾದ ವಿಶ್ವಪ್ರಖ್ಯಾತಿ ಅಣೆಕಟ್ಟು **ಕನ್ನಂಬಾಡಿ,** ದೋಣಿ ವಿಹಾರಕ್ಕೆ ಅವಕಾಶವಿದೆ. ನಮ್ಮಲ್ಲಿ ಕೆಲವರು ಹೋಗಿ ಬಂದು ಅನುಭವಿಸಿ ಸಂತೋಷಪಟ್ಟರು. ಬಳಿಕ ಕನ್ನಂಬಾಡಿಯ ಇನ್ನೊಂದು ಭಾಗದಲ್ಲಿ ಸಂಜೆ 7 ಗಂಟೆಗೆ ಪ್ರಾರಂಭವಾಗುವ **ಸಂಗೀತ ಕಾರಂಜಿಯ** ಸೊಬಗನ್ನು ಕಂಡು ಬೆರಗಾದೆವು. ಹಿಂತಿರುಗಿ 9 ಗಂಟೆಗೆ ಮೈಸೂರು ಪೇಟೆಗೆ ಬಂದು ಊಟ ಮಾಡಿ ಮಂಗಳೂರಿಗೆ ರಾತ್ರಿ ಹಿಂತಿರುಗುವ ಪ್ರಯಾಣ.

**ಮರೆಯಲಾಗದ ಘಟನೆ:** ಒಂದು ವರ್ಷ ಮೂರು ಜನ ಮಹಿಳಾ ಪ್ರಶಿಕ್ಷಕಿಯರೊಂದಿಗೆ ನಾನೊಬ್ಬನೇ ಪುರುಷ ಪ್ರಶಿಕ್ಷಕ ಪ್ರವಾಸ ಕೈಕೊಂಡಿದ್ದೆವು. ಆ ಪ್ರವಾಸದಲ್ಲಿ ನನಗೆ ಪೂರ್ಣ ಜವಾಬ್ದಾರಿ ಇದ್ದುದರಿಂದ ವೇಷ ಹಾಕಲಿಲ್ಲ. ವರ್ಷವೂ ವೇಷ ಹಾಕುತ್ತಿದ್ದ ನನ್ನನ್ನು

ನನ್ನ ಜೊತೆಗಿದ್ದ ಪ್ರಶಿಕ್ಷಕಿಯರು ಪ್ರಶ್ನಿಸಿದ್ದರು. "ನೀವು ಈ ಬಾರಿ ವೇಷ ಹಾಕಲೇ ಇಲ್ಲ ಏನು? ಎಂದು" ಜವಾಬ್ದಾರಿ ಹೆಚ್ಚು ಇದ್ದುದರಿಂದ ಹಾಕುವುದಿಲ್ಲ ಎಂದಿದ್ದೆ. ಆ ವರ್ಷ ಕೆ.ಆರ್.ಎಸ್. ಕನ್ನಂಬಾಡಿ ನೋಡಿ ಬಂದಾಗ ರಾತ್ರಿ 9 ಗಂಟೆ. ಮೈಸೂರಿನ ಮಹಾರಾಜಾ ಹೋಟೇಲಲ್ಲಿ ಊಟಕ್ಕೆ ವಿದ್ಯಾರ್ಥಿನಿಯರನ್ನು ಒಳ ಕಳುಹಿಸಿದೆ ನನಗೆ ಹೊಟ್ಟೆ ಸರಿಯಿಲ್ಲ ನೀವೆಲ್ಲಾ ಹೋಗಿ ಎಂದು ಮಹಿಳಾ ಪ್ರಶಿಕ್ಷಕಿಯರನ್ನು ಕಳುಹಿಸಿ ನಾನು ಡ್ರೈವರ್ ಕ್ಲೀನರ್ ಸಹಾಯದಿಂದ ಬಸ್ಸಿನಲ್ಲಿ ಸೆಂಟ್ ಮಾರುವವನಂತೆ ವೇಷ ಹಾಕಿ ರಸ್ತೆ ಬದಿಯ ಲೈಟ್ ಕಂಬದ ಬುಡದಲ್ಲಿ ಬೀದಿ ಬೆಳಕಿನಲ್ಲಿ ಕುಳಿತೆ. ನಮ್ಮ ವಿದ್ಯಾರ್ಥಿನಿಯರು ಹೊರ ಬಂದಾಗ ಸ್ವರ ಬದಲಾಯಿಸಿ **"ಸೆಂಟ್ ಬೇಕಾ ಸೆಂಟ್ ? ... ಸ್ಯಾಡಲ್ ವುಡ್ ಸೆಂಟ್"**. ಮೂಗಿನ ತನಕ ಕುಡಿದವನಂತೆ ಬೀಳುತ್ತಾ ಏಳುತ್ತಾ **"ಬೇಕಾ"** ಎಂದು ಹುಡುಗಿಯರು ಬಂದಾಗ ಕುಂಟುತ್ತಾ ಕುಂಟುತ್ತಾ ಹೋಗಿ ವಿಚಾರಿಸುತ್ತಿದ್ದೆ. ಕುಡುಕನಂತೆ ಕಾಣುತ್ತಿದ್ದ ನನ್ನನ್ನು ದೂರದಿಂದಲೇ ನೋಡಿ ಬಸ್ಸಿನ ಕಡೆ ಓಡುತ್ತಿದ್ದರು. **"ಪರ್ಪೆಲೆ ಸೆಂಟ್ ಮಾರ್ನು ತೂಲ, ಸರ್ತ ಉಂತರೆಗ್ ಆಪುಜಿ, ಈ ರಾತ್ರಿ ಸೆಂಟ್ ಮಾರ್ನು ಮರ್ಲೆನಾ ದಾನ್ಯ"** ಎಂದು ತುಳುವಿನಲ್ಲಿ ಬೈಯುತ್ತಿದ್ದರು. 2–3 ಹುಡುಗಿಯರು ಬಸ್ಸಿನ ಕಡೆ ಊಟ ಮುಗಿಸಿ ಬಂದಾಗಲೆಲ್ಲ ನಾನು ಹುಡುಗಿಯ ಹತ್ತಿರ ಬರುತ್ತಿದ್ದೆ. ಅವರು ನನ್ನನ್ನು ನೋಡಿ ಹೆದರಿ ಓಡುತ್ತಿದ್ದರು. ಡ್ರೈವರನ್ನು ನಾನು ಕರೆದು ಹೋಟೇಲಿನ ಒಳಗೆ ಹೋಗಿ ನಮ್ಮ ಮಕ್ಕಳಲ್ಲಿ ಹೇಳಿ **"ಒಬ್ಬ ಕುಡುಕ ಇದ್ದಾನೆ. ಊಟ ಮಾಡಿ ಹೋಗುವಾಗ ಜಾಗ್ರತೆ"** ಎಂದು ಹೇಳಲಿಕ್ಕೆ ಸೂಚಿಸಿದೆ. ಹೀಗೆ ಕೆಲವು ಹುಡುಗಿಯರು ಹೆದರಿ ನಾಲ್ಕೈದು ಮಂದಿ ಒಟ್ಟಾಗಿ ಬರತೊಡಗಿದರು. ಅವರಷ್ಟಕ್ಕೆ ಹೇಳಿಕೊಳ್ಳುತ್ತಿದ್ದರು. **"ಆಯೆನೆ ತೋಜೊಡು. ಸೆಂಟ್ ಮಾರುನಾಯೆ. ರಾತ್ರಿಗ್ ಸೆಂಟ್ ಮಾರುವೆ 'ಪರ್ಪೆಲೆ' ತೋಜೋಡು ಮಾಲೊಂದುಲ್ಲೆ ನಮ್ಮ ಕೈತಡೆಗೆ ಬರೊಂದುಲ್ಲೆಯಾ, ಬಲ್ಪುಗಾ"** ಎಂದು ಬಸ್ಸಿಗೆ ಓಡಿದರು. ಇನ್ನೊಂದು ಗುಂಪು ನನ್ನನ್ನು ಕಂಡು ಹಿಂದಕ್ಕೆ ಓಡಿದರು. ಇನ್ನೊಂದು ಗುಂಪು ನಾನು ಬರುವುದನ್ನು ನೋಡಿ **"ಪೊಣ್ಣು ಮರ್ಲೆನಾ ದಾನ್ಯಾ ನಮ್ಮ ಬಸ್ ತೂದೆ ಬೈದನಾ ದಾನ್ಯಾ"** ಹೀಗೆ ಬಸ್ಸಿಗೆ ಹತ್ತಿ ಬಸ್ಸಿನ ಶಟ್ಟರ್ ಎಲ್ಲಾ ಎಳೆದು ಮುಚ್ಚಿದರು.

ನಾನು ಬೀದಿ ಲೈಟ್ ಕಂಬದ, ಬಳಿ ಕುಳಿತು ಕುಡುಕನಂತೆ ಏಳುತ್ತಾ ಬೀಳುತ್ತಾ ಸೆಂಟ್ ಮಾರುತ್ತಿರುವುದನ್ನು ನೋಡಿದ ಹೋಟೇಲ್ ಮೆನೇಜರ್ ಹಿಂದಕ್ಕೆ ಓಡಿ ಬಂದು ಹುಡುಗಿಯರಿಗೆ ಧೈರ್ಯ ಹೇಳಿ ಬಸ್ಸಿನ ಕಡೆ ಅವರನ್ನು ಕರಕೊಂಡು ಬಂದರು. ಅವರನ್ನು ಕಳುಹಿಸಿ ನನ್ನ ಹತ್ತಿರ ಬಂದು ನನ್ನನ್ನು ಗದರಿಸಿ ಇಲ್ಲಿಂದ ದೂರ ಹೋಗುತ್ತೀಯಾ ಅಥವಾ ಹೋಟೇಲಿನ ಕೆಲಸದವರಲ್ಲಿ ನಿನಗೆ ಹೊಡೆಸಲಾ? ಎಂದು ಹೇಳಿದರು. ಆವಾಗ ನನಗೆ ಹೆದರಿಕೆ ಪ್ರಾರಂಭವಾಗಿ ಬಸ್ ಡ್ರೈವರಲ್ಲಿ ಮೆಲ್ಲಗೆ ಹೋಗಿ ಹೇಳಿದೆ. "ಮೇನೇಜರ್‌ಗೆ ಯಾರೆಂಬ ವಿಷಯ ತಿಳಿಸಿ" ಎಂದು – ಹಾಗೆ ಅವರು ಮೆನೇಜರರಲ್ಲಿ ತಿಳಿಸಿದಾಗ ಮೇನೇಜರ್ ಹೊರಗೆ ಬಂದು ಹುಡುಗಿಯರು ಹೆದರುವುದನ್ನು ನೋಡಿ ಮನಸ್ಸಿನಲ್ಲೇ ನಗುತ್ತಿದ್ದರು. ನಮ್ಮ ಮೂರು ಜನ ಮಹಿಳಾ ಪ್ರಶಿಕ್ಷಕಿಯರು ಅಧೀಕ್ಷಕಿ (ಪ್ರಾಚಾರ್ಯರು) ಸೇರಿ ಊಟದ ಬಿಲ್ಲು ಪಾವತಿಸಿ ಹೊರಗೆ ಬಂದು ಬಸ್ಸು ಹತ್ತುತ್ತಾ ಡ್ರೈವರಲ್ಲಿ ನನಗೆ ಬೈದರು. ಡ್ರಾಯಿಂಗ್ ಮಾಸ್ಟ್ರು ಬೇಜವಾಬ್ದಾರಿಯಾಗಿ ನಮ್ಮ ಹುಡುಗಿಯರನ್ನು ಬಿಟ್ಟು ಎಲ್ಲಿ ಹೋಗಿದ್ದಾರೆ. ಅಲ್ಲೊಬ್ಬ ಕುಡುಕನ ಉಪದ್ರದಿಂದ ನಮ್ಮ ಹುಡುಗಿಯರೆಲ್ಲಾ ಹೆದರಿದ್ದಾರೆ

ಎಂದು. ಡ್ರೈವರಲ್ಲಿ ನಾನು ಮೊದಲೇ ತಿಳಿಸಿದ್ದೆ. ಮುಂದೆ ಒಂದು ಜಾಗದಲ್ಲಿ ಡ್ರಾಯಿಂಗ್ ಮಾಸ್ಟ್ರು ಮತ್ತೆ ಸಿಗುವುದಾಗಿ ಹೇಳಿದ್ದಾರೆ. ನಾವು ಹೋಗೋಣವಾ ಎಂದು, ಡ್ರೈವರ್ ಬಸ್ ಸ್ಟಾರ್ಟ್ ಮಾಡಿದಾಗ ನಾನು ಬಸ್ಸಿನ ಮೆಟ್ಟಲು ಹತ್ತಿದೆ. ಹತ್ತಿದ್ದೇ ತಡ ನೋಡಿದ ಹುಡುಗಿಯರೆಲ್ಲಾ ಹೆದರಿ ಜೋರಾಗಿ ಬೊಬ್ಬೆ ಹೊಡೆದರು. **"ಓ.. ಅಮ್ಮಾ".. "ಕುಡುಕ ಬಂದ"** ಎಂದು. **ಸುಜಾತ** ಎಂಬ ಒಬ್ಬಳು ಹೆದರಿ ಮೂರ್ಚೆ ಹೋಗುವಂತಿದ್ದಳು. ಕೂಡಲೇ ನನ್ನ ಗಡ್ಡ ಟೊಪ್ಪಿ ತೆಗೆದು "ನಾನು ಡ್ರಾಯಿಂಗ್ ಸಾರ್ ಹೆದರಬೇಡಿ ಮಕ್ಕಳೇ" ಎಂದು ಹೇಳಿದಾಗ ಎಲ್ಲರೂ ನಕ್ಕಿದ್ದೇ ನಕ್ಕದ್ದು. ಬಿದ್ದುಬಿದ್ದು ನಕ್ಕರು. ಮಕ್ಕಳ ಅಂದಿನ ಸಂತೋಷ ಇಂದೂ ನನ್ನ ನೆನಪಿನಲ್ಲಿ ಅಚ್ಚಳಿಯದೆ ಉಳಿದಿದೆ.

ಅಧ್ಯಾಪಕರಾದವರು ಶಾಲೆಯಿಂದ ವಿದ್ಯಾರ್ಥಿಗಳನ್ನು ಹೊರಗೆ ಕರಕೊಂಡು ಹೋಗುವಾಗ ಮಕ್ಕಳಂತೆ ಅವರೊಂದಿಗೆ ಕೂಡಿ ಆಡಿ ಆನಂದ ಪಡೆಯುವುದೇ ನನ್ನ ಉದ್ದೇಶವಾಗಿತ್ತು. ಹಾಗೆಯೇ ನಮ್ಮ ಶಿಕ್ಷಕಿ ವಿದ್ಯಾರ್ಥಿನಿಯರು ಮುಂದಿನ ಅವರ ಪ್ರವಾಸಗಳನ್ನು ಹೇಗೆ ರೂಪಿಸಬೇಕು ಎಂದು ಹೇಳಿಕೊಡುತ್ತಿದ್ದೆ – ಮಾಡಿ ತೋರಿಸುತ್ತಿದ್ದೆ.

## ಮಗ ಗುರುಪ್ರಸಾದನ ಉಪನಯನ

10–5–1989ರಂದು ಬುಧವಾರ 10–45 ಕರ್ಕಾಟಕ ಲಗ್ನದಲ್ಲಿ ನನ್ನ ಮಗ **"ಗುರುಪ್ರಸಾದನಿಗೆ"** ನಮ್ಮ ಕುಲ ದೇವಸ್ಥಾನ **ಮುಂಡ್ಕೂರು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನದ ಬಳಿ ಇರುವ ಶ್ರೀ ರಾಘವೇಂದ್ರ ಕಲಾಮಂದಿರದಲ್ಲಿ ಬ್ರಹ್ಮೋಪದೇಶ** ನಡೆಯಿತು. ಶ್ರೀಯುತ ಕುತ್ಯಾರು **"ನಾರಾಯಣ ತಂತ್ರಿ"**ಗಳು ಪುರೋಹಿತರಾಗಿ ಬಂದು ಗಾಯತ್ರಿಮಂತ್ರ ಉಪದೇಶಿಸಿದರು. ಸಾಮಾನ್ಯವಾದ ರೀತಿಯಲ್ಲಿ ಉಪನಯನ ನಡೆಯಿತು. 300–350 ಜನರು ಆಗಿದ್ದರು.

25–5–89ರಂದು ಗುರುವಾರದಂದು ಇದೇ ದೇವಸ್ಥಾನದಲ್ಲಿ ನನ್ನ ದೊಡ್ಡಕ್ಕ **"ಸುಮತಿ"**ಯಕ್ಕನವರ 2ನೇ ಮಗಳು **ಶ್ರೀಲತಾಳ** ಮತ್ತು **ಶ್ರೀಷ ಉಪಾಧ್ಯಾಯ**ರೊಂದಿಗೆ **ವಿವಾಹ** ಇದ್ದುದರಿಂದ ನನ್ನ ಉಪನಯನಕ್ಕೆ ತಂದಿದ್ದ ವಸ್ತುಗಳಲ್ಲಿ ಉಳಿದುದನ್ನೆಲ್ಲಾ ಅಕ್ಕನವರಿಗೆ ಬಿಟ್ಟು ನಾವು ಕಾವೂರಿಗೆ ಹೋದೆವು. ಆವಾಗ ನಾನು ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ಚಿತ್ರಕಲಾ ಪ್ರಶಿಕ್ಷಕನಾಗಿದ್ದೆ.

## ಸೌಮ್ಯ – ದೇವಿಪ್ರಸಾದ್ ವಿವಾಹ

**ಕಣಂತೂರು ತೋಡಕುಕ್ಕಿನಾರ್ ವೈದ್ಯನಾಥೇಶ್ವರ** ದೈವಸ್ಥಾನ ಆಡಳಿತ ಮೊಕ್ತೇಸರರಾಗಿದ್ದ **ಶ್ರೀಯುತ ಪಿ.ಬಿ.ಕೆ ಪೊಯ್ಯತ್ತಾಯರು** ಹಾಗೂ ಧರ್ಮಪತ್ನಿ **ಶ್ರೀಮತಿ ರಾಧಾ ಪೊಯ್ಯತ್ತಾಯರು**. ಇವರು ತಮ್ಮ ಸಂಬಂಧ ಸುಳ್ಯದ ದೊಡ್ಡ ತೋಟ ಮನೆತನದ **ಶ್ರೀಯುತ ನಾರಾಯಣ ರಾಯರ** ಮತ್ತು **ಕೃಷ್ಣವೇಣಿ** ದಂಪತಿಗಳಿಂದ **ದೇವಿಪ್ರಸಾದ** ಎಂಬ ಹೆಸರಿನ ನಾಲ್ಕು ವರ್ಷದ ಮಗುವನ್ನು ದತ್ತು ಪಡೆದು ಬಾಳೆಪುಣಿ ಗ್ರಾಮದ ತಮ್ಮ **ಪೊಯ್ಯತ್ತಬೈಲು ಬೀಡುಮನೆಯಲ್ಲಿ** ಸಾಕಿ ಬೆಳೆಸಿ **ಉಪನಯನ** ಮಾಡಿ ತಮ್ಮ ಮಗನಂತೆ **ಬಿ.ಎಸ್ಸಿ** ತನಕ ಕಲಿಸಿ ಬೆಳೆಸುತ್ತಾರೆ. ದತ್ತು ಪುತ್ರನನ್ನು ಅತೀ ಪ್ರೀತಿಯಿಂದ ಬೆಳೆಸಿದ ಇವರು ಮಗನಿಗೆ 24 ವರ್ಷ ತುಂಬಿದಾಗಲೇ ಕನ್ಯಾನ್ವೇಷಣೆಗೆ ಪ್ರಾರಂಬಿಸುತ್ತಾರೆ.





ನನ್ನ ಪ್ರಥಮ ಪುತ್ರಿ **'ಸೌಮ್ಯ'**ಳನ್ನು ಎಸ್.ಎಸ್.ಎಲ್.ಸಿ ಓದಿಸಿದ ಬಳಿಕ ಬೊಂದೇಲ್ ಡಬ್ಲೂ.ಪಿ.ಟಿಯಲ್ಲಿ ಮೂರು ವರ್ಷದ ಟಿ.ಸಿ ಕೋರ್ಸ್ ಮಾಡಿಸಿದೆ. ಆವಾಗ ಇಪ್ಪತ್ತು ವರ್ಷ. ನಾನೂ ವರಾನ್ವೇಷಣೆಗೆ ತೊಡಗಿದೆ. ಸೌಮ್ಯಳ ಜಾತಕ ಪೊಯ್ಯತ್ತಾಯರಿಗೆ ಸಿಕ್ಕಿದ ಕಾರಣ ಅದೂ ಹೊಂದಿಕೆಯಾದ ಕಾರಣ ನನ್ನಲ್ಲಿ ವಿಚಾರಿಸಿ ಹುಡುಗಿ ಒಪ್ಪಿಗೆ ಸಿಕ್ಕಿದ ಕಾರಣ ಮದುವೆಗೆ ದಿನ ನಿಶ್ಚಯ ಮಾಡಿದೆ. **ಮಾಣಿ ಬೆಟ್ಟಿನ ಮೂಡುಮಠದಲ್ಲಿ** ಗುರುಹಿರಿಯರ ಸಮ್ಮುಖದಲ್ಲಿ ನಿಶ್ಚಿತಾರ್ಥವಾಯಿತು.



9-2-1995ರಂದು ಮಾಣಿಬೆಟ್ಟಿನ ಮೂಡುಮಠದಲ್ಲಿ ನನ್ನ ಮಗಳು **'ಸೌಮ್ಯ'** ಮತ್ತು ಪೊಯ್ಯತ್ತ ಬೈಲ್‌ನ ಶ್ರೀಯುತ ಪಿ.ಬಿ.ಕೆ ಪೊಯ್ಯತ್ತಾಯರ ರಾಧಾ ಬಾಲಕೃಷ್ಣ ಪೊಯ್ಯತ್ತಾಯರ ದತ್ತುಮಗ **'ದೇವಿಪ್ರಸಾದ'** (ದೊಡ್ಡ ತೋಟ-ಸುಳ್ಯ - ಇಲ್ಲಿಯ ನಾರಾಯಣ ರಾವ್ - ಕೃಷ್ಣವೇಣಿಯವರ ಪುತ್ರ) ನೊಂದಿಗೆ **24-5-1995ರಂದು ಪುನರೂರಲ್ಲಿ ವಿಶ್ವನಾಥ ದೇವಸ್ಥಾನದಲ್ಲಿ ವಿವಾಹ**ವೆಂದು ಗುರುಹಿರಿಯರಿದ್ದು ನಿಶ್ಚಯವಾಯ್ತು. ನನ್ನ ತಂದೆ ತಾಯಿಯವರು ಕೃಷ್ಣ ಆಸ್ರಣ್ಣರು ಭುಜಂಗರಾಯರು ಕಾವೂರು ಶ್ರೀನಿವಾಸ ಭಟ್ರು - ಶಿಬರೂರು ಹಯಗ್ರೀವ ತಂತ್ರಿಗಳು ನೆರಿಯ ಶ್ರೀಯುತ ರಾಘವ ಹೆಬ್ಬಾರ್ ಮುಂತಾದ ಹಿರಿಯ ವ್ಯಕ್ತಿಗಳು ಇದ್ದರು.



**24-5-1995ರಂದು ಪುನರೂರು ವಿಶ್ವನಾಥ ದೇವರ ಸನ್ನಿಧಿಯಲ್ಲಿ** ಪುನರೂರು ಪಟೇಲರ ವ್ಯವಸ್ಥೆಯಲ್ಲಿ ವಿಜೃಂಭಣೆಯಿಂದ **ಸೌಮ್ಯ ದೇವಿಪ್ರಸಾದ ವಿವಾಹ**ವಾಯ್ತು. ಅದೇ ದಿನ ಪ್ರಥಮ ಮಹಡಿಯ ಹಾಲ್‌ನಲ್ಲಿ ನನ್ನ ಚಿಕ್ಕಪ್ಪ ಶ್ರೀನಿವಾಸ ಉಪಾಧ್ಯಾಯ - ಪದ್ಮಾಕ್ಷಿಯವರ ಮಗ **ಮೋಹನ** ಹಾಗೂ **ಸುಖನ್ಯಾಳ** ಜೊತೆಗೆ ವಿವಾಹವಿತ್ತು. ಮೋಹನನಿಗೆ ಕಾಲು ನೋವಾಗಿ ಬ್ಯಾಂಡೇಜ್ ಹಾಕಿಕೊಂಡೇ ಮಾಲೆ ಹಾಕಿದ. ಅವನು - ನಾನು ಜೊತೆಯಾಗಿ ಸಂಬಂಧಿಕರಿಗೆ ವಿವಾಹಕ್ಕೆ ಕರೆಯೋಲೆ ಕೊಡಲು ಬೈಕಿನಲ್ಲಿ ಹೋಗಿದ್ದೆವು. 1800 ಜನ ಸಂಬಂಧಿಕರು ಮತ್ತು ಅತಿಥಿ ಅಭ್ಯಾಗತರಿಂದ ಪುನರೂರು ದೇವಸ್ಥಾನ ತುಂಬಿತ್ತು. 4 ವರ್ಷದ ಬಳಿಕ **18-05-1998ರಂದು ಪ್ರಥಮ ಪುತ್ರಿ ಶರಣ್ಯ, 25-06-2004ರಂದು ದ್ವಿತೀಯ ಪುತ್ರಿ ಸೌಜನ್ಯ, 25-02-2009ರಂದು ಸುದೀಪ್‌ಕೃಷ್ಣನ ಜನನವಾಯ್ತು.**

**ಮರೆಯಲಾಗದ ಘಟನೆ:** 1994ರಲ್ಲಿ ಒಂದು ದಿನ ನನ್ನ ಗ್ರಹಚಾರ ಕೆಟ್ಟಿತೋ ಏನೋ ನಾನು ಎಂದಿನಂತೆ ಟಿ.ಸಿ.ಎಚ್ ವಿದ್ಯಾರ್ಥಿನಿಯರ ಪಾಠಕ್ಕೆ ಸಂಬಂಧಿಸಿದ ಚಾರ್ಟ್ಸ್ ಬಿಡಿಸುತ್ತಿದ್ದೆ. 11 ವರ್ಷದಲ್ಲೂ ನಾನು ಮಾಡುತ್ತಿದ್ದ ಮುಖ್ಯ ಕೆಲಸ ಮಕ್ಕಳ ಪಾಠಕ್ಕೆ ಬೇಕಾದ

ಚಾರ್ಟ ಬಿಡಿಸಿಕೊಡುವುದು. ನನ್ನ ವಿದ್ಯಾರ್ಥಿನಿಯರು ಅವರ ಪಾಠಕ್ಕೆ ಬೇಕಾದ ಚಿತ್ರ ಬಿಡಿಸಲಿಕ್ಕೆ ಬಾರದ್ದರಿಂದ ಬೇರೆ ಕಲಾವಿದರನ್ನು ಚಾರ್ಟ್ ಮಾಡುವವರನ್ನು ಹುಡುಕುತ್ತಾ ಹೋಗುತ್ತಾರೆ. ನನಗೆ ಬಿಡು ಸಮಯ ತುಂಬಾ ಇರುವುದರಿಂದ ಕೇವಲ 2 ಅವಧಿ ಪಾಠ ಮಾಡಿ ಸಾವಿರಗಟ್ಟಲೆ ಸಂಬಳ ಪಡೆಯುವುದು ನನ್ನ ಮನಸ್ಸಿಗೇನೋ ನೋವಾಗುತ್ತಿತ್ತು. ಹಾಗಾಗಿ ನಮ್ಮ ಶಿಕ್ಷಣ ತರಬೇತಿ ಪಡೆಯುತ್ತಿರುವ ಟಿ.ಸಿ.ಎಚ್. ವಿದ್ಯಾರ್ಥಿನಿಯರಿಗೆ ಬೇಕಾದ ಚಾರ್ಟಗಳಿಗೆ ಕೇವಲ ಪೆನ್ಸಿಲಿನಿಂದ ಔಟ್‌ಲೈನ್ ಹಾಕಿ ಕೊಡುತ್ತಿದ್ದೆ. ಪ್ರತಿ ವಿದ್ಯಾರ್ಥಿನಿಯರೂ ವರ್ಷದಲ್ಲಿ ಸುಮಾರು 60 ಪಾಠ ಮಾಡಬೇಕಾದರೆ ಕನಿಷ್ಠ 60 ಚಾರ್ಟ್ ಬಿಡಿಸಬೇಕು. ಅವರಿಗೆ ಸಹಾಯವಾಗಲೆಂದು ನಾನು ಬಿಡಿಸಿಕೊಡುತ್ತಿದ್ದೆ. ಬಳಿಕ ಅವರು ಬಣ್ಣ ಹಾಕಿ ಪೂರ್ಣ ಮಾಡುತ್ತಿದ್ದರು.

ನನ್ನ ಜಾಗದಲ್ಲಿ ಕುಳಿತು ಚಾರ್ಟ್ ಬಿಡಿಸಿಕೊಡುತ್ತಿದ್ದಾಗ ಒಬ್ಬ ಪ್ರಶಿಕ್ಷಕಿ ನನ್ನ ಮನಸ್ಸಿಗೆ ನೋವಾಗುವಂತೆ ಮಾತನಾಡಲು ಪ್ರಾರಂಭಿಸಿದರು. ಎಲ್ಲರ ಎದುರಿಗೆ ಕೇಳುವಂತೆ ಮಾತನಾಡಲು ಪ್ರಾರಂಭಿಸಿದರು. **"ಡ್ರಾಯಿಂಗ್ ಮಾಸ್ಟ್ರು ಟ್ರೈನಿಂಗ್ ಶಾಲೆಯಲ್ಲಿ ಇರುವ ಉದ್ದೇಶ ಏನು? ಟಿಸಿಎಚ್‌ನವರಿಗೆ ಕಲಿಸಲಿಕ್ಕೋ? ಅಥವಾ ಅವರಿಗೆ ಚಾರ್ಟ್ ಬಿಡಿಸಿ ಕೊಡಲಿಕ್ಕೋ**? ನನಗೆ ಕೇಳುವ ಹಾಗೆ ಹೇಳಿದ್ದರಿಂದ ನನಗೆ ತುಂಬಾ ನೋವಾಯ್ತು. ನೊಂದುಕೊಂಡು ಕೂಡಲೇ ಹೊರ ಬಂದು ಕುಳಿತೆ. ತುಂಬಾ ಆಲೋಚನೆ ಮಾಡಿದೆ. ಈ ಮಾತಿಗೆ ಯಾವ ರೀತಿಯಲ್ಲಿ ಪ್ರತಿಕ್ರಯಿಸಬೇಕೆಂದೇ ತಿಳಿಯಲಿಲ್ಲ. ಟಿಸಿಎಚ್‌ನವರಿಗೆ ಚಿತ್ರಕಲೆ ಎನ್ನುವ ವಿಷಯ ಕಲಿಸಿ ಬರುವಂತದ್ದಲ್ಲ. ಅವರಿಗೆ ಎಸ್‌ಎಸ್‌ಎಲ್‌ಸಿ ತನಕ ಚಿತ್ರ ಕಲಿಸುವ ಅಧ್ಯಾಪಕರೇ ಇರುವುದಿಲ್ಲ. ಒಂದು ಗೆರೆಯನ್ನು ನೆಟ್ಟಗೆ ಎಳೆಯಲು ಬಾರದ ವಿದ್ಯಾರ್ಥಿನಿಯರು ಬಹಳ ಕ್ಲಿಷ್ಟವಾದ ಚಿತ್ರ – ಚಾರ್ಟ ಬಿಡಿಸುವುದು ಕಷ್ಟ, ಕಲಿಸುವುದೂ ಕಷ್ಟ. ಶಾಲೆ ಬಿಟ್ಟ ಬಳಿಕ ನಾನು ಚಿತ್ರ ಕಲಿಸಲು ಕುಳಿತರೆ ಇದೇ ಪ್ರಶಿಕ್ಷಕಿ ನನ್ನ ಮೇಲೆ ಅಪಪ್ರಚಾರದ ಕಿರೀಟ ಇಡುತ್ತಾರೆ ಖಂಡಿತಾ. ಹಾಗಾಗಿ ಅಧೀಕ್ಷಕರಾಗಿದ್ದ (ಪ್ರಾಂಶುಪಾಲರು) **ಶ್ರೀಯುತ ಶಿವಪ್ಪ ಪೂಜಾರಿ**ಯವರಲ್ಲಿ ನನ್ನ ನೋವು ಅಳಲನ್ನು ಹೇಳಿಕೊಂಡೆ. ಅದಕ್ಕೆ ಅವರು 'ನೀವೇ ಬಗೆಹರಿಸಿಕೊಳ್ಳಿ' ಎಂದರು. ರಾತ್ರಿ ತನಕ ಅದೇ ಚಿಂತೆಯಲ್ಲಿದ್ದೆ. ರಾತ್ರಿ ಒಂದು ಆಲೋಚನೆ ಹೊಳೆಯಿತು. ಮರುದಿನ ಒಂದು ತಗಡಿನ ಕಾಣಿಕೆ ಡಬ್ಬ ನನ್ನ ಟೇಬಲ್ ಮೇಲೆ ಇರಿಸಿ ಟಿ.ಸಿ.ಎಚ್. ವಿದ್ಯಾರ್ಥಿನಿಯರಿಗೆ ತಿಳಿಸಿದೆ. ಇನ್ನು ಮುಂದೆ ನಾನು ಚಿತ್ರ ಬಿಡಿಸಿಕೊಡಬೇಕಾದರೆ ನಿಮಗೆ ಅನಿಸಿದಷ್ಟು ಹಣವನ್ನು ಡಬ್ಬಕ್ಕೆ ಹಾಕಬೇಕೆಂದು – ಮಕ್ಕಳು ದುಡ್ಡು ಹಾಕುತ್ತಾ ನನ್ನಲ್ಲಿ ಚಿತ್ರ ಮಾಡಿಸಿ ಕೊಳ್ಳಲಾರಂಭಿಸಿದರು. ತರಗತಿ ಬೀಳ್ಕೊಡುಗೆ ಸಮಾರಂಭದ ವೇಳೆ ಪ್ರತೀ ವರ್ಷ ಮಕ್ಕಳಲ್ಲಿ ಆ ಡಬ್ಬದಲ್ಲಿ ಸಂಗ್ರಹವಾದ ಹಣವನ್ನು ಲೆಕ್ಕ ಮಾಡಿ ಮಕ್ಕಳಿಗೂ ತಿಳಿಸಿ ಅದನ್ನು ಟೀಚರ್ ಕೋ.ಓ. ಸೊಸ್ಯಾಟಿ ಮಂಗಳೂರು ಶಾಖೆ ಇಲ್ಲಿ ಇಡುತ್ತಿದ್ದೆ. ಹಾಗೆಯೇ ಅದನ್ನು 2000ನೇ ಇಸವಿ ತನಕದ ಎಫ್.ಡಿ. ಇಡುತ್ತಾ ಬಂದೆ. 2000ನೇ ಇಸವಿಯಲ್ಲಿ ನನಗೆ ಸರಕಾರಿ ಬಿ.ಎಡ್. ಕಾಲೇಜಿಗೆ ಬಡ್ತಿ ಹೊಂದಿ ಉಪನ್ಯಾಸಕನಾಗಿ ಹೋದೆ. ಹೋದಾಗ ಡಬ್ಬಿ ಹಣ ಲೆಕ್ಕ ಮಾಡಿದಾಗ ಇದ್ದ **2000/– ರೂ.ವನ್ನು ಚಿತ್ರಕಲೆಯಲ್ಲಿ ಅದ್ವಿತೀಯ ಸಾಧನೆ ಮಾಡಿದ ಎಲ್ಲಾ ಪ್ರತಿಭೆಗಳಲ್ಲೂ ಪ್ರಥಮ ಸ್ಥಾನ ಬರುತ್ತಿದ್ದ ಸುಳ್ಯ ಐವರನಾಡಿನ ಕವಿತಾ ಸಿ.ಕೆ. ಎಂಬ ಟಿ.ಸಿ.ಎಚ್.ನ ತರಬೇತಿ ವಿದ್ಯಾರ್ಥಿನಿಗೆ ಚಿತ್ರಕಲಾ ಪ್ರೋತ್ಸಾಹ ನಿಧಿ** ಎಂದು

ಕೊಟ್ಟೆ. ಅವಳ ಚಿತ್ರಕಲಾ ಪ್ರತಿಭೆಯನ್ನು ಕಂಡು ನನಗೆ ತುಂಬಾ ಸಂತೋಷವಾಗಿತ್ತು. ಪ್ರತಿ ವರ್ಷವೂ ಟಿಸಿಎಚ್‌ನ ವಿದ್ಯಾರ್ಥಿನಿಯರಿಗೆ ನನ್ನ ವೈಯಕ್ತಿಕ ಪ್ರೋತ್ಸಾಹ ಧನವಾಗಿ ರೂ. 500/– ಕೊಡುತ್ತಿದ್ದೆ.

## "ಜಿ.ಆರ್. ಉಪಾಧ್ಯಾಯ ಚಿತ್ರಕಲಾ ಪ್ರೋತ್ಸಾಹ ನಿಧಿ"

**ಎಲ್ಲೂರು ಕಾಶೀ ಸಂತಾನ ಟ್ರಸ್ಟ್‌ನಲ್ಲಿ ಜಿ.ಆರ್. ಉಪಾಧ್ಯಾಯ ಚಿತ್ರಕಲಾ ಪ್ರೋತ್ಸಾಹನಿಧಿಯಾಗಿ ಡಬ್ಬದಲ್ಲಿ ಸಂಗ್ರಹವಾದ ಹಣ 18 ಸಾವಿರ ರೂ. ಶಾಶ್ವತ ಠೇವಣಿ ಇರಿಸಿದೆ.**

2000ನೇ ಇಸವಿಯಲ್ಲಿ ನಾನು ಬಿ.ಎಡ್ ಕಾಲೇಜಿಗೆ ಭಡ್ತಿ ಹೊಂದಿದಾಗ ನನ್ನ ಡಬ್ಬಿಯ ಉಳಿತಾಯ ಮಾಡಿದ ಹಣದ ಮೊತ್ತ ರೂ. 18,000/–ವಾಗಿತ್ತು. ಇದನ್ನು ನನ್ನ ಹೆಸರಿನಲ್ಲಿ ಇಟ್ಟಲ್ಲಿ ನನ್ನ ನಂತರದಲ್ಲಿ ಮಗ ಅಪ್ಪನ ಹಣ ಎಂದು ಗ್ರಹಿಸಿ ಖರ್ಚು ಮಾಡುತ್ತಾನೆ. ಎಂದು ಆ ಹಣವನ್ನು ಎಲ್ಲೂರು **ಕಾಶೀ ಸಂತಾನದ ಟ್ರಸ್ಟ್** ನಡೆಸುತ್ತಿರುವ ಅದಮಾರಿನ ಪ್ರಾಮಾಣಿಕ, ಆದರ್ಶ ಶಿಕ್ಷಕ ಸಂಭಾವಿತರಾದ **"ಸುದರ್ಶನ ನಿಲಯದ" ಶ್ರೀಯುತ ವೈ. ಶ್ರೀಧರರಾಯರಲ್ಲಿ ಕೊಟ್ಟು, "ಜಿ.ಆರ್. ಉಪಾಧ್ಯಾಯ, ಚಿತ್ರಕಲಾ ಪ್ರೋತ್ಸಾಹ ನಿಧಿ"** ಎಂಬ ಹೆಸರಿನಲ್ಲಿ ಶಾಶ್ವತ ಠೇವಣಿಗೆ ಇಟ್ಟೆ. ಅದರ 10% ಬಡ್ಡಿಯನ್ನು ಶಾಶ್ವತವಾಗಿ ಬಲ್ಮಠದ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರಥಮ ಹಾಗೂ ದ್ವಿತೀಯ ಡಿ.ಎಡ್. (ಟಿ.ಸಿ.ಎಚ್.) ವಿದ್ಯಾರ್ಥಿನಿಯರಲ್ಲಿ ಒಬ್ಬೊಬ್ಬರಿಗೆ ಅಂದರೆ ಇಬ್ಬರಿಗೆ ಪ್ರೋತ್ಸಾಹಕವಾಗಿ ಕೊಡಬೇಕೆಂದು ವಿಲ್ ಬರೆದು ಸಂಸ್ಥೆಗೆ ಕೊಟ್ಟಿದ್ದೇನೆ. ಪ್ರತೀ ವರ್ಷ ತಲಾ ಇಬ್ಬರಿಗೆ ರೂ. 800/– 900/– ಈಗಲೂ ಕಾಶೀ ಸಂತಾನ ಟ್ರಸ್ಟ್‌ನಿಂದ ಸಿಗುತ್ತಿದೆ. ಇದು ನನಗೆ ಜೀವನದಲ್ಲಿ ಸಂತೋಷ ಕೊಡುತ್ತಿದೆ.


ಶ್ರೀ ಎಸ್.ಎಂ. ರಾಮ ಉಪಾಧ್ಯಾಯ

**ಮರೆಯಲಾಗದ ಘಟನೆ: 17–5–98ನೇ** ಬೆಳಿಗ್ಗೆ ನನಗೆ ಮಾಣಿಬೆಟ್ಟಿನಿಂದ 'ತಂದೆಯವರು ತುಂಬಾ ಅಸೌಖ್ಯದಲ್ಲಿ ಇದ್ದಾರೆ. ಕೂಡಲೇ ಬರಬೇಕು' ಎಂದು ನನ್ನ ತಮ್ಮ ವಿಷ್ಣುಮೂರ್ತಿ ದೂರವಾಣಿಯಲ್ಲಿ ತಿಳಿಸಿದ. ನನ್ನ ಮಗಳು ಸೌಮ್ಯ ತುಂಬು ಗರ್ಭಿಣಿ ಕಾವೂರಿನ ಕೆ.ಎಚ್.ಬಿ.ಎಲ್.ಐ.ಜಿ.–17 ನಮ್ಮ ಮನೆಯಲ್ಲಿ ವಿಶ್ರಾಂತಿಗಾಗಿ ಬಂದಿದ್ದವಳು ಇದ್ದಳು. ಹಾಗಾಗಿ ನನ್ನ ಅಳಿಯ ದೇವಿಪ್ರಸಾದನಿಗೆ ಕೂಡಲೇ ಕಾವೂರಿಗೆ ಬನ್ನಿ ಎಂದು ತಿಳಿಸಿದೆ. ಅವರು ಹಿರಿಯರಾದ ಸಂಬಂಧಿ ಲಕ್ಷ್ಮೀಯಕ್ಕನವರನ್ನು ಕರೆದುಕೊಂಡು ಕಾವೂರಿಗೆ ಬಂದರು. ನಾನು ಬೆಳಿಗ್ಗೆ ವಾಹನ ಮಾಡಿಕೊಂಡು ಉಡುಪಿಗೆ ಹೋಗಿ ನನ್ನ ತಂಗಿ ಆಶಾಳನ್ನು ಕರಕೊಂಡು ಮಾಣಿಬೆಟ್ಟಿಗೆ ಹೋದೆ. ಆವಾಗಲೇ ನನ್ನ ತಂದೆಯವರು ನಮ್ಮನ್ನೆಲ್ಲಾ ಅಗಲಿ

ಸ್ವರ್ಗಸ್ಥರಾಗಿದ್ದರು. **ನನ್ನ ತಂದೆ ಶ್ರೀಯುತ ಎಸ್.ಎಂ. ರಾಮ ಉಪಾಧ್ಯಾಯರು 83ನೇ ವರ್ಷದಲ್ಲಿ ಮೂರು ಪುತ್ರರನ್ನು ನಾಲ್ಕು ಪುತ್ರಿಯರನ್ನು ಹಾಗೂ ಪತ್ನಿ ಕೃಷ್ಣವೇಣಿಯನ್ನು ಅಗಲಿ ಹೋದರು.** ನಮ್ಮ ಮನೆ ಮೂಡುಮಠದ ಕಲಶ ಕಳಚಿ ಬಿತ್ತು. ತಂದೆಯವರ ಮರಣದಿಂದಲಾಗಿ ನಾವೆಲ್ಲಾ ಅನಾಥರಾದ ಅನುಭವವಾಯ್ತು. ದುಃಖದ ವೇದನೆಯಿಂದಲೇ ಹಿರಿಯವನಾದ ನಾನು ಅಗ್ನಿಸ್ಪರ್ಶ ಮಾಡಲೇಬೇಕಾಯ್ತು. ಸಂಜೆ 5 ಗಂಟೆಗೆ ಎಲ್ಲಾ ಕ್ರಿಯೆ ಮುಗಿಸಿ ಗಂಜಿ ಉಂಡು ನನ್ನ ಮಗನನ್ನು ಮರುದಿನ ಬೆಳಿಗ್ಗೆ ಕಾವೂರಿಗೆ ಸೌಮ್ಯಳ ಕ್ಷೇಮ ವಿಚಾರಿಸಲು ಕಳುಹಿಸಿದೆ. ಅದೇ ದಿನ 19–5–98ರಂದು ಸಂಜೆ ಗುರುಪ್ರಸಾದ ಬಂದು ಹೇಳಿದ ಘಟನೆ ಕೇಳಿ ನನಗೆ ಆಶ್ಚರ್ಯವಾಗಿತ್ತು ಮತ್ತು 4 ದಿನದಲ್ಲಿ **ಶ್ರೀನಿವಾಸ ಚಿಕ್ಕಪ್ಪ** ನಿಧನರಾದರು.

**ದೇವಿಪ್ರಸಾದ, ಲಕ್ಷ್ಮೀಯಕ್ಕ** ಕಾವೂರಿಗೆ ಬಂದು ನನ್ನ ಪತ್ನಿ ಮಾಡಿಟ್ಟಿದ್ದ ಅನ್ನ–ಪದಾರ್ಥ ಉಂಡು ಟಿ.ವಿ ನೋಡುತ್ತಿರುವಾಗ ಸೌಮ್ಯಳಿಗೆ ಆಲೋಚನೆಗೆ ಬಂತು. ಅಮ್ಮ ಅಪ್ಪ ಇಲ್ಲದಿದ್ದಾಗ ನಾನು ಹೆತ್ತರೆ ಏನಾಗುತ್ತದೋ ಏನೋ ಎಂದು. ಅಷ್ಟೇ ಆಲೋಚನೆ ಮಾಡಿದಾಗಲೇ ಸೌಮ್ಯಳಿಗೆ ಹೊಟ್ಟೆನೋವು ಪ್ರಾರಂಭವಾಯ್ತು. ಲಕ್ಷ್ಮೀಯಕ್ಕನಲ್ಲಿ ಅಭಿಪ್ರಾಯ ಕೇಳಿದಾಗ ಹೆರುವಾಗ ಬರುವ ಹೊಟ್ಟೆನೋವೇ ಸೌಮ್ಯಳಿಗೆ ಬಂದುದು ಎಂಬುದು ತಿಳಿಯಿತು. ಎದುರು ಮನೆಯಲ್ಲಿ ವಾಸವಾಗಿದ್ದ **ಶ್ರೀಯುತ ಇಸ್ಮಾಯಿಲ್** ಎಂಬವರು ನನ್ನ ಮಗಳು ತುಂಬು ಗರ್ಭಿಣಿಯಾಗಿದ್ದರಿಂದ ಅಗತ್ಯಬಿದ್ದಾಗ ಡಾಕ್ಟರರಲ್ಲಿ ಕರಕೊಂಡು ಹೋಗಬೇಕಾದರೆ ನಮ್ಮಲ್ಲಿ ಕಾರು ಇದೆ. ದಾಕ್ಷಿಣ್ಯ ಮಾಡದೆ ಹೇಳಿ ಎಂದಿದ್ದರು. **ಎಂ.ಐ.ಜಿ–9ರಲ್ಲಿ** ವಾಸವಾಗಿದ್ದ **ಶ್ರೀಯುತ ಆಳ್ವರು** ನಮ್ಮಲ್ಲಿ ತಿಳಿಸಿ ಎಂದಿದ್ದರು. ಎದುರುಮನೆಯ ಇಸ್ಮಾಯಿಲ್‌ರ ಮಗ ಕಾರಿನಲ್ಲಿ ರಾತ್ರಿ 11–00ಕ್ಕೆ ಮಂಗಳೂರು ನರ್ಸಿಂಗ್ ಹೋಂಗೆ ಕರಕೊಂಡು ಹೋದರೆ **ಎಂ.ಐ.ಜಿ–9ರ ಆಳ್ವರು** ಹಾಗೂ **ಎಂ.ಐ.ಜಿ–10 ಶ್ರೀಯುತ ಶಶಿ**ಯವರು ಸ್ಕೂಟರಿನಲ್ಲಿ ಆಸ್ಪತ್ರೆಗೆ ಬಂದು ರಾತ್ರಿ 2 ಘಂಟೆ ತನಕ ಕುಳಿತು ನನ್ನ ಮಗಳು 2 ಗಂಟೆ ವೇಳೆಗೆ ಹೆಣ್ಣು ಮಗುವಿಗೆ ಸಾಮಾನ್ಯ ಹೆರಿಗೆಯಾದ ಬಳಿಕ ಅವರವರ ಮನೆಗೆ ಮರಳಿದರು. ಸೌಮ್ಯ ದೇವಿಪ್ರಸಾದ–ಲಕ್ಷ್ಮೀಯಕ್ಕ ಮಗು ಆಸ್ಪತ್ರೆಯಲ್ಲಿ ಇದ್ದಾರೆ ಎಂದು ತಿಳಿಸಿದ ನನ್ನ ಮಗ. **"ನೆರೆಕರೆಯವರು ನಮ್ಮ ಅತೀ ಹತ್ತಿರದ ಬಂಧುಗಳು"** ಎಂಬುದನ್ನು ಈ ಘಟನೆಯಿಂದ ತಿಳಿಯಬಹುದು. ಎಲ್ಲರೂ ಆರೋಗ್ಯವಾಗಿದ್ದಾರೆಂದು ತಿಳಿದು ಸಂತೋಷವಾಯ್ತು. ನಾನು ನನ್ನ ಪತ್ನಿ ತಂದೆಯವರ, 13ನೇ ದಿನದ ವೈಕುಂಠ ಸಮಾರಾಧನೆ ಮುಗಿಸಿ 14ನೇ ದಿನ ಕಾವೂರಿಗೆ ಬಂದೆವು.

## 1999ನೇ ಇಸವಿಯಲ್ಲಿ ನಡೆದ ಘಟನೆ "ನನ್ನ ಬೈಪಾಸ್ ಸರ್ಜರಿ"

1999 ಮಾರ್ಚ್ ತಿಂಗಳಲ್ಲಿ ಒಂದು ದಿನ ಕೋಟೆಕಾರಿನ ಬಳಿಯಲ್ಲಿ **ಕೊಂಡಾಣ ಬಂಟ ದೈವಸ್ಥಾನ**ದ ಅತ್ಯದ್ಭುತವಾದ ನೇಮ ಜಾತ್ರೆಗೆ ಅಲ್ಲಿಯ ಪ್ರಸಾದಕ್ಕೆ

ಅಧಿಕಾರಿಯಾಗಿದ್ದ **ಜೇಂಕಳ ಶ್ರೀನಿವಾಸ ಭಟ್ರು** ನನ್ನನ್ನು ಕರೆದಿದ್ದರು. ನೇಮೋತ್ಸವ ನೋಡಲು ಜೇಂಕಳ ಶ್ರೀನಿವಾಸ ಭಟ್ರಲ್ಲಿ ಸಂಜೆ 3–4 ಘಂಟೆಗೆ ಹೋದೆ. ನಾನು ಮತ್ತು ಅವರು ಜೊತೆಯಾಗಿ ನೇಮದ ಜಾಗಕ್ಕೆ ನಡಕೊಂಡು ಹೋಗುತ್ತಾ ಎದೆಯಲ್ಲಿ ಶ್ವಾಸ ಬಿಗಿ ಹಿಡಿದಂತಾಯ್ತು. ಅದನ್ನು ಲೆಕ್ಕಿಸದೆ ಜಾತ್ರೆಗೆ ಹೋದೆ. 6–7 ಗಂಟೆ ತನಕ ನೇಮ ನೋಡಿ 8–30, 9ರ ಒಳಗೆ ನನ್ನ ಮನೆಗೆ ಬಂದೆ. ಅನ್ನ – ಸೆಂಡಿಗೆ ಮೆಣಸು, ಮೊಸರು ಹಾಕಿ ಊಟ ಮಾಡಿದೆ. ನನ್ನ ಪತ್ನಿ ಇದ್ದಳು. ರಾತ್ರಿ 10–15 ಬಾರಿ ವಾಂತಿಯಾಯ್ತು. ಬೆಳಿಗ್ಗೆ 9–00ಕ್ಕೆ **ಡಾ। ರಾಮಚಂದ್ರರಾಯರ**ಲ್ಲಿ ಹೇಳಿ ಇಂಜಕ್ಷನ್ ತೆಗೆದುಕೊಂಡು ಬಂದೆ. ವಾಂತಿ ನಿಂತಿತು. ಸಂಜೆ 3–4 ಗಂಟೆ ವೇಳೆಗೆ ಕಟೀಲು ಕೃಷ್ಣ ಅಸ್ರಣ್ಣನವರ ಮಗಳು **ಸುಮಂಗಲಾ** ಹಾಗೂ ಅವರ ಗಂಡ **ದಯಾನಂದ ರಾವ್** ನನ್ನ ಆರೋಗ್ಯ ವಿಚಾರಿಸಿಕೊಂಡು (ಕೆಎಚ್‌ಬಿ/ಎಂಐಜಿ–11ರಿಂದ) ಬಂದರು. ಅವರು ಅಲ್ಲಿ ವಾಸವಾಗಿದ್ದರು. ನಾನು ಬೆವರಿದ್ದನ್ನು ಕಂಡ ಅವರು ಕೂಡಲೇ ಆಸ್ಪತ್ರೆಗೆ ಸೇರಿ ಎಂದರು. ನಾನು **ಡಾ। ಶ್ರೀನಿವಾಸ ಕಕ್ಕಿಲಾಯ**ರಿಗೆ (ನನ್ನ ವೈಯಕ್ತಿಕ ಡಾಕ್ಟರ್) ದೂರವಾಣಿಯಲ್ಲಿ ತಿಳಿಸಿದೆ. ಅದಕ್ಕೆ ಅವರು ಕೂಡಲೇ ವಿಜಯ ಕ್ಲಿನಿಕ್ (ಬಂಟ್ಸ್ ಹಾಸ್ಟೇಲ್ ಬಳಿ)ಗೆ ಬನ್ನಿ ಎಂದರು. ಅಲ್ಲಿ ಇಸಿಜಿ ಪರೀಕ್ಷೆ ನಡೆಸಿದಾಗ **"ಹಾರ್ಟ್ ಎಟ್ಯಾಕ್"** ಆಗಿದೆ. ಹಾಗಾಗಿ ಆಂಬುಲೆನ್ಸ್‌ನಲ್ಲಿ ಕೊಲಾಸೋ ಆಸ್ಪತ್ರೆಗೆ ಸೇರಿಸಿ ಎಂದರು. **ಕೊಲಾಸೋ** ಆಸ್ಪತ್ರೆಯಲ್ಲಿ ಐಸಿಯುನಲ್ಲಿ 13 ದಿನ ಇದ್ದೆ. ಆವಾಗ ನನಗೆ ಬಿಕ್ಕಳಿಕೆ ಬರುತ್ತಿತ್ತು. ಬಿಕ್ಕಳಿಕೆ ಎಲ್ಲರಿಗೆ ಒಂದು ಬಾರಿ ಬರುವುದಾದರೆ ನನಗೆ ಒಮ್ಮೊಮ್ಮೆಗೆ ಎರಡೆರಡು ಬಾರಿ ಬಿಕ್ಕಳಿಗೆ ಬರುವುದರಿಂದ ಎದೆನೋವು ಹೊಟ್ಟೆ ನೋವು ಆಗುತ್ತಿತ್ತು. ಟಿ.ಸಿ.ಯೆಚ್. ವಿದ್ಯಾರ್ಥಿನಿಯರು ಕೊಲಾಸೋಗೆ ಬಂದು ನನ್ನ ಕ್ಷೇಮ ವಿಚಾರಿಸುತ್ತಿದ್ದರು. ಪ್ರಶಿಕ್ಷಕ ವರ್ಗದವರೂ ಬರುತ್ತಿದ್ದರು. 13 ದಿನದ ಬಳಿಕ ನಾನು ಮನೆಗೆ ಬಂದೆ. ಒಂದು ತಿಂಗಳು ವಿಶ್ರಾಂತಿ ಪಡೆದು ಬಲ್ಮಠ ಟ್ರೈನಿಂಗ್ ಶಾಲೆಗೆ ಹೋಗಿ ಪಾಠಕ್ಕೆ ಪ್ರಾರಂಭಿಸಿದೆ. ಸ್ವಲ್ಪ ನಡೆದರೆ ಎದೆನೋವು ಬರುತಿದ್ದುದರಿಂದ ಡಾ। ಎಸ್. ಕಕ್ಕಿಲ್ಲಾಯರಲ್ಲಿ ತಿಳಿಸಿದಾಗ ಹಾರ್ಟ್ ಸ್ಪೆಷಲಿಸ್ಟ್‌ರಲ್ಲಿ ಕಳುಹಿಸಿದರು. ಡಾ। ಪಿ.ಎಸ್. ಭಟ್‌ರವರಲ್ಲಿ ವಿಚಾರಿಸಿದಾಗ ಬೆಂಗಳೂರಿನ ಜಯದೇವ ಆಸ್ಪತ್ರೆಯಲ್ಲಿ ಆಂಜಿಯೋಗ್ರಾಮ್ ಪರೀಕ್ಷೆ ನಡೆಸುವುದು ಒಳ್ಳೆಯದೆಂದರು. ಹಾಗೆ **ನಾನು** ಮತ್ತು **ದೇವಿಪ್ರಸಾದ** ಬೆಂಗಳೂರಿಗೆ ಒಂದು ದಿನ ಹೋಗಿ **ಜಯದೇವದಲ್ಲಿ** ಅಡ್ಮಿಟ್ ಆಗಿ ಮರುದಿನ **ಆಂಜಿಯೋಗ್ರಾಮ್** ಪರೀಕ್ಷೆಗೆ ಹಾಜರಾದೆ. ನನಗೆ ಪರೀಕ್ಷೆ ನಡೆಸಿದ ಬಳಿಕ ಒಂದು ದಿನ ನನ್ನ ಬಲಕಾಲನ್ನು ಅಲ್ಲಾಡಿಸಲೂ ಆಗಲಿಲ್ಲ. ಮುಟ್ಟಿದರೆ ನೋವು ಆಗುತ್ತಿತ್ತು. ಅದರ ಮರುದಿನ ರಾತ್ರಿ ನಾನು ಮತ್ತು ದೇವಿಪ್ರಸಾದ ಮಂಗಳೂರಿಗೆ ರಿಪೋರ್ಟ್ ಹಿಡಿದುಕೊಂಡು ಬಂದೆವು. ಆದರೆ ರಿಪೋರ್ಟ್‌ನಲ್ಲಿ ನಾಲ್ಕು ನರಗಳಲ್ಲಿ 2 ಮುಖ್ಯ ನರ ಬ್ಲಾಕ್ ಆಗಿದೆ ಎಂದೂ, ಒಂದು ನರ 80% ಬ್ಲಾಕ್ ಆಗಿದೆ ಎಂದೂ ಹೇಳಿದರು. ಕೂಡಲೇ ಬೈಪಾಸ್ ಸರ್ಜರಿ ಮಾಡಿಸಬೇಕೆಂದು ರಿಪೋರ್ಟ್ ನೋಡಿದ ಡಾಕ್ಟರ್‌ಗಳು ಹೇಳಿದರು. ನನ್ನ ರಿಪೋರ್ಟ್ ನೋಡಿದ ಸಂಬಂಧಿಕರೆಲ್ಲಾ ಆದಷ್ಟು ಬೇಗ

ಆಪರೇಷನ್ ಮಾಡಿಸು ಎಂದರು. ಹೆಚ್ಚಿನ ಡಾಕ್ಟರರು ಹೇಳಿದ ಅಭಿಪ್ರಾಯ **"ಒಂದು ವರ್ಷದೊಳಗೆ ಬೈಪಾಸ್ ಸರ್ಜರಿ ಮಾಡಿಸದಿದ್ದರೆ ನೀವು ಬದುಕಿ ಉಳಿಯುವುದು ಕಷ್ಟ"** ಎಂದು. ಇದನ್ನು ಕೇಳಿದ ನನ್ನ ಸಣ್ಣಕ್ಕ **ಸುಲೋಚನಿ ಅಕ್ಕ** ದುಡ್ಡಿನ ತೊಂದರೆ ಇದ್ದರೆ ನಾನು ಕೊಡುತ್ತೇನೆ ನೀನು ಕೂಡಲೇ ಬೈಪಾಸ್ ಸರ್ಜರಿ ಮಾಡಿಸು ಎಂದು ಒತ್ತಾಯ ಮಾಡಿದರು. ನನಗೆ ಸರಕಾರಿ ಕೆಲಸದಲ್ಲಿ ಇರುವಾಗ ಆಪರೇಷನ್ ಮಾಡಿಸಿದರೆ ಆಗುವ ಖರ್ಚನ್ನು ಸರಕಾರ ಭರಿಸುತ್ತದೆ. ಆದ್ದರಿಂದ ನಾನು ಹಣವನ್ನು ಅಕ್ಕನವರಿಂದ ಪಡೆದು ಬಳಿಕ ವಾಪಾಸ್ ಕೊಡುವುದಾಗಿ ನಿರ್ಧರಿಸಿ ಬೈಪಾಸ್ ಸರ್ಜರಿಗೆ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡೆ. ನಾಗರಾಜನ ಮೂಲಕ 50 ಸಾವಿರ ತಿರುವಣ್ಣಾಮಲೈ ಭಾವ ಕಳುಹಿಸಿದರು. ಹಾಗಾಗಿ ಬೈಪಾಸ್ ಸರ್ಜರಿ ಮಾಡಿಸಿಕೊಳ್ಳಲು ಒಂದು ತಿಂಗಳು ರಜೆ ಹಾಕಿ ಬೆಂಗಳೂರಿಗೆ ಹೊರಟೆ. **ದೇವಿಪ್ರಸಾದ** ಮತ್ತು **ನಾನು** ನವೆಂಬರ್ ಪ್ರಥಮವಾರ ಮಡಿವಾಳದಲ್ಲಿ ನಂದಿನಿ ಡೈರಿ ಫ್ಯಾಕ್ಟರಿಯಲ್ಲಿ ಆಫೀಸರ್ ಆಗಿದ್ದ **ಕನರಾಡಿ ವೆಂಕಟ್ರಮಣ ಸರಳಾಯನ** ಕ್ವಾರ್ಟರ್ಸ್‌ನಲ್ಲಿ (ನನ್ನ ಗುಲಾಬಿ ನಾರಾಯಣ ಚಿಕ್ಕಪ್ಪನ ಮಗಳು ಶಶಿಕಲಾಳ ಗಂಡ) ಒಂದು ತಿಂಗಳ ಅವಧಿಗೆ **ಪೇಯಿಂಗ್ ಗೆಸ್ಟ್ ಆಗಿ** ಕುಳಿತುಕೊಳ್ಳುವುದಾಗಿ ಕೇಳಿ ಕೊಂಡೆ. ಹಾರ್ಟ್ ಆಪರೇಷನ್‌ಗಾಗಿ **ಜಯದೇವ** ಆಸ್ಪತ್ರೆಯಲ್ಲಿ **ಡಾ। ಸೀತಾರಾಮ ಭಟ್** ಎನ್ನುವವರು (ಪಡುಬಿದ್ರೆಯ ಬಳಿಯ ಪಾದೆಬೆಟ್ಟಿನವರೆಂದು ತಿಳಿಯಿತು). ನನ್ನ ಆಪರೇಷನ್‌ಗೆ ಒಪ್ಪಿಕೊಂಡರು. ಜಯದೇವ ಆಸ್ಪತ್ರೆಯಲ್ಲಿ ಸೇರಿದೆ. ಪ್ರತ್ಯೇಕ ರೂಮ್ ಇಲ್ಲದ ಕಾರಣ ಒ.ಪಿ.ಡಿ.ಯಲ್ಲಿ ಒಂದು ಬೆಡ್‌ನಲ್ಲಿ ನನ್ನನ್ನು ಇರಲು ಹೇಳಿದರು.

ಜಯದೇವ ಆಸ್ಪತ್ರೆಯಲ್ಲಿ ಎ.ಬಿ.ಸಿ.ಡಿ ನಾಲ್ಕು ಗ್ರೂಪ್ ಆಪರೇಶನ್ ಮಾಡುತ್ತಿದ್ದರು. ಒಂದು ಗ್ರೂಪ್‌ನಲ್ಲಿ ಪ್ರಥಮವಾಗಿ ಒಂದು ದಿನಾಂಕದಂದು ನನ್ನ ಹೆಸರನ್ನು ಬೈಪಾಸ್ ಸರ್ಜರಿಗೆ ನೋಟೀಸ್ ಬೋರ್ಡಿನಲ್ಲಿ ಹಾಕಿದರು. ನನ್ನ ಹೆಸರು ಬೋರ್ಡ್‌ನಲ್ಲಿ ಹಾಕಿದ ಮರುದಿನದಿಂದ ದೇಶಾದ್ಯಂತ ಲಾರಿ ಮುಷ್ಕರ ಪ್ರಾರಂಭವಾಯ್ತು. ಹಾಗಾಗಿ ಆಕ್ಸಿಜನ್ ಸಪ್ಲೈ ಮಾಡುವ ಲಾರಿಗಳು ಆಸ್ಪತ್ರೆಗೆ ಬರುವುದು ನಿಂತಿತು. ಹಾಗಾಗಿ ಡಾ। ಸೀತಾರಾಮ ಭಟ್‌ರವರು ನಾವು ಮೊದಲು ಕೊಟ್ಟ ದಿನಾಂಕದಂದು ಆಪರೇಷನ್ ಮಾಡಲಾಗುವುದಿಲ್ಲ ಎಂದರು. **(1ನೇ ಬಾರಿ ಆಪರೇಷನ್ ತಪ್ಪಿತು)**.

ಏಳು ದಿನದ ನಂತರ ಲಾರಿ ಮುಷ್ಕರ ನಿಂತಿತು. ಆಕ್ಸಿಜನ್ ಸಪ್ಲೈ ಪ್ರಾರಂಭವಾಯ್ತು. ಎರಡನೆಯದಾಗಿ ಇನ್ನೊಂದು ದಿನ ನನ್ನ ಬೈಪಾಸ್ ಸರ್ಜರಿ ದಿನಾಂಕ ನೋಟೀಸ್ ಬೋರ್ಡಿನಲ್ಲಿ ಹಾಕಿದರು. ಅಂದು ದೀಪಾವಳಿ ಹಬ್ಬವಾದ್ದರಿಂದ ನಾನೇ ಬೇರೆ ದಿನಾಂಕ ಕೇಳಿದೆ. ನನಗೆ ರಕ್ತ ಕೊಡಲಿರುವವರು ಏಷ್ಯನ್ ಟ್ರಾವೆಲ್ಸ್ ನಡೆಸುತ್ತಿದ್ದ ನನ್ನ ಆತ್ಮೀಯರಾದ **"ಫಲಿಮಾರಿನ ಕರಣೀಕರ ಮನೆ ಪರಶುರಾಮ"**ರ ಸಹಕಾರ ಸಹಾಯದಿಂದ ಅವರ ಕೆಲವರು ಗೆಳೆಯರು 4 ಬಾಟ್ಲಿ ರಕ್ತ ಕೊಡಲು ಒಪ್ಪಿದ್ದರು. ಹಾಗೆ ಇನ್ನು ನಾಲ್ಕು ಬಾಟ್ಲಿಗೆ **ವೆಂಕಟ್ರಮಣ ಸರಳಾಯನ** ಆಫೀಸಿನ ಕೆಲವು

ಜನ ಒಪ್ಪಿದ್ದರು. ಎಲ್ಲರೂ ರಕ್ತ ಕೊಡುವವರು ಹಿಂದುಗಳು ಆಗಿದ್ದರಿಂದ ದೀಪಾವಳಿ ದಿನಾಂಕ ಬದಲಾಯಿಸಲೇಬೇಕಾಯ್ತು. (**2ನೇ ಬಾರಿ ಆಪರೇಷನ್ ತಪ್ಪಿತು**).

ಮೂರನೇ ದಿನಾಂಕ ನಿಗದಿಪಡಿಸಿ ಡಾಕ್ಟರರು ನೋಟೀಸ್ ಬೋರ್ಡಿನಲ್ಲಿ ನನ್ನ ಹೆಸರು ಹಾಕಿಸಿದರು. ನನ್ನ ಆಪರೇಶನ್ ದಿನಾಂಕ ತಿಳಿದ ಕೂಡಲೇ ನನ್ನ ಪಳ್ಳಿಯ ನಾರಾಯಣ ಚಿಕ್ಕಪ್ಪ ಆಸ್ಪತ್ರೆಗೆ ಮಗ ರಮೇಶನವರನ್ನೆಲ್ಲಾ ಕರಕೊಂಡು ಬಂದು ನನ್ನನ್ನು ಮುಟ್ಟಿಕೊಂಡು **ವಿಷ್ಣು ಸಹಸ್ರನಾಮ** ಹೇಳಿ ನನ್ನನ್ನು ಭಗವಂತ ರಕ್ಷಿಸುವಂತೆ ಬೇಡಿಕೊಂಡರು. ಪ್ರಾರ್ಥನೆ ಮಾಡಿದರು. ಮರುದಿನ ಬೆಳಿಗ್ಗೆ 9–30ಕ್ಕೆ ನಾನು ಬೈಪಾಸ್ ಸರ್ಜರಿ ಮಾಡಿಕೊಳ್ಳಲು ರೆಡಿಯಾಗಬೇಕಿತ್ತು. ಮುಂಚಿನ ದಿನ ಸಂಜೆ ಮೈಯಲ್ಲಿ ಒಂದೂ ರೋಮ ಕೂಡಾ ಇಲ್ಲದಂತೆ ಶೇವಿಂಗ್ ಮಾಡಿದರು. ರಾತ್ರಿ ನಿದ್ರೆಗೆ ವಿಶ್ರಾಂತಿ ಮಾತ್ರೆ ಕೊಟ್ಟಿದ್ದರು. ಮರುದಿನ ಬೆಳಿಗ್ಗೆ 9 ಗಂಟೆಗೆ ನನ್ನ ಮೈಗೆಲ್ಲಾ ಕೆಮಿಕಲ್ ಹಚ್ಚಿ ಆಪರೇಷನ್ ಡ್ರೆಸ್ ಹಾಕಿದರು. ಡಾ। ಸೀತಾರಾಮ ಭಟ್‌ರವರು ಬಂದರು. ನನ್ನನ್ನು ಆಪರೇಷನ್ ಟೇಬಲ್ ಮೇಲೆ ಕುಳ್ಳಿರಿಸಿದರು. ನಾನು ಕುಳಿತಾಗಲೇ ಡಾ। ಸೀತಾರಾಮ ಭಟ್ಟರಿಗೆ ಮುಖ್ಯ ಮಂತ್ರಿಗಳಾಗಿದ್ದ **ಶ್ರೀಯುತ ಜೆ.ಎಚ್. ಪಟೇಲ**ರಿಂದ ದೂರವಾಣಿ ಕರೆ ಬಂದು ಸೀತಾರಾಮ ಭಟ್ಟರೇ ಪಟೇಲರ ಪತ್ನಿಯ ಅಣ್ಣನವರಿಗೆ ಅರ್ಜಂಟ್ ಆಪರೇಷನ್ ಮಾಡಬೇಕಾಗಿ ಬಂತು. ಹಾಗಾಗಿ ನನ್ನಲ್ಲಿ ಅಭಿಪ್ರಾಯ ತಿಳಿಸಿ ಪಟೇಲರ ಭಾವನವರಿಗೆ ಆಪರೇಷನ್ ಮಾಡಲು ಹೋದರು. ಹೋಗುವಾಗ ತಿಳಿಸಿದರು. "ನಿಮ್ಮ ಆಪರೇಷನ್ ಕೂಡ ಮಾಡುತ್ತೇನೆ. ಅವರ ಆಪರೇಷನ್ 1–$1^1/_2$ ಗಂಟೆಯಲ್ಲಿ ಮುಗಿಯುತ್ತದೆ" ಎಂದರು. ಆಯ್ತು ಎಂದು ಅಲ್ಲೇ ಕುಳಿತೆ. 9.30ಕ್ಕೆ ಒಳಗೆ ಹೋದ ಡಾಕ್ಟರರು 11 ಗಂಟೆಯ ಬಳಿಕ ಅರ್ಧ ಗಂಟೆಗೊಮ್ಮೆ ಡ್ರಾಯಿಂಗ್ ಮಾಸ್ಟ್ರಿಗೆ ಆಪರೇಶನ್ ಮಾಡುತ್ತೇನೆ. ಕುಳಿತುಕೊಳ್ಳಲು ಹೇಳಿ ಎಂದು ನರ್ಸ್‌ಗಳಲ್ಲಿ ಹೇಳಿ ಕಳುಹಿಸುತ್ತಿದ್ದರು. ಮದ್ಯಾಹ್ನ $1^1/_2$ ಗಂಟೆ ತನಕ ಇದೇ ರೀತಿ ಹೇಳುತ್ತಾ 2 ಗಂಟೆಗೆ "ಮಾಸ್ಟ್ರು ಊಟ ಮಾಡಲಿ ಆಪರೇಷನ್ ಆಗುವುದಿಲ್ಲ ಈ ದಿನ" ಎಂದು ನರ್ಸ್‌ಗಳು ತಿಳಿಸಿದರು. (**3ನೇ ಬಾರಿ ಆಪರೇಷನ್ ತಪ್ಪಿತು**).

ನಾಲ್ಕನೇ ಬಾರಿ ದಿನಾಂಕ ಕೊಟ್ಟ ಮರುದಿನ ಆಪರೇಷನ್ ಮಾಡುತ್ತಿದ್ದ ಒಂದು ದೊಡ್ಡ ಮಿಷನ್ ಹಾಳಾಗಿ ಆಪರೇಷನ್ ನಿಧಾನವಾಗತೊಡಗಿತು. ನನ್ನ ದಿನಾಂಕ ಬದಲಿಸಬೇಕಾಗುತ್ತದೆ ಎಂದು ಡಾ॥ ತಿಳಿಸಿದರು. (**4ನೇ ಬಾರಿ ಆಪರೇಷನ್ ತಪ್ಪಿತು**).

ಐದನೇ ಬಾರಿ ದಿನಾಂಕ ನೋಟೀಸ್ ಬೋರ್ಡಿನಲ್ಲಿ ಬೈಪಾಸ್ ಸರ್ಜರಿಗೆ ನನ್ನ ಹೆಸರನ್ನು ಹಾಕಿದರು. ನನ್ನ ಹೆಸರು ನೋಟೀಸ್ ಬೋರ್ಡಿನಲ್ಲಿ ಹಾಕಿದ ಮರುದಿನವೇ ಜಯದೇವ ಆಸ್ಪತ್ರೆ ಫೌಂಡರ್ **ಡಾ॥ ಪ್ರಭುದೇವ್** ಇವರ ಮೇಲೆ 20 ಆಪಾದನೆಗಳನ್ನು ಹಾಕಿ ಅವರನ್ನು ಈ ಆಸ್ಪತ್ರೆಯಿಂದ ತೆಗೆಯಬೇಕೆಂದು ಅಲ್ಲಲ್ಲಿ **ಪ್ರತಿಭಟನಾ ಪ್ಯಾಂಪ್ಲೆಟ್**ಗಳನ್ನು ಪತ್ರಿಕೆಗಳನ್ನು ಅಂಟಿಸಿದ್ದರು. ಎ.ಬಿ.ಸಿ.ಡಿ ನಾಲ್ಕು

ಗ್ರೂಪ್‌ಗಳಲ್ಲಿ ಒಂದು ಗ್ರೂಪ್ ಡಾಕ್ಟರುಗಳು, ನರ್ಸ್‌ಗಳು ಆಸ್ಪತ್ರೆಯ ಹೊರಗೆ ಟೆಂಟ್ ಹಾಕಿ **ಪ್ರತಿಭಟನೆಗೆ** ಕುಳಿತರು. 2–3 ದಿನದ ನಂತರ ಎರಡು ಗ್ರೂಪ್ ಪ್ರತಿಭಟಿಸಿದರೆ 4–5ನೇ ದಿನದಲ್ಲಿ ಪ್ರತಿಭಟನೆ ಗಂಭೀರ ರೂಪ ತಾಳಲು ತೊಡಗಿತು. ನನಗೆ ನಾಳೆ ಆಪರೇಷನ್ ಆಗಬೇಕಾಗಿತ್ತು. ಡಾ॥ ಸೀತಾರಾಮ ಭಟ್ಟರಲ್ಲಿ "ಮುಷ್ಕರ ಇರುವ ಕಾರಣ ಆಪರೇಷನ್ ಬೇಡವೆಂದು" ನಾನೇ ವಿನಂತಿಸಿಕೊಂಡರೂ ಡಾಕ್ಟರರು ಒಪ್ಪಲಿಲ್ಲ. ಯಾಕೆಂದರೆ ನನ್ನನ್ನು ಆಪರೇಷನ್ ಮಾಡಬೇಕಾದ ಡಾಕ್ಟರುಗಳ ನೇತೃತ್ವ ವಹಿಸುವವರು ಡಾ॥ ಪ್ರಭುದೇವರವರು. ಹಾಗಾಗಿ ನನ್ನ ಆಪರೇಷನ್ ನಿಲ್ಲಿಸಲು ಆಗುವುದಿಲ್ಲವಾಗಿತ್ತು. ಮುಂಚಿನ ದಿನ ಹಿಂದೊಮ್ಮೆ ಮಾಡಿದಂತೆ ನನ್ನ ಮೈಯನ್ನೆಲ್ಲಾ ಶೇವಿಂಗ್ ಮಾಡಿದರು. ರಾತ್ರಿ 9 ಗಂಟೆಗೆ ವಿಶ್ರಾಂತಿ ಮಾತ್ರೆ ಕೊಟ್ಟರು. **ರಾತ್ರಿ 12 ಗಂಟೆಗೆ ನನ್ನನ್ನು ರಕ್ಷಿಸಲು ಬಂದ ದೇವತೆಯೋ** ಎಂಬಂತೆ ನಮ್ಮನ್ನು ನೋಡಿಕೊಳ್ಳುತ್ತಿದ್ದ ನರ್ಸ್ ನಿದ್ದೆಗೆ ಮಾಲಿದ್ದ ನನ್ನನ್ನು ಎಬ್ಬಿಸಿ ಅವರಿರುವಲ್ಲಿಗೆ ಕರೆದರು. **ನನ್ನೊಂದಿಗೆ ಒಂದು ತಿಂಗಳು ಮಗನಿಗಿಂತ ಹೆಚ್ಚಾಗಿ ನನ್ನನ್ನು ಆಸ್ಪತ್ರೆಯಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಿದ್ದ ಸೌಮ್ಯಳ ಗಂಡ ದೇವಿಪ್ರಸಾದ** ನನ್ನ ಹತ್ತಿರ ನೆಲದಲ್ಲಿ ಮಲಗಿದ್ದರು. ಅವರಲ್ಲಿ ನರ್ಸು ಕರೆದ ವಿಷಯ ತಿಳಿಸಿದೆ ಅವರೂ ಜೊತೆಗೆ ಬಂದರು. ನರ್ಸ್ ನನ್ನಲ್ಲಿ ವಿನಂತಿ ಪೂರ್ವಕ ಕೇಳಿಕೊಂಡರು **"ನಿಮಗೆ ಆಪರೇಷನ್ ಈಗ ಅರ್ಜಂಟ್ ಇಲ್ಲ, ಹಾಗಾಗಿ ಈಗ ಆಪರೇಷನ್ ಬೇಡ ಎಂದು ಡಾಕ್ಟರಲ್ಲಿ ತಿಳಿಸಿ"** ಎಂದರು. **ಅಲ್ಲದೆ ನಾಳೆ ಆಪರೇಷನ್ ಡಾಕ್ಟರ್ ಮಾಡಿದರೆ ಪ್ರತಿಭಟನೆ ಮುಷ್ಕರ ಗಲಾಟೆ ಆಸ್ಪತ್ರೆ ಪರಿಸರದಲ್ಲಿ ಜೋರಾಗಿ ಇರಬಹುದು. ನಿಮ್ಮ ಆಪರೇಷನ್ ಡಾಕ್ಟರರು ಮಾಡಿ ಹೋಗಿ ಬಿಡುತ್ತಾರೆ. ನಿಮಗೆ 24 ಗಂಟೆ ಸ್ಮೃತಿ ಇರುವುದಿಲ್ಲ. ಏನಾದರೂ (ಬ್ಲಡ್) ರಕ್ತ ಬೇಕಾದರೆ ತೊಂದರೆ–ಯಾದರೆ ಡಾಕ್ಟರರನ್ನು ಒಳಗೆ ಬರಲು ಯಾರೂ ಬಿಡಲಿಕ್ಕಿಲ್ಲ. ನಿಮ್ಮನ್ನು ನೋಡಿಕೊಳ್ಳಲು ನರ್ಸ್‌ಗಳೂ ಇರುವುದಿಲ್ಲ. ರಕ್ತ ಹೊರಗಿನಿಂದ ತರಲೂ ಅವಕಾಶ ಇರಲಿಕ್ಕಿಲ್ಲ. ಹಾಗಾಗಿ ನೀವು ಮಂಗಳೂರಿನಿಂದ ಇಷ್ಟು ದೂರ ಬಂದಿದ್ದೀರಿ. ದಿನಾಲೂ ಹಲವಾರು ಜನ ಇಲ್ಲಿ ಜೀವ ಕಳಕೊಂಡು ಹೋಗುತ್ತಿರುವುದು ನೀವು ನೋಡುತ್ತಿದ್ದೀರಿ. ಹಾಗಾಗಿ ನೀವು ಜೀವ ಸಹಿತ ಮರಳಿ ಹೋಗುವ ಆಸೆ ನಿಮಗಿಲ್ವಾ?** ಎಂದರು. ಇಷ್ಟು ಹೇಳಿದ ನಂತ್ರ ನಾವು ಆಪರೇಷನ್ ಒಪ್ಪಿಗೆ ಕೊಟ್ಟರೆ ಪ್ರಾಣಕ್ಕೆ ಸಂಚಕಾರ ಖಂಡಿತಾ ಎಂದು ನಾನು ಮತ್ತು ಅಳಿಯ ಒಟ್ಟಾಗಿ ನಿರ್ಧರಿಸಿ ಮರುದಿನ ಬೆಳಿಗ್ಗೆ 7 ಗಂಟೆಗೆ ಎದ್ದು ಟಿಫಿನ್ ಮಾಡಿ ಡಾ॥ ಸೀತಾರಾಮ ಭಟ್ಟರಿಗೆ ಕರೆಮಾಡಿ ತಿಳಿಸಿದೆ. ಈ ಬಾರಿ ಆಪರೇಷನ್ ಬೇಡ ಇನ್ನೊಂದು ಬಾರಿ ಎದೆನೋವು ಬಂದರೆ ತಿಳಿಸುತ್ತೇನೆ ಎಂದು ತಿಳಿಸಿದೆ. ಬಳಿಕ ಡಾಕ್ಟರರು ಬಂದು ಮುಂದಕ್ಕೆ ಜೀವಮಾನವಿಡೀ ತೆಗೆದುಕೊಳ್ಳಬೇಕಾದ ಮದ್ದು ಬರೆದುಕೊಟ್ಟರು. ಅದನ್ನು ಪಡೆದು ನಾನು ಮತ್ತು ನನ್ನ ಅಳಿಯ ಸರಳಾಯನ ಮನೆಗೆ ಬಂದು ಸುಲೋಚನಿ ಅಕ್ಕ ಕಳುಹಿಸಿದ ಕಾರಿನಲ್ಲಿ ನನ್ನ ಪತ್ನಿಯೊಂದಿಗೆ ತಿರುವಣ್ಣಾಮಲೈಗೆ ಹೋದೆ, ಅಳಿಯ ಊರಿಗೆ ಬಂದರು. **(5ನೇ ಬಾರಿಯೂ ಆಪರೇಷನ್ ತಪ್ಪಿತು).**

**"ಭಗವಂತನ ಇಚ್ಛೆಯಂತೆಯೇ ಎಲ್ಲವೂ ನಡೆಯಿತು. ನನ್ನನ್ನು ನಂಬಿದ ದೇವರೇ ಕಾಪಾಡಿದ. ಐದು ಬಾರಿ ದಿನಾಂಕವನ್ನು ಬದಲಾಗುವಂತೆ ಮಾಡಿ ನನ್ನನ್ನು ಆಪರೇಷನ್ ಬಾಧೆಯಿಂದ ರಕ್ಷಿಸಿದ ಭಗವಂತ"** ತಿರುವಣ್ಣಾಮಲೈಯಲ್ಲಿ ಅಕ್ಕ ಭಾವನವರೊಂದಿಗೆ ಗುರೂಜಿ ಬಳಿಯಲ್ಲಿ ನನ್ನ ಆರೋಗ್ಯದ ಬಗ್ಗೆ ವಿಚಾರಿಸಿದಾಗ ಗುರುರಾಘವೇಂದ್ರರ ಪದಕ ನನ್ನ ಚೈನಿನಲ್ಲಿ ಇದ್ದುದರಿಂದ ನೋಡಿದ ಗುರೂಜಿ "ಶ್ರೀ ರಾಘವೇಂದ್ರರು ರಕ್ಷಿಸುತ್ತಾರೆ. ನೀವು ಹೆದರಬೇಡಿ" ಎಂದು ಧೈರ್ಯ ಹೇಳಿ ಕಳುಹಿಸಿದರು.

ಡಾಕ್ಟರ್‌ಗಳು ಆಪರೇಷನ್ ಆಗದಿದ್ದರೆ ಒಂದು ವರ್ಷದೊಳಗೆ ನನಗೆ ಮೃತ್ಯು ಬರಬಹುದು ಎಂದಿದ್ದರು. ಆದರೆ **"ನನ್ನ (ವಿ)ಚಿತ್ರ ಜೀವನ"** ಈ ಪುಸ್ತಕ ಬರೆಯುವಾಗ 18 ವರ್ಷ ದಾಟಿಯಾಗಿತ್ತು. **ಎಲ್ಲವೂ ಭಗವಂತನ ಪ್ರೇರಣೆಯಂತೆ ನಡೆಯುತ್ತದೆ ಎನ್ನುವುದಕ್ಕೆ ಬೇರೆ ಉದಾಹರಣೆ ಬೇಕೆ?**

ನನ್ನ ಮಗ ಗುರುಪ್ರಸಾದ ಬಿ.ಎಫ್.ಎ (ಮೈಸೂರು ವಿಶ್ವ ವಿದ್ಯಾನಿಲಯದಿಂದ ನಡೆಯುವ ಚಿತ್ರಕಲಾ ಪದವಿ ಕೋರ್ಸ್) ಮುಗಿಸಲು ಭಗವಂತ ಮಾಡಿರುವ ಒಂದು ವ್ಯವಸ್ಥೆಯೇ ಬೈಪಾಸ್ ಸರ್ಜರಿ. ಯಾಕೆಂದರೆ 2ನೇ ಬಿ.ಎಫ್.ಎ ಇಂಗ್ಲೀಷ್ ವಿಷಯದಲ್ಲಿ ಉತ್ತೀರ್ಣನಾಗದೆ ನನ್ನ ಮಗನಿಗೆ ಪದವಿ ಸಿಗುವುದಿಲ್ಲವಾಗಿತ್ತು. ಅವನು ಫೈನಲ್ ಪರೀಕ್ಷೆಗೆ ಕುಳಿತು ಪಾಸಾಗಿದ್ದರೂ ಉತ್ತೀರ್ಣತೆ ಪ್ರಮಾಣ ಪತ್ರ ಸಿಗಬೇಕಾದರೆ ಇಂಗ್ಲೀಷ್ ವಿಷಯ ಪಾಸಾಗಲೇ ಬೇಕಿತ್ತು. ಹಾಗಾಗಿ ನನ್ನ ಬೈಪಾಸ್ ಸರ್ಜರಿ ಸಮಯ ಅವನಿಗೆ ಮೈಸೂರಲ್ಲಿ ಪರೀಕ್ಷೆ ಇತ್ತು. ಅದನ್ನು ಸರಳಾಯ ತಿಳಿದುಕೊಂಡು ಊರಿನಿಂದ ನನ್ನ ಮಗನನ್ನು ಬೆಂಗಳೂರಿನ ಅವನ ಮನೆಗೆ ಕರೆಸಿ ಅವನ ಮಗಳು **ಕವಿತಾ** (ಬಿ.ಎಸ್ಸಿ.ಮುಗಿಸಿದ್ದಳು). ಅವಳಲ್ಲಿ ನನ್ನ ಮಗನಿಗೆ 10 ದಿನದ ಕೋಚ್ ಕೊಡಿಸಿದ್ದರಿಂದ ನನ್ನ ಮಗ ಬಿ.ಎಫ್.ಎ ಪಾಸಾಗಿ ಪದವೀದರನಾಗಲು ಕಾರಣವಾಯ್ತು. **ವೆಂಕಟ್ರಮಣ ಸರಳಾಯ ಮಾಡಿದ ಸಹಾಯ ನಾನು ಮರೆಯಲು ಸಾಧ್ಯವಿಲ್ಲ. ಇದು ಗುರುಪ್ರಸಾದ ಬಿ.ಎಫ್.ಎ ಪಾಸಾಗಲು ಮಾಡಿದ ಭಗವಂತನ "ಬೈಪಾಸ್ ಸರ್ಜರಿ ನಾಟಕ"** ಎಂದರೆ ತಪ್ಪಾಗದು.



# ಮಂಗಳೂರಿನ ಸರಕಾರಿ ಬಿ.ಎಡ್. ಕಾಲೇಜಿನಲ್ಲಿ ಚಿತ್ರಕಲಾ ಉಪನ್ಯಾಸಕನಾಗಿ ನನ್ನ ಜೀವನ

**(11–8–2000ರಿಂದ 24–6–2003)**

11.08.2000ದಂದು ಎಸ್.ಯು.ಪಿ.ಡಬ್ಲ್ಯು ವಿಷಯ ಮತ್ತು ಚಿತ್ರಕಲೆ ಕಲಿಸಲು ಸರಕಾರಿ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು (ಬಿ.ಎಡ್ ಕಾಲೇಜು) ಇಲ್ಲಿಗೆ **ಬಡ್ತಿಗೊಂಡು** ಕೆಲಸಕ್ಕೆ ಸೇರಿದೆ. ನನಗಾಗಿ ಒಂದು ಕೊಠಡಿ ನೀಡಿದ್ದರು. ನಾನು ಬಡ್ತಿ ಹೊಂದಿದಾಗ **ಶ್ರೀಯುತ ಕೃಷ್ಣಮೂರ್ತಿ** ಎನ್ನುವವರು ಪ್ರಾಚಾರ್ಯರಾಗಿದ್ದರು.

100 ವಿದ್ಯಾರ್ಥಿಗಳು ಬಿ.ಎಡ್ ತರಬೇತಿ ಹೊಂದಲು ಅವಕಾಶವಿರುವ ಈ ಕಾಲೇಜಿನಲ್ಲಿ ಉಪನ್ಯಾಸಕನಾಗಿ ಮೂರು ವರ್ಷ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಚಿತ್ರಕಲಾ ವಿಷಯದಲ್ಲಿ ಆಸಕ್ತಿ ಹುಟ್ಟಿಸುವ ವಿಧಾನ ಚಿತ್ರಕಲೆಯನ್ನು ಪ್ರೋತ್ಸಾಹಿಸುವ ವಿಧಾನ. ಶಿಕ್ಷಕರಾದವರು ಹೇಗಿರಬೇಕೆಂದು ತಿಳಿಸುತ್ತಿದ್ದೆ. ಎಲ್ಲಾ ಬಿ.ಎಡ್ ವಿದ್ಯಾರ್ಥಿಗಳು ಚಿತ್ರಕಲಾ ವಿಷಯವನ್ನು ಬಹಳ ಆಸಕ್ತಿಯಿಂದ ಕಲಿಯುತ್ತಿದ್ದರು. ನಾನು ಹೇಳಿದ ಬೋಧನೋಪಕರಣಗಳನ್ನು ಅಚ್ಚುಕಟ್ಟಾಗಿ ಚಂದವಾಗಿ ಮಾಡಿ ತೋರಿಸುತ್ತಿದ್ದರು. **ಕಾರ್ಯನಿರತ ಬೋಧನೋಪಕರಣಕ್ಕೆ** ನಾನು ತುಂಬಾ ಒತ್ತಾಯಿಸುತ್ತಿದ್ದೆ ತುಂಬ ಶ್ರಮಪಟ್ಟು ಆಸಕ್ತಿ ತೋರಿಸಿ ಬೋಧನೋಪಕರಣ ಮಾಡುತ್ತಿದ್ದರು.

**"**ಶಿಸ್ತು, ಮಾನವೀಯ ಮೌಲ್ಯ ಹಾಗೂ ಆದರ್ಶ ಗುಣಗಳನ್ನು ಜೀವನದಲ್ಲಿ ಅಳವಡಿಸುವಂತಹ ವಿದ್ಯಾರ್ಥಿಗಳನ್ನು ರೂಪಿಸುವ ಶಿಕ್ಷಣ ನೀಡುತ್ತಿರುವ ಮೂಡುಬಿದ್ರೆಯ **"**ಶಿರ್ತಾಡಿ ಭುವನಜ್ಯೋತಿ**"** ಸಂಸ್ಥೆಯ ಮುಖ್ಯಸ್ಥರಾದ **ಶ್ರೀಯುತ ಪ್ರಶಾಂತ್** ನನ್ನ ಬಿಎಡ್ ವಿದ್ಯಾರ್ಥಿಗಳಲ್ಲಿ ಅತೀ ವಿಧೇಯತೆಯ ಆತ್ಮೀಯ, ಪ್ರೀತಿಯ ವಿದ್ಯಾರ್ಥಿಯಾಗಿದ್ದರು ಎಂದು ಹೇಳಿಕೊಳ್ಳಲು ತುಂಬಾ ಸಂತೋಷವಾಗುತ್ತದೆ.

2002–2003ರಲ್ಲಿ **ಡಾ। ಶ್ರೀನಿವಾಸ ಕಕ್ಕಿಲ್ಲಾಯರು** ನನ್ನನ್ನು ಕರೆದು ನಾನು ಮನೆ ಕಟ್ಟಿಸುತ್ತಿದ್ದೇನೆ. ಅದಕ್ಕೆ ನೀವೇ ಒಂದು ಕ್ಯಾನ್‌ವಾಸ್ ಪೈಂಟಿಂಗ್ ಮಾಡಿಕೊಂಡಬೇಕೆಂದರು.



(ಬೇಕಾದ ಅಳತೆ 8ಅಡಿX4ಅಡಿ) ಅದರಲ್ಲಿ ಕರಾವಳಿಯ ಎಲ್ಲಾ ರೀತಿಯ ಜಾನಪದ ಕುಣಿತದ ಚಿತ್ರ ಇರಬೇಕೆಂಬ ಅಭಿಪ್ರಾಯ ತಿಳಿಸಿದರು. ಧರ್ಮಸ್ಥಳ, ರಥೋತ್ಸವದ ಬೇತಾಳ ದೇವರು ಹೊರುವುದು, ಆನೆ, ಡೋಲುಕುಣಿತ, ಭೂತಕುಣಿತ, ಅಣಿ ಕಟ್ಟಿದ ಭೂತ, ನಾಗಮಂಡಲ, ತೆಂಕುತಿಟ್ಟು ಯಕ್ಷಗಾನ, ಬಡಗುತಿಟ್ಟು ಯಕ್ಷಗಾನ, ಗರಡಿಕೋಲ, ಆಟಿಕಳಂಜ, ಕಂಬ್ಳ, ತೆಂಗಿನಕಾಯಿ ಕಟ್ಟುವುದು, ಕೋಳಿಅಂಕ, ಈ ರೀತಿಯ ಚಿತ್ರದ ಮಾದರಿ ತೋರಿಸಿದೆ. ಕೋಳಿಅಂಕ ಹೊರತುಪಡಿಸಿ ಎಲ್ಲಾ ಚಿತ್ರ ಇರಲಿ ಎಂದರು. ಸಂಜೆ ಸಮಯದ ಸಮುದ್ರ ಕರಾವಳಿ, ಬೆಸ್ತರು ದೋಣಿಗಳು ಈ ಚಿತ್ರದಲ್ಲಿ ಅಳವಡಿಸಿದೆ.

ಬಿ.ಎಡ್ ಕಾಲೇಜಿನ ನನ್ನ ಕೊಠಡಿಯಲ್ಲಿ ಎರಡು ತಿಂಗಳು ಬಿಡುವು ಇರುವಾಗ **"ಕರಾವಳಿ ಜಾನಪದ"** ಎಂಬ ಚಿತ್ರವನ್ನು 8ಅಡಿX4ಅಡಿ ಕ್ಯಾನ್‌ವಾಸ್‌ನಲ್ಲಿ ಆಯಿಲ್ ಪೈಂಟಿನಲ್ಲಿ ಬಿಡಿಸಿದೆ. ಡಾ। ಕಕ್ಕಿಲ್ಲಾಯರಿಗೆ ಬಹಳ ಖುಷಿಯಾಯ್ತು. ಮನೆ ಒಕ್ಕಲಿಗೆ ಬಂದವರಿಗೆಲ್ಲ ತುಂಬಾ ಸಂತೋಷವಾಯಿತು. 2003ರ ತನಕ ನಾನು ಮಾಡಿದ ತೈಲ ಚಿತ್ರಗಳಲ್ಲಿ ಇದು ಅತೀ ದೊಡ್ಡದು.



Find out ...? ('I LOVE YOU' & LOVERS)

# ಬೆಂಗಳೂರು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ - ನನ್ನ ಜೀವನ

**(25.6.2003 ರಿಂದ 31.10.2003ರ ತನಕ)**

**ಕರ್ನಾಟಕ ರಾಜ್ಯದ ಚಿತ್ರಕಲಾ ವಿಷಯದಲ್ಲಿ ಅತ್ಯುನ್ನತ ಹುದ್ದೆಗೆ ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ ಭಡ್ತಿ ಹೊಂದಿದೆ**. ಬೆಂಗಳೂರಿನ ನೃಪತುಂಗ ರಸ್ತೆಯಲ್ಲಿರುವ ಶಿಕ್ಷಣ ಆಯುಕ್ತರ ಕಛೇರಿಗೆ ನನಗೆ ಪ್ರತ್ಯೇಕವಾದ ಕೊಠಡಿ ಇತ್ತು. ನನಗೆ ನಿರ್ದೇಶಕರಾಗಿ **ಶ್ರೀಯುತ ಪೆಮ್ಮಯ್ಯ**ರೆಂಬವರಿದ್ದರು. ನಮ್ಮ ಊರಿನವರೇ ಆದ **ಶ್ರೀಮತಿ ಹರಿಣಾಕ್ಷಿ** ಎಂಬವರು ಅಲ್ಪಸಂಖ್ಯಾತರ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಅವರು ನನಗೆ ಧೈರ್ಯ ತುಂಬಿ ಎಲ್ಲಾ ರೀತಿಯ ಸಹಾಯ ಮಾಡುತ್ತಿದ್ದರು. ನನಗೆ ಸಹಾಯ, ಸಹಕಾರ ನೀಡಿದ ಅಧಿಕಾರಿಗಳಲ್ಲಿ **ಶ್ರೀಯುತ ತಿರುಮಲ ರಾಯ**ರನ್ನು ಮರೆಯಲು ಸಾಧ್ಯವಿಲ್ಲ. ಅವರು ನನ್ನ ಕಛೇರಿಯಲ್ಲಿ ಒಂದು ವಿಭಾಗಕ್ಕೆ ಸಹಾಯಕ ನಿರ್ದೇಶಕರಾಗಿದ್ದರು. ನನ್ನ ವಸತಿಗಾಗಿ ನನ್ನ ಆತ್ಮೀಯ ಗೆಳೆಯ ನನ್ನ ಚಿಕ್ಕಪ್ಪನವರ ಮಗಳು ಶಶಿಕಲಾಳ ಗಂಡ **ವೆಂಕಟರಮಣ ಸರಳಾಯನ** ಮನೆ ಆಯ್ಕೆ ಮಾಡಿಕೊಂಡೆ. ಅಲ್ಲಿ ಪೇಯಿಂಗ್ ಗೆಸ್ಟ್ ಆಗಿ ಇರುವುದಾಗಿ ನಿರ್ಧರಿಸಿ ಅವನಲ್ಲಿ ತಿಳಿಸಿದೆ. ಅದಕ್ಕೆ ಅವನು ಒಪ್ಪಿಗೆ ನೀಡಿದ. ಹಾಗೆಯೇ ಒಂದು ತಿಂಗಳು ಕಛೇರಿಗೆ ಹೋಗಿ ಬಂದಾಗ ನಮ್ಮ ಶಿಕ್ಷಣ ಆಯುಕ್ತರ ಕಛೇರಿ ಕೆಲಸ ಬೇಡವೆನಿಸಲು ಪ್ರಾರಂಭವಾಯ್ತು. ಆಗಸ್ಟ್ 1ನೇ ತಾರೀಕಿನಂದು ನಾನು 31.10.2003ರಂದು ಸ್ವಯಂ ನಿವೃತ್ತಿ ಪಡೆಯಲು ಇಚ್ಛಿಸುತ್ತೇನೆ ಎಂದು ಬರೆದುಕೊಟ್ಟೆ.

ನಾಲ್ಕು ತಿಂಗಳನ್ನು 40 ವರ್ಷದಂತೆ ಕಷ್ಟದಲ್ಲಿ ಕಳೆದೆ. **ಶ್ರೀಯುತ ಕೃಷ್ಣಪ್ಪ**ರೆಂಬವರು ನನಗೆ ಸಹಾಯಕರಾಗಿ ಇದ್ದರು. 4 ತಿಂಗಳಲ್ಲಿ 30 ಚಿತ್ರಕಲಾ ಸಂಸ್ಥೆಗಳನ್ನು (ಮೈಸೂರು ಮತ್ತು ಬೆಂಗಳೂರು ವಿಭಾಗದ) ವಿಕ್ಷೀಸಿದೆ. ಎಲ್ಲಾ ರೀತಿಯಿಂದ ಸರಿಯಾಗಿದ್ದ (ಅಂದರೆ ಕಟ್ಟಡ, ವಿದ್ಯಾರ್ಥಿಗಳ ಸಂಖ್ಯೆ, ಬೋಧಕರು, ಫಲಿತಾಂಶ) ಸಂಸ್ಥೆಗಳೆಂದರೆ ಕೇವಲ 5 ಮಾತ್ರ. **ತುಮಕೂರು ರವೀಂದ್ರ ಕಲಾಶಾಲೆ**ಯು ಅತೀ ಉತ್ತಮವೆಂದು ನನಗನಿಸಿತು. ಇದು ರಾಜ್ಯದಲ್ಲೇ ಅತ್ಯುತ್ತಮವಾಗಿ ಚಿತ್ರಕಲೆಯನ್ನು ಬೋಧನೆ ಮಾಡುತ್ತಿದ್ದ ಸಂಸ್ಥೆಯೆಂದರೆ ಅತಿಶಯೋಕ್ತಿಯಾಗಲಾರದು. ಬೆಂಗಳೂರಿನ ಹಡಪದ್‌ರವರು ಸ್ಥಾಪಿಸಲ್ಪಟ್ಟ ಸಂಸ್ಥೆ, ಮೈಸೂರಲ್ಲಿ ಒಂದು, ಮಂಗಳೂರಿನಲ್ಲಿ ಒಂದು, ಉಡುಪಿಯಲ್ಲೊಂದು ಸಂಸ್ಥೆ ಹೊರತುಪಡಿಸಿದರೆ ಇನ್ನುಳಿದ 25 ಸಂಸ್ಥೆಗಳು ಹೆಸರಿಗೆ ತಕ್ಕ ಇವೆ ಎಂದನಿಸಿತು. ಇಲ್ಲಿಯ ಅವ್ಯವಸ್ಥೆ ಕಂಡು ನಾನೇ ಸ್ವ-ಇಚ್ಛೆಯಿಂದ $2^1/_2$ ವರ್ಷ ಸ್ವಯಂ ನಿವೃತ್ತಿ ಪಡೆದು ಊರಿಗೆ ಬಂದು ಬಿಟ್ಟೆ. **ಜೀವಮಾನದಲ್ಲಿ ಒಮ್ಮೆಯಾದರೂ ವಿಮಾನಯಾನ ಮಾಡಬೇಕೆಂಬ ಆಸೆಯಿಂದ 1-11-2003ರಂದು ಬೆಂಗಳೂರಿನಿಂದ ಮಂಗಳೂರಿಗೆ ಬಂದೆ**. ಎರಡು ಸಾವಿರ ರೂಪ್ಯಾ ಟಿಕೇಟ್ ಚಾರ್ಜು. ಬಜ್ಪೆಗೆ ಬರಲು 40 ನಿಮಿಷ ಬೇಕಾಯಿತು. ವಿಮಾನ ಪ್ರಯಾಣದಲ್ಲಿ ಕಣ್ಣುಮುಚ್ಚಿಕೊಂಡೇ ಇದ್ದೆ.

**ಕಷ್ಟಪಟ್ಟು ಹೊಟೇಲ್ ಸಪ್ಲಾಯರ್ ಆಗಿದ್ದುಕೊಂಡು ಚಿತ್ರಕಲೆ ಕಲಿತ ನನ್ನನ್ನು ಕರ್ನಾಟಕ ರಾಜ್ಯದ ಚಿತ್ರಕಲೆಯ ಅತ್ಯುನ್ನತ ಹುದ್ದೆಯಾದ ಚಿತ್ರಕಲಾ ಸಹಾಯಕ ನಿರ್ದೇಶಕನನ್ನಾಗಿ ಮಾಡಿದ ಭಗವಂತನಿಗೆ ಸಾಷ್ಟಾಂಗ ಪ್ರಣಾಮಗಳು.**

2003 ಜೂನ್ ತಿಂಗಳಲ್ಲಿ ಕಾವೂರಿನಲ್ಲಿ ಕೆ.ಎಚ್.ಬಿ./ಎಲ್.ಐ.ಜಿ 17ನೇ ನಂಬ್ರದ ನನ್ನ ಮನೆಯನ್ನು 3,90,000/–ಕ್ಕೆ ಮಾರಿ ಕಾವೂರು ಮಹಾತ್ಮನಗರ ಬಡಾವಣೆಯ ಹತ್ತಿರ 5 ಸೆಂಟ್ಸ್ ಜಾಗ (45ಅಡಿX45ಅಡಿ) ತೆಗೆದುಕೊಂಡು ಮಹಾತ್ಮಾನಗರದಲ್ಲೇ ವಾಸವಾಗಿದ್ದ **"ಶ್ರೇಯ"** ಮನೆಯ ಇಂಜಿನಿಯರ್ **ಶ್ರೀಯುತ ಶ್ಯಾಮ್ ಪ್ರಸಾದ ಬಾಳಿಗ**ರಲ್ಲಿ ನನ್ನ ಪ್ಲಾನ್ ತೋರಿಸಿದೆ. 6 ತಿಂಗಳಲ್ಲಿ ಎಂದರೆ ಜೂನ್ ತಿಂಗಳಿಂದ 2004 ಜನವರಿಯ ಒಳಗೆ ಮನೆ ಕಟ್ಟಿಕೊಡುವುದಾಗಿ ಭರವಸೆ ನೀಡಿ 5–6 ಲಕ್ಷ ರೂಪಾಯಿಯೊಳಗೆ ಮನೆ ಮಾಡಿ ಮುಗಿಸಬಹುದೆಂದರು. ಅವರಿಗೆ ನನ್ನ ಮನೆ ಕಟ್ಟಿಕೊಡುವ ಜವಾಬ್ದಾರಿ ಕೊಟ್ಟು 25–6–2003ರಂದು ಬೆಂಗಳೂರಿನ ಶಿಕ್ಷಣ ಆಯುಕ್ತರ ಕಛೇರಿಯಲ್ಲಿ (ನೃಪತುಂಗ ರಸ್ತೆಯಲ್ಲಿ) ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ ಭಡ್ತಿ ಹೊಂದಿ ಕೆಲಸಕ್ಕೆ ಸೇರಿದ್ದೆ.

ಬಲಕೈ ಗಂಟಿನಲ್ಲಿ **ಶಟಲ್ ಪೈನ್** ಎಂಬ ನರದ ತೊಂದರೆಯಿಂದ ನಾಲ್ಕು ತಿಂಗಳು ಯಾವುದೇ ಚಿತ್ರ ಮಾಡಲಾಗದೆ ಹಲವಾರು ಡಾಕ್ಟರ್‌ಗಳ ಶುಶ್ರೂಷೆ ಮಾಡಿಕೊಂಡೆ. ಕೊನೆಗೆ **ಡಾ। ರೀನಾ ಆಳ್ವ**ರೆಂಬವರು ಕೆ.ಎಚ್.ಬಿ/ ಎಂ.ಐ.ಜಿ–9ರಲ್ಲಿ ವಸತಿ ಇದ್ದವರ ಹೊಮಿಯೋಪತಿ ಮದ್ದಿನಿಂದಾಗಿ ನನ್ನ ಕೈ ನೋವು ಪೂರ್ಣ ಗುಣವಾಯಿತು.



**ಶ್ರೀಮಂತ ಉಣ್ಣುವುದೂ ಅನ್ನ, ಬಡವ ಉಣ್ಣುವುದೂ ಅನ್ನ,**
**ಬಡವ - ಶ್ರೀಮಂತರೆಂಬ ಬೇಧ ಬೇಡ**



Find out ...? (LINGABHISHEKA BY GANESHA)




ಆಕಾಶದಿಂದ ಶ್ರೀ ಸತ್ಯಕಲಾ ನಿಕೇತನವನ್ನು ನೋಡಿದಾಗ

# ನಿವೃತ್ತಿ ಬಳಿಕ – ನನ್ನ ಜೀವನ (1.11.2003ರಿಂದ)

ಕುಂಜಾರು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನದಲ್ಲಿ ತಯಾರಾದ ಬ್ರಹ್ಮರಥಕ್ಕೆ ನಾನೇ ಚಿತ್ರ ಬಿಡಿಸಿಕೊಡಬೇಕೆಂದು ತುಂಬಾ ಒತ್ತಾಯಿಸಿದರು. ಆದರೆ ಕೈನೋವಿನಿಂದ ಏನೂ ಚಿತ್ರ ಮಾಡಲಾಗದೆ ತೊಂದರೆಗೊಳಗಾಗಿದ್ದೆ. ಆದುದರಿಂದ ಕುಂಜಾರಿನ ರಥದಲ್ಲಿ ಬೇರೆಯವರಿಂದ ಚಿತ್ರಗಳನ್ನು ಮಾಡಿಸಿದರು. ಬಳಿಕ 6 ತಿಂಗಳಲ್ಲಿ ಕಾವೂರು ಶ್ರೀ ಮಹಾಲಿಂಗೇಶ್ವರ ದೇವಳದ ಬ್ರಹ್ಮರಥದ ಕೆಲಸ ಪೂರ್ಣವಾಗುತ್ತಾ ಬಂತು. ಆವಾಗ ಅರ್ಚಕರಾದ **ಶ್ರೀ ಶ್ರೀನಿವಾಸ ಭಟ್ಟರು** ನನಗೆ ಪ್ರಸಾದ ಕೊಟ್ಟು ಕೈ ಗುಣವಾಗುವಂತೆಯೂ ರಥದ ಚಿತ್ರ ಮಾಡಿಕೊಡುವಂತೆಯೂ ದೇವರ ಮುಂದೆ ಪ್ರಾರ್ಥನೆ ಮಾಡಿ ಹೇಳಿದರು. ಹಾಗಾಗಿ ನವೆಂಬರ್ 1ನೇ ತಾರೀಖಿನಂದು ನಾನು ಕಾವೂರಿಗೆ ಬಂದಾಗ ಕೈ ಪೂರ್ಣ ಗುಣವಾದ್ದರಿಂದ ನವೆಂಬರ್–ಡಿಸೆಂಬರ್ ತಿಂಗಳಲ್ಲಿ **ಬ್ರಹ್ಮರಥದ 4ಅಡಿX5ಅಡಿ ಉದ್ದ ಅಗಲದ 8 ತೈಲಚಿತ್ರಗಳನ್ನು ಬಿಡಿಸಲು ಕಾವೂರು ಶ್ರೀ ಮಹಾಲಿಂಗೇಶ್ವರ ದೇವರ ಅನುಗ್ರಹದಿಂದ ಸಾಧ್ಯವಾಯಿತು.**



**"ಶ್ರೀ ಸತ್ಯಕಲಾ ನಿಕೇತನ"**



ಶ್ರೀ ಸತ್ಯಕಲಾ ನಿಕೇತನ

**28–02–2004ರಂದು** ರಾತ್ರಿ ವಾಸ್ತು ರಾಕ್ಷೋಘ್ನ ಹೋಮ ಮಾಡಿಸಿ ಮರುದಿನ **29–02–2004ರಂದು** ಗಣಹೋಮ ಮತ್ತು ಸತ್ಯನಾರಾಯಣ ಪೂಜೆ ಮಾಡಿ ದೇವರ ಅನುಗ್ರಹಕ್ಕಾಗಿ ಪ್ರಾರ್ಥನೆ ಸಲ್ಲಿಸಿದೆ. **2004ನೇ ಇಸವಿ ಫೆಬ್ರವರಿ 29ರಂದು** ಭಗವಂತ ನಾನು ವಾಸವಾಗಿರಲು ಅನುಗ್ರಹಿಸಿದ್ದ ನನ್ನ ಮನೆ **ಶ್ರೀ ಸತ್ಯಕಲಾ ನಿಕೇತನ ಇದರ ಗೃಹಪ್ರವೇಶ** ಸಮಾರಂಭ ಇರಿಸಿಕೊಂಡಿದ್ದೆ. ನನ್ನ ಕೈ ಬರಹದ ಆಮಂತ್ರಣ ಪತ್ರಿಕೆ ರಚಿಸಿ ಸ್ಕ್ರೀನ್ ಪ್ರಿಂಟ್ ಮಾಡಿಸಿದೆ. ನನ್ನ ಬಂಧು–ಮಿತ್ರರಿಗೆ, ಆತ್ಮೀಯರಿಗೆ ನನ್ನ ಪ್ರೀತಿಯ ವಿದ್ಯಾರ್ಥಿಗಳಿಗೆ (ಟಿ.ಸಿ.ಎಚ್ ಹಾಗೂ ಬಿ.ಎಡ್) ಆಮಂತ್ರಣ ಪತ್ರಿಕೆ ಕಳುಹಿಸಿದ್ದೆ. 600 ಜನರ ಊಟಕ್ಕಾಗಿ ವ್ಯವಸ್ಥೆ ಮಾಡಿದ್ದೆ. ಸುಮಾರು 500 ಜನ ಬಂದು ನಾವು ನೀಡಿದ ಊಟೋಪಚಾರಗಳಿಂದ ತೃಪ್ತರಾಗಿ ಆಶೀರ್ವದಿಸಿದ್ದರೆಂಬುದು ಸಂತಸದ ವಿಷಯ. ಗೃಹಪ್ರವೇಶಕ್ಕೆ ಬಂದ ಆತ್ಮೀಯರಿಗೆ ಕೊಡುವ ಬಗ್ಗೆ 100 ಸೀರೆ ಹಾಗೂ 100 ಬೆಳ್ಳಿಯ ಸಣ್ಣ ಕಾಲುದೀಪ ತೆಗೆದುಕೊಂಡಿದ್ದೆ. ಅವುಗಳನ್ನು ನನ್ನವರಿಗೆ ಕೊಟ್ಟು ಸಂತೋಷ ಪಟ್ಟೆ **"ನನ್ನ ಸಂಸಾರ"** 100 ಜೆರಾಕ್ಸ್ ಪ್ರತಿ ಮಾಡಿ ಸಂಸಾರದವರಿಗೆ ಹಂಚಿದೆ. ನಾನು ಬಿಡಿಸಿರುವ ಚಿತ್ರಗಳ ಪ್ರದರ್ಶನ ಮಾಡಿದ್ದೆ. ಸುರತ್ಕಲ್ ಕುಳಾಯಿಯಲ್ಲಿರುವ

ಒಬ್ಬರು ಕ್ಯಾಟರಿಂಗ್‌ನವರು ಜವಾಬ್ದಾರಿ ತೆಗೆದುಕೊಂಡು ಶಾಮಿಯಾನ ಜನರೇಟರ್ ಕುರ್ಚಿ ಅಡುಗೆ ಬಡಿಸುವ ಕೆಲಸ ಎಲ್ಲವನ್ನೂ ನಿರ್ವಹಿಸಿದ್ದರು. ಅವರಿಗೆ 36 ಸಾವಿರ ಸಂದಾಯ ಮಾಡಿದೆ. ಆ ಸಂದರ್ಭದಲ್ಲಿ ನನ್ನ ಮಗಳು ಸೌಮ್ಯ 2ನೇ ಮಗುವಿನ ಗರ್ಭಿಣಿಯಾಗಿದ್ದಳು. ಮನೆಯು ಕಲಾತ್ಮಕವಾಗಿರಬೇಕೆಂದು ನನ್ನ ಆಸೆಯಾಗಿತ್ತು. ಅದಕ್ಕೆ ಸರಿಯಾಗಿ ಮಹಾತ್ಮಾನಗರದ **"ಶ್ರೇಯ"** ಮನೆಯಲ್ಲಿದ್ದ **ಶ್ರೀ ಶ್ಯಾಮಪ್ರಸಾದ ಬಾಳಿಗರು** ಅತೀ ಉತ್ತಮವಾಗಿ ನನ್ನ ಮನೋಭೀಷ್ಟದಂತೆ ರಚಿಸಿಕೊಟ್ಟಿರುವುದು ಅವರ ಕಾರ್ಯ ನಿಷ್ಠೆಯನ್ನು ಎತ್ತಿತೋರಿಸುತ್ತದೆ. ನನ್ನ ಮನೆಯ ಒಂದಿಷ್ಟೂ ಕೆಲಸ ಬಾಕಿ ಉಳಿಸದೆ 6 ತಿಂಗಳಲ್ಲಿ ಗೃಹಪ್ರವೇಶಕ್ಕೆ ತೊಂದರೆಯಾಗದಂತೆ **"ಶ್ರೀಸತ್ಯ ಕಲಾನಿಕೇತನ"**ವನ್ನು 9 ಲಕ್ಷ ರೂಪಾಯಿಯಲ್ಲಿ ಕಟ್ಟಿಕೊಟ್ಟು ನಮ್ಮೆಲ್ಲರ ಸಂತೋಷಕ್ಕೆ ಪಾತ್ರರಾಗಿದ್ದಾರೆ. ಅವರನ್ನು ಭಗವಂತ ಅನುಗ್ರಹಿಸಲಿ.

ಕಲಾತ್ಮಕವಾಗಿ ಸ್ವಲ್ಪ ರೂಪಕೊಡುವ ಸಲುವಾಗಿ ಮುಡಿಪು ಕಲಾವಿದ **ಶ್ರೀ ಸತೀಶ್** ಇವರ ನೆರವಿನಿಂದ ಮನೆಯ ಮುಂದುಗಡೆ ಇರಿಸಲು **ಗೋವಿನೊಂದಿಗೆ ಇರುವ ರಾಧಾಕೃಷ್ಣರ ಕಾಂಕ್ರೀಟ್** 5 ಅಡಿ ಎತ್ತರ ಪ್ರತಿಮೆ ಮಾಡಿಸಿ ಅದರಲ್ಲಿ ರಾಧೆಯ ಕೊಡದಲ್ಲಿ ನೀರು ಬೀಳುವಂತೆ ವ್ಯವಸ್ಥೆ ಮಾಡಿಸಿದೆ. ಅಲ್ಲದೆ ಬೊಗಳದ, ಕಚ್ಚದ ನಾಯಿಯೊಂದು ಮನೆಗೆ ಕಾವಲಿಗಾಗಿ ಕಾಂಕ್ರೀಟಿನಿಂದ ಮಾಡಿಸಿದ್ದೆ. ಮನೆಯ ಸುತ್ತಲೂ ಹಸಿರು ಗಿಡಗಳಿಗಾಗಿ ಜಾಗ ಬಿಟ್ಟು ಹೂವಿನ, ಮದ್ದಿನ, ತರಕಾರಿ ಗಿಡಗಳನ್ನು ನೆಟ್ಟೆ. ದೇವರ ಕೋಣೆಯಲ್ಲಿ ಇರಿಸಲು ಎರಡು ಪಂಚಲೋಹದ ದೀಪಕನ್ಯೆಯರ ವಿಗ್ರಹವನ್ನು ನನ್ನ ತಮ್ಮ ನಾಗರಾಜನಿಂದ ತಿರುವಣ್ಣಾಮಲೈಯಿಂದ ತರಿಸಿದೆ. ನನ್ನ ಮನೆಗೆ ಬಂದ ಗರ್ಭಿಣಿಯರಿಗೆ ಮುದುಕ ಮುದಕಿಯರಿಗೆ ನೆಲದಲ್ಲಿ ಊಟ ಮಾಡಲು ಕಷ್ಟವಾಗಬಾರದೆಂದು ಟೇಬಲ್ ಮತ್ತು ಶೋಕೇಸಿನ ಬಾಗಿಲು ಜೊತೆಯಾಗಿ ಇರುವಂತೆ ಮಾಡಿ ಯಾರಿಗೂ ಗೊತ್ತಾಗದ ರೀತಿಯಲ್ಲಿ ನಾನೇ ಬಿಡಿಸಿದ ರವಿವರ್ಮರವರ ಚಿತ್ರದ ಪ್ರತಿಕೃತಿ ಬಿಡಿಸಿ ಅದರ ಬಾಗಿಲಿನ ಮಧ್ಯದಲ್ಲಿ ಇರಿಸಿದೆ. (ಆ ಚಿತ್ರ ಕೃಷ್ಣ ಬಲರಾಮರು ಕಂಸನನ್ನು ಕೊಂದ ಬಳಿಕ ವಸುದೇವ ದೇವಕಿಯರನ್ನು ಜೈಲಿನಿಂದ ಬಿಡಿಸುವ ಸನ್ನಿವೇಶ) ಮೆಟ್ಟಲು ಹತ್ತುವಲ್ಲಿ ಮೇಲಕ್ಕೆ ನೋಡಿದರೆ ದೀಪಕನ್ಯೆಯೊಬ್ಬಳು ದೀಪ ಹಿಡಿದು ಮೇಲಕ್ಕೆ ಬರಲು ಬೆಳಕು ತೋರಿಸುವ ಒಂದು ಚಿತ್ರ ಬಿಡಿಸಿದೆ. ಮಾಳಿಗೆ ಒಂದು ಕೊಠಡಿ ಗುರುಪ್ರಸಾದ್ ದಂಪತಿಗಳಿಗಾಗಿ ಇದ್ದರೆ ಇನ್ನೊಂದು ಬದಿ ನನ್ನ ಚಿತ್ರ ಪ್ರದರ್ಶನಕ್ಕಾಗಿ "ಚಿತ್ರಕಲಾ ಗ್ಯಾಲರಿ" ರಚಿಸಿದೆ.

## ನೆರೆಕರೆಯ ಬಂಧುಗಳು

**"ಹೊರಬೈಲು"** ಮನೆಯಲ್ಲಿರುವ ಹೊರಬೈಲು **ಶ್ರೀಯುತ ಲಕ್ಷ್ಮೀನಾರಾಯಣ್ ಭಟ್**ರವರು ಸರಕಾರಿ ಪದವಿ ಕಾಲೇಜು ಮಂಗಳೂರು ಇಲ್ಲಿ ಸಂಸ್ಕೃತ ಹಿರಿಯ ಉಪನ್ಯಾಸಕರಾಗಿ ಇದ್ದಾರೆ. **ಹೊರಬೈಲು ಶ್ರೀಮತಿ ಎಲ್.ಎನ್. ಭಟ್**ರವರು ಎನ್.ಎಂ.ಪಿ.ಟಿ.ಯಲ್ಲಿ ಉನ್ನತ್ತ ಹುದ್ದೆಯಲ್ಲಿದ್ದು ನಿವೃತ್ತರಾಗಿರುತ್ತಾರೆ. (ಒಬ್ಬಳು ಪುತ್ರಿ, ಒಬ್ಬ ಪುತ್ರ).

**"ಮಾತೃಛಾಯಾ"** ಮನೆಯಲ್ಲಿರುವ **ಶ್ರೀಯುತ ಶಿವರಾಂ**ರವರು ಪಿ.ಎಫ್. ಡಿಪಾರ್ಟ್‌ಮೆಂಟಿನಲ್ಲಿ ಅಧಿಕಾರಿಗಳಾಗಿದ್ದರೆ, **ಶ್ರೀಮತಿ ಪದ್ಮಾವತಿ ಶಿವರಾಂ**ರವರು ಎಲ್.ಐ.ಸಿ. ಏಜೆಂಟ್ ಆಗಿರುತ್ತಾರೆ. (ಇಬ್ಬರು ಪುತ್ರರು, ಒಬ್ಬ ಪುತ್ರಿ).

**"ಸನ್ನಿಧಿ"** ಮನೆಯಲ್ಲಿರುವ **ಕೂಡೂರು ರಾಮಚಂದ್ರ ಭಟ್**ರವರು ಬೈಕಂಪಾಡಿಯಲ್ಲಿ ವೆಲ್ಡಿಂಗ್ ರಾಡ್ ಪ್ಯಾಕ್ಟರಿ (ಕ್ಲಾಸಿಕ್ ಫ್ಯೂಶನ್ ಮೆಟಲ್ಸ್) ನಡೆಸುತ್ತಿದ್ದು ಅವರ ಧರ್ಮಪತ್ನಿ **ಶ್ರೀಮತಿ ಚಿತ್ರಾ**ರವರು ಆದರ್ಶ ಗೃಹಿಣಿಯಾಗಿರುತ್ತಾರೆ. (ಇವರಿಗೆ ಇಬ್ಬರು ಪುತ್ರಿಯರು).

**"ದ್ವಾರಕಾ"** ಮನೆಯಲ್ಲಿರುವ **ಶ್ರೀಯುತ ನರಸಿಂಹ ಭಟ್**ರವರು ಕರ್ನಾಟಕ ಬ್ಯಾಂಕಿನಲ್ಲಿ ಅಧಿಕಾರಿಗಳಾಗಿದ್ದು ಅವರ ಧರ್ಮಪತ್ನಿ **ಶ್ರೀಮತಿ ಸರಸ್ವತಿ**ಯವರು ಗೃಹಿಣಿಯಾಗಿರುತ್ತಾರೆ. (ಒಬ್ಬ ಪುತ್ರ).

**"ಸಮೃದ್ಧಿ"** ಮನೆಯಲ್ಲಿರುವ **ಶ್ರೀಯುತ ಆನಂದ ನಾಯಕ್**ರವರು **"ಮೆಸ್ಕಾಂ"** ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದಾರೆ ಮತ್ತು ಅವರ ಧರ್ಮಪತ್ನಿ **ಟಿ. ಶ್ರೀಮತಿ ಜಯಲಕ್ಷ್ಮೀ**ಯವರು ಎಲ್.ಐ.ಸಿ.ಯಲ್ಲಿ ಅಧಿಕಾರಿಗಳಾಗಿದ್ದಾರೆ. (ಇಬ್ಬರು ಪುತ್ರಿಯರು).

## 2–12–2006 ನನ್ನ "ಕಸೂತಿ ಚಿತ್ರಗಳು" ಪುಸ್ತಕ ಉದ್ಘಾಟನೆ




ನಾನು ಧಾರವಾಡದಲ್ಲಿ 1965ರಿಂದ 1967 ಮೇ ತಿಂಗಳ ತನಕ ಹೋಟೇಲ್ ಸಪ್ಲಾಯರ್ (ಗಾಂಧೀ ಚೌಕದ ಆನಂದ ಭವನದಲ್ಲಿ) ಆಗಿದ್ದಾಗ ಸಂಜೆ ಮೂರು ಗಂಟೆಯಿಂದ ನಾಲ್ಕರ ತನಕ ಒಂದು ಗಂಟೆ ವಿಶ್ರಾಂತಿ ಕೊಡುತ್ತಿದ್ದರು. ಆಸಮಯದ ಸದುಪಯೋಗಕ್ಕಾಗಿ ಮೂಕಿ ಹಾಗೂ ಕಿವುಡಿಯಾಗಿರುವ ತಂಗಿ ತ್ರಿವೇಣಿಗೆ ಹೊಲಿಗೆ ಕಲಿಸುವ ಉದ್ದೇಶದಿಂದ ಭಾರತ್ ಟೈಲರಿಂಗ್ ಕಾಲೇಜಿಗೆ ಸೇರಿದೆ. ಅಲ್ಲಿಯ ಪ್ರಿನ್ಸಿಪಾಲರು ನನ್ನ ಆಸಕ್ತಿಯನ್ನು ಕಂಡು ಹಾಗೂ ನಾನು ಸಪ್ಲಾಯರ್ ಆಗಿರುವ ವಿಷಯ ಅರಿತು ನನ್ನಿಂದ ಯಾವುದೇ ಫೀಸ್ ಪಡೆಯದೆ ಕಲಿಸಿರುವುದು ದೇವತಾನುಗ್ರಹ. ಪ್ರಿನ್ಸಿಪಾಲರ ಅಣ್ಣ ಟೈಲರ್ ಆಗಿದ್ದರು. ಅವರ ಮೂಲಕ ಉಡುಪುಗಳಿಗೆ ಬಟ್ಟೆ ಕತ್ತರಿಸುವ ವಿಧಾನ ಕಲಿತೆ (ಪ್ರಾಕ್ಟಿಕಲ್ಸ್) ಬಳಿಕ ಥಿಯರಿಗೆ ಬೇಕಾದ ಪಾಠವನ್ನು ಪ್ರಿನ್ಸಿಪಾಲರೇ ಮಾಡುತ್ತಿದ್ದರು. ಟೆಕ್ನಿಕಲ್ ಟೈಲರಿಂಗ್ ಕಟ್ಟಿಂಗ್ ಎಂಡ್ ಸ್ಟಿಚಿಂಗ್ ಕೋರ್ಸ್ ಪರೀಕ್ಷೆಗೆ ಕುಳಿತು ಪಾಸಾದೆ.

1967 ಮೇ ತಿಂಗಳಲ್ಲಿ ಉಡುಪಿ ತಾಲೂಕು ಬೋರ್ಡ್ ಪ್ರೌಢಶಾಲೆಗಳಿಗೆ ಒಬ್ಬ ಟೈಲರಿಂಗ್ ಹಾಗೂ ಚಿತ್ರಕಲೆ ಗೊತ್ತಿರುವ ಶಿಕ್ಷಕರು ಬೇಕೆಂದು **'ನವಭಾರತ'** ಪತ್ರಿಕೆಯಲ್ಲಿ ಪ್ರಕಟಣೆ ಇತ್ತು. ನನಗೆ ಇಂಗ್ಲೀಷ್ ಸರಿ ತಿಳಿದಿರದ ಕಾರಣ ನನ್ನ ಶ್ರೀನಿವಾಸ ಚಿಕ್ಕಪ್ಪನವರ ಮಗ ಕೃಷ್ಣಮೂರ್ತಿ ಅಣ್ಣ (ಯೂನಿಯನ್ ಕಾರ್ಬ್ಯಾಡ್‌ನಲ್ಲಿ

ಇಂಜಿನಿಯರ್) ಇಂಗ್ಲಿಷ್‌ನಲ್ಲಿ ಬರೆದುಕೊಟ್ಟರು. ಒಂದು ವಾರದಲ್ಲಿ ಉಡುಪಿ ತಾಲೂಕು ಬೋರ್ಡ್ ಆಫೀಸಿನಿಂದ ಇಂಟರ್‌ವ್ಯೂಗೆ ಕರೆ ಬಂತು. ಇಂಟರ್‌ವ್ಯೂನಲ್ಲಿ ನಾನೊಬ್ಬನೇ ನನ್ನ ವಿಷಯಕ್ಕೆ ಅಭ್ಯರ್ಥಿಯಾಗಿದ್ದೆ. ಬಳಿಕ **5–6–1967ಕ್ಕೆ** ಫಲಿಮಾರು ತಾಲೂಕು ಬೋರ್ಡ್ ಹೈಸ್ಕೂಲಿಗೆ **ಡ್ರಾಯಿಂಗ್ ಕಂ ಕ್ರಾಫ್ಟ್ ಟೀಚರ್** ಆಗಿ ನೇಮಕಗೊಂಡೆ. ನನಗೆ ಫಲಿಮಾರಿನ ಹೈಸ್ಕೂಲ್ ವಿದ್ಯಾರ್ಥಿಗಳಲ್ಲಿ ಹುಡುಗಿಯರಿಗೆ ಮೂರು ಪಿರೇಡ್ ಹೊಲಿಗೆ ಕಲಿಸುವ ಕೆಲಸ ಹಾಗೂ ಇಡೀ ತರಗತಿಗೆ ಒಂದು ಪಿರೇಡ್ ಡ್ರಾಯಿಂಗ್ ಕಲಿಸುವ ಕೆಲಸ ಇತ್ತು. ತಂಗಿಗಾಗಿ ಕಲಿತ ಟೈಲರಿಂಗ್ ಸಾವಿರಾರು ವಿದ್ಯಾರ್ಥಿನಿಯರಿಗೆ ಕಲಿಸಲಿಕ್ಕೆ ಉಪಯೋಗವಾಯ್ತು. ಆವಾಗ ನಾನು 8–9–10ನೇ ತರಗತಿಯ ವಿದ್ಯಾರ್ಥಿನಿಯರಲ್ಲಿ ಡೋರ್ ಕರ್ಟನ್, ಚೇರ್ ಕ್ಲಾತ್ – ಟೇಬಲ್ ಕ್ಲಾತ್ – ಪಿಲ್ಲೋ ಕವರ್ ಹೊಲಿಸುತ್ತಿದ್ದೆ. ಅದಕ್ಕೆ ನೂರಾರು ಎಂಬ್ರಾಡರಿ ಚಿತ್ರ ಬಿಡಿಸಿಕೊಡುತ್ತಿದ್ದೆ. ಅದರ ನೆನಪಿಗಾಗಿ ನಿವೃತ್ತಿ ಬಳಿಕ, ಮಹಿಳೆಯರಿಗಾಗಿ ಹೆಣ್ಣು ಮಕ್ಕಳಿಗೆ ಅನುಕೂಲವಾಗುವಂತೆ **"ಕಸೂತಿ ಚಿತ್ರಗಳು"** ಎಂಬ ಹೆಸರಿನಿಂದ ಒಂದು ಪುಸ್ತಕ ರಚಿಸಲು ಪ್ರಾರಂಭಿಸಿದೆ. ಅದು ಮುಕ್ತಾಯದ ಹಂತದಲ್ಲಿ ಇದ್ದಾಗ ನನ್ನ ಸಣ್ಣ ಅಕ್ಕ ಸುಲೋಚನ ಅವರ ಗಂಡ **ಶ್ರೀ ಪಾದೂರು ರಾಮಚಂದ್ರ ಉಪಾಧ್ಯಾಯ**ರಿಂದ ಹಣದ ಸಹಾಯ ಕೇಳಿದೆ. ಅವರು ಶ್ರೀ ರಾಮ **ದೇವರಂತವರು,** ದೊಡ್ಡ ಮನಸ್ಸು ಮಾಡಿ ಪುಸ್ತಕದ ಖರ್ಚನ್ನು ತಾನೇ ಭರಿಸುವುದಾಗಿ ಹೇಳಿದರು. **ಶ್ರೀ ಶ್ರೀ ಶ್ರೀ ಅಧಮಾರು ವಿಶ್ವಪ್ರಿಯರು – ಶ್ರೀ ಧರ್ಮಸ್ಥಳ ಡಿ. ವೀರೇಂದ್ರ ಹೆಗ್ಡೆ**ಯವರು ಸಂದೇಶ ನೀಡಿದರು ಮತ್ತು **– ಶ್ರೀ ಹರಿಕೃಷ್ಣ ಪುನರೂರರು** ಈ ಪುಸ್ತಕಕ್ಕೆ ಸಂದೇಶದೊಂದಿಗೆ ಧನ ಸಹಾಯ ನೀಡಿ ಆಶೀರ್ವದಿಸಿದರು. **ಶ್ರೀಯುತ ಹೊರಬೈಲು ಲಕ್ಷ್ಮೀ ನಾರಾಯಣ ಭಟ್ಟರು** ನನ್ನ ಪುಸ್ತಕದ ಬಗ್ಗೆ ಚೆನ್ನಾಗಿ ಬರೆದರು. ನನ್ನ ಅಮ್ಮ **ಕೃಷ್ಣವೇಣಿ**ಯವರ ನನ್ನ ಚಿತ್ರಕಲೆಯ ಮೂಲ ಗುರುಗಳಾದ ಶಿರ್ವ ಸೈಂಟ್ ಮೇರಿಸ್ ಹೈಸ್ಕೂಲಿನ ಚಿತ್ರಕಲಾ ಅಧ್ಯಾಪಕರಾದ **ಶ್ರೀ ಸಚ್ಚಿದಾನಂದ ಆಚಾರ್ಯ**ರ ಪಾದಕಮಲಗಳಿಗೆ ಈ ಪುಸ್ತಕವನ್ನು ಅರ್ಪಿಸುತ್ತಾ ನಮ್ಮ ಕುಲದೇವಸ್ಥಾನ ಇನ್ನ ಮುದ್ದಾಣಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಂದರ್ಭ ಶ್ರೀ ಮಹಾಲಿಂಗೇಶ್ವರ ದೇವರ ಸನ್ನಿಧಿಯಲ್ಲಿ 2–12–2006ರಂದು ಸಂಜೆ ಶ್ರೀ ಹರಿಕೃಷ್ಣ ಪುನರೂರು ಇವರ ಅಮೃತ ಹಸ್ತದಿಂದ ನನ್ನ **"ಕಸೂತಿ ಚಿತ್ರಗಳು"** ಪುಸ್ತಕ ಬಿಡುಗಡೆಯಾಯ್ತು. 1000 ಪ್ರತಿ ಮುದ್ರಿಸಿದ್ದೆ. ಎರಡು ವರ್ಷದಲ್ಲಿ ಎಲ್ಲಾ ಪ್ರತಿಗಳು ಮುಗಿದಿತ್ತು.

ಈ ಪುಸ್ತಕಕ್ಕೆ ಸಂದೇಶ ಕೇಳಲು ಶ್ರೀ ಹರಿಕೃಷ್ಣ ಪುನರೂರಲ್ಲಿ ವಿನಂತಿಸಿದಾಗ ಸಂದೇಶದ ಜೊತೆಗೆ ನಗದು ಹಣವನ್ನು ಕೊಟ್ಟು ಸಹಕರಿಸಿದ್ದನ್ನು ಮರೆಯಲಾರೆ. ಈ ಪುಸ್ತಕದ ಎಲ್ಲಾ ಖರ್ಚನ್ನು ಕೊಟ್ಟ ನನ್ನ ಬಾವ ಶ್ರೀ ರಾಮಚಂದ್ರ ಉಪಾಧ್ಯಾಯರನ್ನು ಜೀವನದಲ್ಲಿ ಮರೆಯಲು ಸಾಧ್ಯವಿಲ್ಲ. ಅವರಿಗೆ ದೇವರು ಎಲ್ಲಾ ರೀತಿಯಲ್ಲಿ ಅನುಗ್ರಹಿಸಿ ಕಾಪಾಡಲಿ ಎಂದು ಬೇಡುತ್ತಿರುತ್ತೇನೆ.

# ನನ್ನ 60ನೇ ಶಾಂತಿ

ನನ್ನ 60 ವರ್ಷ ತುಂಬಿದ ಶುಭ ಸಂದರ್ಭ ಒಂದು ಮಾರ್ಕಾಂಡೇಯ ಹೋಮ ಕಾವೂರು ಶ್ರೀ ಮಹಾಲಿಂಗೇಶ್ವರ ದೇವರ ಸನ್ನಿಧಿಯಲ್ಲಿ ಮಾಡಿಸುವುದಾಗಿ ನಿರ್ಧರಿಸಿದೆ. 2006 ಮೇ ತಿಂಗಳಲ್ಲಿ ಈ ಅಭಿಪ್ರಾಯದಿಂದ ದೇವರಿಗೆ ಮನಸ್ಸಿನಲ್ಲಿ ಪ್ರಾರ್ಥಿಸಿ ಇನ್ನು ಮುಂದೆ ಬಂದು ವರ್ಷದಲ್ಲಿ ಚಿತ್ರದಿಂದ ಸಂಪಾದನೆಯಿಂದ ಹಣ ಉಳಿತಾಯ ಮಾಡಿ ದಾನಧರ್ಮ ಮಾಡಬೇಕೆಂದು ನಿರ್ಧರಿಸಿದೆ. ಧರ್ಮಸ್ಥಳ ಶ್ರೀ ಮಂಜುನಾಥ ದೇವರನ್ನು ನೆನಸಿಕೊಂಡು ಶ್ರೀ ಡಿ. ವೀರೇಂದ್ರ ಹೆಗ್ಡೆಯವರಿಗಾಗಿ 2005ರಲ್ಲಿ ಧರ್ಮಸ್ಥಳದಲ್ಲಿ ನಡೆದ ಅತ್ಯದ್ಭುತ **"ಮಹಾ ನಡಾವಳಿ"** ಚಿತ್ರವನ್ನು ಬಿಡಿಸಿ ($3^1/_2$ಅಡಿX$7^1/_2$ಅಡಿ, ಉದ್ದ ಅಗಲ) **ಶ್ರೀ ಡಿ. ವೀರೇಂದ್ರ ಹೆಗ್ಗಡೆ**ಯವರಿಗೆ ಫ್ರೇಮ್ ಹಾಕಿ ಧರ್ಮಸ್ಥಳಕ್ಕೆ ಕೊಂಡುಹೋಗಿ ಕೊಟ್ಟೆ. ಅದನ್ನು ನೋಡಿದ ಹೆಗ್ಡೆಯವರು ಬಹಳ ಸಂತೋಷಗೊಂಡು **ನನ್ನ ಬೆನ್ನುತಟ್ಟಿ 25 ಸಾವಿರ ರೂಪ್ಯಾ ಮಂಜುನಾಥ ದೇವರ ಪ್ರಸಾದವಾಗಿ ಕೊಟ್ಟರು.** ಇದನ್ನೇ ನನ್ನ 60ನೇ ಶಾಂತಿಗೆ ಮೂಲಧನವನ್ನಾಗಿ ತೆಗೆದಿರಿಸಿದೆ.



ಬಳಿಕ ಇಡೀ ವರ್ಷದಲ್ಲಿ **ಅಥೆನಾ ಆಸ್ಪತ್ರೆಯ ಸ್ಥಾಪಕರ ಭಾವಚಿತ್ರ – ದುಬ್ಯಾ ಹೋಟೇಲ್ ವೀನಸ್**ನವರ ವಿನಂತಿ ಮೇರೆಗೆ **ಐದು ತೆಂಕುತಿಟ್ಟು ಯಕ್ಷಗಾನದ ಚಿತ್ರಗಳು –** ಹೀಗೆ ಹಲವಾರು ಚಿತ್ರಗಳಿಂದ ನನ್ನ ಅಭಿಪ್ರಾಯದಂತೆ ದಾನಧರ್ಮ ಮಾಡಲು ಬೇಕಾದಷ್ಟು ಸಂಪಾದನೆ ದೇವತಾನುಗ್ರಹದಿಂದ ಆಯ್ತು. 60ನೇ ಶಾಂತಿಗೆ ಬ್ರಾಹ್ಮಣ ಬಂಧು ಮಿತ್ರರನ್ನು ಆಹ್ವಾನಿಸಿದ್ದೆ. ನನ್ನ ಆಮಂತ್ರಣ ಪತ್ರಿಕೆಯಲ್ಲಿ ನನ್ನ ಮನೆ – ಸರ್ವಜಿತ್ ಸಂ।ರದ 1947ರ ಮತ್ತು 2007ರ ಎರಡು ಪಂಚಾಂಗದ ಮುಖಪುಟ ಕಾವೂರು ಶ್ರೀ ಮಹಾಲಿಂಗೇಶ್ವರ ದೇವರ ಫೋಟೊ, ನಾನು ಬಿಡಿಸಿರುವ ಭಕ್ತ ಮಾರ್ಕಂಡೇಯ ಚಿತ್ರ – ನನ್ನ ಅಮ್ಮನ ಜೊತೆಗೆ ಪತ್ನಿ – ಮಗ – ಮಗಳು ಅಳಿಯ ಮೊಮ್ಮಕ್ಕಳು ಎಲ್ಲರೂ ಇರುವ ಫೋಟೋ ಹಾಗೂ ಚಿತ್ರಕಲಾ ಪ್ರದರ್ಶನ ಉದ್ಘಾಟಿಸುವ ಶ್ರೀ ಹರಿಕೃಷ್ಣ ಪುನರೂರು, ನಾನು ಬಿಡಿಸಿದ ಐದಾರು ಚಿತ್ರಗಳು ಇರುವ (6 ವಿಭಾಗದ) ಒಂದು ಡಿಜಿಟಲ್ ಆಮಂತ್ರಣ ಪತ್ರಿಕೆ ರಚಿಸಿ (ಮಾದರಿ ಮತ್ತು ಆಮಂತ್ರಣ ಪತ್ರಿಕೆ ವಿಭಾಗದಲ್ಲಿದೆ) ಸಂಬಂಧಿಕರಿಗೆ ಕಳುಹಿಸಿದೆ. 500 ಜನರ ನಿರೀಕ್ಷೆಯಲ್ಲಿ ನಾನು ಈ ಕಾರ್ಯಕ್ರಮ ವ್ಯವಸ್ಥೆ ಮಾಡಿದ್ದೆ. ಲಾಡು – ಹೋಳಿಗೆ – ಜಿಲೇಬಿಯ ಊಟ. ಶ್ರೀನಿವಾಸ ಭಟ್ಟರು (ಕಾವೂರು ದೇವಸ್ಥಾನದ ಪ್ರಧಾನ ಅರ್ಚಕರು) ಎಲ್ಲಾ ಜವಾಬ್ದಾರಿ ತೆಗೆದುಕೊಂಡರು. ಈ ಕಾರಣ ಅತೀ ಸುಲಭವಾಗಿ ನನ್ನ ಶಕ್ತಿ ಮೀರಿ ವಿಜೃಂಭಣೆಯಿಂದ ದಾನಧರ್ಮಗಳೊಂದಿಗೆ ಈ ಕಾರ್ಯಕ್ರಮ ಮಾಡಿದೆ. (ಊಟಕ್ಕೆ 5 ರೂ.ಗಳ 12 ನಾಣ್ಯದ) 60/–ರೂ.ಗಳನ್ನು 500 ಪ್ಲಾಸ್ಟಿಕ್ ತೊಟ್ಟೆಯಲ್ಲಿ ಹಾಕಿ ದಕ್ಷಿಣೆಯಾಗಿ ಕೊಟ್ಟೆ. ಬಂದಿರುವ ಹೆಂಗಸರಿಗೆ ಸೀರೆ ದಾನ ಮಾಡಿದೆ. 200–250 ಮತ್ತು ಬ್ರಾಹ್ಮಣರಿಗೆ ಗಂಡಸರಿಗೆ ಎಲ್ಲರಿಗೂ ವೇಷ್ಟಿ ಶಾಲು ಕೊಟ್ಟೆ. ಬಂದವರಿಗೆಲ್ಲಾ ಐದದು ಲಾಡು ಪ್ಯಾಕೇಟ್ ಮಾಡಿ ಊಟದ ಸಮಯದಲ್ಲೇ ಕೊಟ್ಟ ತೃಪ್ತಿ ನನಗಿದೆ. 100 ಜನರಿಗೆ ಕರಾವಳಿ ಜಾನಪದ ಚಿತ್ರ ಕಾರ್ಡ್ ಬೋರ್ಡಿಗೆ ಅಂಟಿಸಿ

ಅದರಲ್ಲಿ ಜಿ.ಆರ್.ಉಪಾಧ್ಯಾಯ ವಾಚು ಅಳವಡಿಸಿ ಕೊಟ್ಟೆ. ಅವರೆಲ್ಲರಿಗೆ ಕೊಟ್ಟಾಗ ನನ್ನ ಮನಸ್ಸಿಗೆ ಅತ್ಯಾನಂದವಾಯ್ತು. ಹಣದ ದೃಷ್ಠಿಯಲ್ಲಿ ಕೈ ಕಾಲಿಯಾಗಿ ಸ್ವಲ್ಪ ಸಾಲವೂ ಆಯ್ತು. ದೇವರನ್ನು ಪ್ರಾರ್ಥಿಸಿ ಮಾಡುವ ಕೆಲಸಗಳಿಗೆ ಪರಮಾತ್ಮ ಅನುಗ್ರಹಿಸುತ್ತಾನೆ ಎಂಬುದನ್ನು ನ್ನನ 60ನೇ ಶಾಂತಿಯ ಕಾರ್ಯಕ್ರಮದಿಂದ ತಿಳಿದುಕೊಂಡಿದ್ದೇನೆ. ಪರಮಾತ್ಮ ನಂಬಿದವರ ಕೈ ಬಿಡಲಾರ ಖಂಡಿತ. ದೇವಸ್ಥಾನದ ಹೊರಸುತ್ತಿನ ಗೋಡೆಯಲ್ಲಿ ನಾನು ಬಿಡಿಸಿದ್ದ ಹಲವಾರು ಚಿತ್ರಗಳನ್ನು ಪ್ರದರ್ಶನ ಮಾಡಿದ್ದೆ. **ಶ್ರೀ ಹರಿ ಕೃಷ್ಣ ಪುನರೂರು** ಉದ್ಘಾಟನೆ ಮಾಡಿದ್ದರು. ನೂರಾರು ಬಂಧುಮಿತ್ರರು ಪ್ರದರ್ಶನ ವೀಕ್ಷಿಸಿ ಸಂತೋಷ ಪಟ್ಟರು. ಈ ಸಂದರ್ಭ ಶ್ರೀಯುತ **ಪಿಲಿಪ್ ರೇಗೋ** ಇವರು ದೇವಸ್ಥಾನಕ್ಕೆ ಹಿಂದೂ ಅಧ್ಯಾತ್ಮಿಕ 60 ಪುಸ್ತಕಗಳನ್ನು ನನ್ನ ಮೂಲಕ **ಅರ್ಚಕರಾದ ಶ್ರೀನಿವಾಸ ಭಟ್ರಿಗೆ** ಕೊಡುವ ಕಾರ್ಯಕ್ರಮವೂ ಇತ್ತು.



**13–01–2010ರಂದು ನನ್ನ ಅಮ್ಮ ಕೃಷ್ಣವೇಣಿಯವರು ಸ್ವರ್ಗಸ್ಥರಾದರು.**

## "ವಿಶ್ವರೂಪ ದರ್ಶನ"



ಸುರತ್ಕಲ್ ಹೊಸಬೆಟ್ಟು ಸಿ**ತಾರ್ ವಾದಕ ಶ್ರೀ ಸಂಜೀವರಾವ್** ಇವರಿಂದ ಮೊಬ್ಯಾಲ್ ಕರೆ ಬಂತು. ವಿಚಾರಿಸಿದಾಗ ಹೊಸಬೆಟ್ಟು ರಾಘವೇಂದ್ರ ಮಠದಲ್ಲಿ ಒಂದು ಗೋಡೆಯಲ್ಲಿ ಚಿತ್ರ ಬಿಡಿಸುವ ಬಗ್ಗೆ ತಿಳಿಸಿದರು. ಮರುದಿನವೇ ರಾಘವೇಂದ್ರ ಮಠಕ್ಕೆ ಹೋಗಿ ಆಡಳಿತಾಧಿಕಾರಿ **ಶ್ರೀ ವಾದೀಶಾಚಾರ್ಯರನ್ನು** ಶ್ರೀಯುತ ಸಂಜೀವರಾಯರನ್ನೂ ಮಾತನಾಡಿಸಿದೆ. ರಾಘವೇಂದ್ರ ಮಠದ ಮೆಟ್ಟಲು ಹತ್ತುವ ಜಾಗ 10x12 ಅಡಿ ಖಾಲಿ ಜಾಗ ತೋರಿಸಿದರು. ನಾನು ಅದನ್ನು ಹಿಂಬದಿಯಿಂದ ಜಾಲರಿ ಕಾಂಕ್ರೀಟ್ ಸ್ಲ್ಯಾಬಿನಿಂದ ಮುಚ್ಚಿ $7^1/_2$x 9 ಅಡಿ ಉದ್ದ ಅಗಲಕ್ಕೆ ಸರಿಯಾಗಿ ಸಿಮೆಂಟ್ ಫ್ರೇಮ್ ಮಾಡಿಸಿ ಕೊಡಿ, ಬಳಿಕ ನಾನು ಅದಕ್ಕೆ ಸರಿಯಾಗಿ ಬಟ್ಟೆಯನ್ನು ಕ್ಯಾನ್‌ವಾಸನ್ನಾಗಿ ಪರಿವರ್ತಿಸಿ ನಿಮಗೆ ಬೇಕಾದ ಚಿತ್ರ ಬಿಡಿಸಿ ಕೊಡುತ್ತೇನೆ ಎಂದೆ. ಒಂದು ತಿಂಗಳಲ್ಲಿ ಬಿಡಿಸಿ ಕೊಡಬೇಕಾದ ಚಿತ್ರ **"ವಿಶ್ವರೂಪದರ್ಶನ"** (ಇಷ್ಟರ ತನಕ ನಾನು ಇಷ್ಟು ದೊಡ್ಡ ಗಾತ್ರದ ಚಿತ್ರ ಬಿಡಿಸಿರಲಿಲ್ಲ.) ಒಂದು ಪ್ರಯತ್ನದ ಪ್ರತಿಫಲವಾಗಿ ಒಂದು ತಿಂಗಳ ಪರಿಶ್ರಮದಿಂದ ಕ್ಯಾನ್‌ವಾಸಿನಲ್ಲಿ ವಿಶ್ವರೂಪ ದರ್ಶನ ಚಿತ್ರ ಬಿಡಿಸಿ **ಹೊಸಬೆಟ್ಟು ರಾಘವೇಂದ್ರ ಮಠಕ್ಕೆ** ಹೋಗಿ ಕೊಟ್ಟುದ್ದು ಶ್ರೀ ಗುರುಗಳ ಅನುಗ್ರಹದಿಂದ. ಅದನ್ನು ಈಗಲೂ ಮುಖ್ಯ ದ್ವಾರದ ಬಳಿ ಜಾಗ್ರತೆಯಲ್ಲಿ ಕನ್ನಡಿ ಫ್ರೇಮ್ ಹಾಕಿಸಿ ಇರಿಸಿದ್ದಾರೆ.

**ಯಾವುದೇ ಆಚಾರಗಳನ್ನು ಮಾಡುವಾಗಲೂ ವಿಚಾರವಿರುತ್ತದೆ ವಿಚಾರ ಮಾಡದೆ ಆಚಾರ ದೂಷಿಸುವವರು ಮೂರ್ಖರು**

# ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಡಾ. ಡಿ. ವೀರೇಂದ್ರ ಹೆಗ್ಗಡೆಯವರಿಂದ ನನಗೆ ಸಿಕ್ಕಿದ ಪ್ರೋತ್ಸಾಹ

**ಚಿತ್ರಕಲೆಯನ್ನು ಪ್ರೋತ್ಸಾಹಿಸುವ ಅದ್ವಿತೀಯ ಮಹಾನ್ ಏಕೈಕ ವ್ಯಕ್ತಿ ಎಂದರೆ ಶ್ರೀ ಧರ್ಮಸ್ಥಳ ಧರ್ಮಾಧಿಕಾರಿಗಳಾದ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು.** ನನ್ನ 60ನೇ ವರ್ಷ ಮುಗಿದಾಗ ನನ್ನ ಮನೆ ತುಂಬಾ ಚಿತ್ರಗಳು ತುಂಬಿದ್ದವು. ಈ ಚಿತ್ರಗಳನ್ನು ಇರಿಸಲು ಜಾಗವಿಲ್ಲದೆ ಒದ್ದಾಡುತ್ತಿದ್ದೆ. ನೋಡುವ ಪ್ರೇಕ್ಷಕರಿಲ್ಲದೆ ನನ್ನ ಚಿತ್ರಗಳೆಲ್ಲಾ ಮೂಲೆ ಪಾಲಾಗುವುದು ಬೇಡವೆಂದು, ಶ್ರೀ ಹೆಗ್ಗಡೆಯವರಿಗೆ ಒಂದು ಪತ್ರ ಬರೆದು ವಿನಂತಿಸಿದೆ. ನನ್ನ ಚಿತ್ರಗಳನ್ನು ನಿಮಗೆ ದಾನ ನೀಡಬಹುದಾ? ಎಂದು. ಎಲ್ಲಾ ಚಿತ್ರಗಳನ್ನು ಒಟ್ಟಾಗಿ ತನ್ನಿ ತಂದರೆ ವ್ಯವಸ್ಥೆ ಮಾಡಿ ಪ್ರೇಕ್ಷಕರು ನೋಡುವಂತೆ ಇರಿಸುತ್ತೇವೆ ಎಂದು ಮರು ಉತ್ತರ ಬಂತು. ಕೂಡಲೇ ಇನ್ನೊಂದು ಚಿತ್ರ ಬಿಡಿಸಿ ನನ್ನ 61ನೇ ವರ್ಷಕ್ಕೆ 61 ಚಿತ್ರಗಳನ್ನು ಫ್ರೇಮ್ ಹಾಕಿ ನನ್ನ ಅಳಿಯ **ಶ್ರೀ ದೇವಿ ಪ್ರಸಾದರ** ಜೀಪಿನಲ್ಲಿ ಒಂದು ಸೋಮವಾರ ಕೊಂಡು ಹೋದೆ. ಅಲ್ಲಿ ಲಕ್ಷಾನುಗಟ್ಟಲೆ ಭಕ್ತ ಜನರ ಸಂದಣಿಯ ಮಧ್ಯದಲ್ಲಿ ತೂರಿಕೊಂಡು ಶ್ರೀ ಹೆಗ್ಗಡೆಯವರಲ್ಲಿ 2 ಚಿತ್ರ ಕೊಂಡು ಹೋಗಿ ತೋರಿಸಿದೆ. ಅವರಿಗೆ ತುಂಬಾ ಖುಷಿಯಾಯ್ತು. ಅವರ ಪರ್ಸನಲ್ ಅಸಿಸ್ಟೆಂಟ್‌ರವರನ್ನು ಕರೆದು ಚಿತ್ರಗಳನ್ನು ಜಾಗ ಇರುವಲ್ಲಿ ಜೋಡಿಸಿ ಇಡಲು ಹೇಳಿ ಇದರ ಮೊತ್ತವನ್ನು ನನ್ನಲ್ಲಿ ವಿಚಾರಿಸಿದರು. ನಾನು ದಾನ ಕೊಡುವುದಾಗಿ ಹೇಳಿದೆ. ಅಲ್ಲದೆ ಪ್ರೇಕ್ಷಕರು ವೀಕ್ಷಿಸುವಂತೆ ವ್ಯವಸ್ಥೆ ಮಾಡಿ ಇಡುವ ಬಗ್ಗೆ ವಿನಂತಿಸಿದೆ. ಬಳಿಕ ನಾವು ಬಂದು ಒಂದು ವಾರದಲ್ಲಿ ಶ್ರೀ **ಮಂಜುನಾಥ ದೇವರ ಪ್ರಸಾದ ಎಂದು ರೂ. 30 ಸಾವಿರ ಕಳುಹಿಸಿರುವುದು ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಇರುವ ಕಲಾಭಿಮಾನ ಮತ್ತು ಪ್ರೋತ್ಸಾಹಿಸುವ ಗುಣವನ್ನು ತಿಳಿಸುತ್ತದೆ.**

## ಶ್ರೀ ಕ್ಷೇತ್ರ ಧರ್ಮಸ್ಥಳದ "2005 ಮಹಾನಡಾವಳಿ" ಚಿತ್ರ



2006ರಲ್ಲಿ ಶ್ರೀ ಹೆಗ್ಗಡೆಯವರ ಬಳಿಗೆ ಹೋಗಿ ನಾನು ಈ ಹಿಂದೆ ಬಿಡಿಸಿದ್ದ (2002)ರಲ್ಲಿ ಕರಾವಳಿ ಜಾನಪದ ಇದರ ಚಿತ್ರದ ಫ್ಲೆಕ್ಸ್ ಪ್ರತಿ ತೋರಿಸಿದಾಗ ಶ್ರೀ ಹೆಗ್ಗಡೆಯವರು ತನಗೆ ಧರ್ಮಸ್ಥಳಕ್ಕೆ ಸಂಬಂಧಿಸಿದಂತೆ ಕ್ಯಾನ್‌ವಾಸ್ ತೈಲಚಿತ್ರ ಬಿಡಿಸಿಕೊಡಿ ಎಂದರು. ಅವರ ಅಭಿಪ್ರಾಯದಂತೆ ಅದೇ ದಿನ ಧರ್ಮಸ್ಥಳದಲ್ಲೇ ಒಂದು ಪುಸ್ತಕದ ಅಂಗಡಿಯಿಂದ **"ಮಹಾ ನಡಾವಳಿ 2005"** ಪುಸ್ತಕ ತೆಗೆದುಕೊಂಡು ಬಂದು $3^1/_2$ ಅಡಿ 7 ಅಡಿ ಉದ್ದ ಅಗಲದ ಕ್ಯಾನ್‌ವಾಸಿನಲ್ಲಿ 45 ವರ್ಷಕ್ಕೊಮ್ಮೆ ನಡೆಯುತ್ತಿದ್ದ **"ಶ್ರೀ ಕ್ಷೇತ್ರ ಧರ್ಮಸ್ಥಳದ ನಡಾವಳಿ 2005ರಲ್ಲಿ"** ನಡೆದ ಸಂದರ್ಭದ ನನಗೆ ಬೇಕಾಗಿದ್ದ ಕೆಲವು ಫೋಟೋವನ್ನು ಪುಸ್ತಕದಿಂದ ಆಯ್ಕೆ ಮಾಡಿ ಬಿಡಿಸಲು ಪ್ರಾರಂಭಿಸಿದೆ. ಅದರಲ್ಲಿ ಆಕಾಶದಲ್ಲಿ ಹೆಗ್ಗಡೆ ವಂಶಸ್ಥರಾದ ಮೂರು ಧರ್ಮಾಧಿಕಾರಿಗಳ

ಭಾವಚಿತ್ರ (ಅಸ್ತಂಗತರಾಗಿರುವವರು) ಬಿಡಿಸಿದೆ. ಅಲ್ಲದೆ ಓಂ ನಮಃ ಶಿವಾಯ ಮೋಡದಲ್ಲಿ ಅಳವಡಿಸಿದೆ. ದ್ವಾರ ಚಿತ್ರ ಬಿಡಿಸಿ ಶ್ರೀ ಹೆಗ್ಡೆಯವರ ಭಾವಚಿತ್ರ ಸ್ವಾಗತ ದ್ವಾರದ ಹತ್ತಿರ ಬಿಡಿಸಿದೆ. ಗೋಮ್ಮಟ ಬೆಟ್ಟ, ಧರ್ಮಸ್ಥಳ ಮಂಜುನಾಥ ದೇವಸ್ಥಾನ, ಬೀಡಿನ ಮನೆ, ಬಸದಿ ಬಿಡಿಸಿದ ಬಳಿಕ ನಡಾವಳಿ ಸಂದರ್ಭ ಹೊರೆಕಾಣಿಕೆ ನೋಡಿಕೊಳ್ಳುತಿದ್ದ ಹೆಗ್ಡೆಯವರ ಮಾತೃಶ್ರೀಗಳಾದ **ರತ್ನಮ್ಮ ಹೆಗ್ಡೆ**ಯವರ ಚಿತ್ರ ಬಿಡಿಸಿ ಮಹಾ ನಡಾವಳಿಯಲ್ಲಿ ಕೊನೆಯ ದಿವಸ ಎಲ್ಲರಿಗೂ ಮನರಂಜನೆ ನಿಡುವ **"ಸೂರೆ ಚಪ್ಪರ"**ದ ಸಂದರ್ಭ ಹೆಗ್ಡೆಯವರು ತಮ್ಮ ತಲೆಯಿಂದ ಪೇಟ ಎತ್ತಿ ಬಿಸಾಡಿದಾಗ ಗದ್ದೆಯಲ್ಲಿ ಅಲ್ಲಲ್ಲಿ ಅಡಗಿಸಿ ಇಟ್ಟಿದ್ದ ಮನೆಯ ನೂರಾರು ಸಾಮಾಗ್ರಿಗಳನ್ನು ಸುತ್ತ ನೆರೆದಿದ್ದ ಸಾವಿರಾರು ಜನರು ನಾಮುಂದು ತಾಮುಂದು ಎಂದು ಓಡೋಡಿ ಬಂದು ಆಯ್ಕೆ ಮಾಡದೆ ತಮಗೆ ಕೈಗೆ ಸಿಕ್ಕಿದ ವಸ್ತುವನ್ನು ಹಿಡಿದುಕೊಂಡು ಓಡಿ ಹೋಗುವ ಹೊತ್ತುಕೊಂಡು ಹೋಗುತ್ತಿರುವ ದೃಶ್ಯ ಬಿಡಿಸಿದೆ. ನಡಾವಳಿ ಸಂದರ್ಭ ಐದು ದೈವಗಳಿಗೆ ನಡೆಯುವ ನೇಮದ ಚಿತ್ರ ಬಿಡಿಸಿದೆ. ಮಂಜುನಾಥ ದೇವರ ಎದುರು ನಿಂತು ಹೆಗ್ಡೆ ಕುಟುಂಬಸ್ಥರು ಕೈ ಮುಗಿದು ನಡಾವಳಿ ಪ್ರಾರಂಭಕ್ಕೆ ಪ್ರಾರ್ಥನೆ ಸಲ್ಲಿಸುವ ಚಿತ್ರ, ಮರಗಿಡಗಳಲ್ಲಿ ಗಣಪತಿ ಈಶ್ವರ ದೇವರ ಚಿತ್ರಗಳನ್ನು ಕಾಣದಂತೆ ಚಿತ್ರಿಸಿದೆ. ನೂರಾರು ಓಂಗಳಿವೆ ಈ ಚಿತ್ರದಲ್ಲಿ. ಒಂದು ತಿಂಗಳಲ್ಲಿ "ಮಹಾ ನಡಾವಳಿ 2005"ನ್ನು ಕ್ಯಾನ್‌ವಾಸಿನಲ್ಲಿ ತೈಲಚಿತ್ರ ಬಿಡಿಸಿ ಪ್ರೇಮ್ ಹಾಕಿ ಶ್ರೀ ವೀರೇಂದ್ರ ಹೆಗ್ಡೆಯವರಲ್ಲಿ ಕೊಟ್ಟಾಗ ನನ್ನ ಬೆನ್ನು ತಟ್ಟಿ **25 ಸಾವಿರ ಶ್ರೀ ಮಂಜುನಾಥ ದೇವರ ಪ್ರಸಾದ** ಎಂದು ಕೊಟ್ಟಿರುವುದು ಶ್ರೀ ಹೆಗ್ಡೆಯವರ ಕಲಾಭಿಮಾನದ ದೊಡ್ಡ ಗುಣವನ್ನು ತಿಳಿಸುತ್ತದೆ. 2014ನೇ ನವೆಂಬರ್ 25ರಂದು ಶ್ರೀ ಹೆಗ್ಡೆಯವರ ಜನ್ಮ ದಿನಾಂಕದ ಸಲುವಾಗಿ **ಅವರ ಭಾವಚಿತ್ರವನ್ನು ಕ್ಯಾನ್‌ವಾ**ಸಿನಲ್ಲಿ ಬಿಡಿಸಿಕೊಟ್ಟೆ ಅವರಿಗೆ ತುಂಬಾ ಸಂತೋಷವಾಯ್ತು.


Shri. Dr. D. Veerendra Heggade

## 2004 ಜೂನ್ ತಿಂಗಳಿಂದ ಜಾತಕ ಮಾಡುವ ಅಂಗಡಿ ಪ್ರಾರಂಭಿಸಿದೆ

ನಾನು ಬೆಂಗಳೂರು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ ಚಿತ್ರಕಲಾ ಸಹಾಯಕ ನಿರ್ದೇಶಕನಾಗಿ 25–06–03ರಿಂದ 31–10–2003ರ ತನಕ ಕೆಲಸ ನಿರ್ವಹಿಸುತ್ತಿರುವಾಗ ವಿಲ್ಸನ್ ಗಾರ್ಡನ್ ರಸ್ತೆ ಬದಿಯಲ್ಲಿ ಒಂದು ಬೋರ್ಡ್ ನೋಡಿದೆ. ಅದರಲ್ಲಿ 5 ನಿಮಿಷದಲ್ಲಿ ನಿಮ್ಮ ಜಾತಕ ಪ್ರಿಂಟ್ ಮಾಡಿ ಕೊಡಲಾಗುವುದು ಎಂದು ಬರೆದಿತ್ತು. ವಿಚಾರಿಸಿಕೊಂಡು ಮಹಡಿ ಮೇಲೆ ಹತ್ತಿ ನನ್ನ ಮಗ **ಗುರುಪ್ರಸಾದ**ನ ಜಾತಕ ಮಾಡಿಸಿದೆ. ಅವನ ಮುಂದಿನ ವಿದ್ಯಾಭ್ಯಾಸ ಜೀವನ ನಡವಳಿಕೆ ಬಗ್ಗೆ ತುಂಬಾ ಚಿಂತೆಯಲ್ಲಿದ್ದ ನಾನು ಜಾತಕ ಓದಿ ನೋಡಿದಾಗ ಎಂಬತ್ತು ಪಾಲು ಅವನ ನಡವಳಿಕೆಗಳು ಜಾತಕಕ್ಕೆ ಹೊಂದಾಣಿಕೆಯಾಗುತ್ತಿತ್ತು. ನನಗೆ ಓದಿ ಬಹಳ ಕುಶಿಯಾಯ್ತು. ಈ ಜಾತಕ ಮಾಡಿಕೊಟ್ಟವರು **ಶ್ರೀ ಭಾಸ್ಕರ ಶೆಟ್ಟಿ** ಎನ್ನುವವರು ಅವರ ಅಭಿಪ್ರಾಯದಂತೆ ನಾನು

ನಿವೃತ್ತಿ ಬಳಿಕ ಇದೇ ರೀತಿಯ ಜಾತಕ ಮಾಡಿ ಕೊಡುವ ಅಂಗಡಿ ಮಾಡುವುದಾಗಿ ನಿರ್ಧರಿಸಿದೆ. ಅವರು **ಶ್ರೀ ಸಂದೇಶ್ ರಾವ್** ಎಂಬವರ ದೂರವಾಣಿ ನಂಬರ್ ಕೊಟ್ಟರು. ಶ್ರೀ ಸಂದೇಶ್‌ರಾವ್‌ರವರಿಂದ **"ಲೈಫ್ ಸೈನ್"** ಎಂಬ ಸಾಫ್ಟ್‌ವೇರ್‌ನ್ನು 20 ಸಾವಿರ ಕೊಟ್ಟು ಖರೀದಿಸಿದೆ. ಕಂಪ್ಯೂಟರ್ ಹಾಗೂ ಪ್ರಿಂಟರ್, ಸ್ಪೈರಲ್ ಹೋಲ್ ಮಾಡುವ ಮಿಷನ್ ಖರೀದಿಸಿದೆ.

ಕಾವೂರು ಪೇಟೆಯಲ್ಲಿ ಸಣ್ಣ ಅಂಗಡಿಗಾಗಿ ಹುಡುಕಿ ಕಾವೂರು ಕಾಂಪ್ಲೆಕ್ಸ್‌ನಲ್ಲಿ **ಶ್ರೀನಿವಾಸ ಭಟ್ಟರ** ಅಧೀನವಿದ್ದ ಒಂದು ಕೋಣೆಯಲ್ಲಿ **'ಉಪಾಧ್ಯಾಯ ಗ್ರಾಫಿಕ್ಸ್'** ಹೆಸರಿನ **ಜಾತಕ ಮಾಡುವ ಅಂಗಡಿ**ಯನ್ನು ಗಣಹೋಮ ಮಾಡಿ ಪ್ರಾರಂಭಿಸಿದೆ. ತಿಂಗಳಿಗೆ ಕೆಲವೊಮ್ಮೆ 8–10 ಜಾತಕವೂ ಬರುತ್ತಿರಲಿಲ್ಲ. ಬಾಡಿಗೆ ಕೂಡಾ ನನ್ನ ಪೆನ್‌ಶನ್ ಹಣದಿಂದ ಕೊಡುತ್ತಿದ್ದೆ. ನಾನು ಇಲ್ಲದಿದ್ದಾಗ ಅಂಗಡಿ ನೋಡಿಕೊಳ್ಳಲು ಒಬ್ಬಳು ಹುಡುಗಿಯನ್ನು ನೇಮಿಸಿದ್ದೆ. ಕೆಲವು ತಿಂಗಳಲ್ಲಿ ಅವಳಿಗೆ ನನ್ನ ಪೆನ್‌ಶನ್ ಹಣದಿಂದಲೇ ಸಂಬಳ ಕೊಡುವ ಪರಿಸ್ಥಿತಿ ಇತ್ತು. ಆದರೂ ನನ್ನ ಜಾತಕ ಅಂಗಡಿಯಿಂದ ನೆಮ್ಮದಿ ಸಿಗುತ್ತಿತ್ತು. ಬೆಳಿಗ್ಗೆ ಎದ್ದು ನಿತ್ಯಕರ್ಮ ಮುಗಿಸಿ 9 ಗಂಟೆಗೆ ಅಂಗಡಿಗೆ ಬಂದರೆ ಮತ್ತೆ ಮನೆಗೆ ಸಂಜೆ ಹೋಗುತ್ತಿದ್ದೆ. ಈ ಅವಧಿಯಲ್ಲಿ ಪೇಪರ್ ಓದುತ್ತಾ ಬಂದವರಲ್ಲಿ ಕಷ್ಟ ಸುಖ ಕ್ಷೇಮ ಸಮಾಚಾರ ಮಾತನಾಡಿ ಸಮಯ ಹೋದುದು ತಿಳಿಯುತ್ತಿರಲಿಲ್ಲ. ಶ್ರೀನಿವಾಸ ಭಟ್ರು ಅಂಗಡಿ ಮಾರಿದ ಕಾರಣ **ಡಾ। ರಾಮಚಂದ್ರ** ರಾಯರ ಅಧೀನವಿದ್ದ **ಕಾವೂರು ಮೆಡಿಕಲ್** ಮಾಲಕರಾದ **ಶ್ರೀ ಸುಬ್ಬರಾವ್** ಇವರ ಅಂಗಡಿ ಖಾಲಿ ಇದ್ದ ಕಾರಣ ಅಲ್ಲಿ 3 ವರ್ಷ ಕಳೆದೆ. ಬಳಿಕ ಅದನ್ನು ಡಾ। ರಾಮಚಂದ್ರರಾಯರು ದುರಸ್ತಿಗೊಳಿಸುವ ಸಲುವಾಗಿ ನಾನು ಅಲ್ಲಿಂದ ಅದರ ಮುಂಭಾಗದಲ್ಲಿ ಇದ್ದ ಕೊಠಡಿಗೆ ಅಂಗಡಿಯನ್ನು ವರ್ಗಾಯಿಸಿದೆ. ನನ್ನ ಅಂಗಡಿ ಜೊತೆ ಇದ್ದ **"ಸುಮುಖ ಪ್ರಿಂಟರ್ಸ್"** ಇವರ ಸಹಾಯ ಸಹಕಾರದೊಂದಿಗೆ ಸಣ್ಣ ಕೊಠಡಿಯಲ್ಲಿ ಈಗಲೂ ಜಾತಕ ಮಾಡುತ್ತಾ ಸಮಯವನ್ನು ಕಳೆಯುತ್ತಿದ್ದೇನೆ. ನನಗೆ ಜಾತಕ, ಕುಂಡಲಿ, ಗ್ರಹಗತಿ, ನಕ್ಷತ್ರ ರಾಶಿ ಎಂದರೆ ಏನೆಂದೇ ಗೊತ್ತಿಲ್ಲ. ಆದರೂ **ನಿವೃತ್ತಿಯ ಪ್ರವೃತ್ತಿ**ಯಾಗಿ ಸಮಯ ಕಳೆಯಲು ಒಂದು ದಾರಿ ಹುಡುಕಿಕೊಂಡಿದ್ದೇನೆ. ಜಾತಕಕ್ಕೆ ಜನ ಬಾರದಿದ್ದರೂ ನೆಮ್ಮದಿ ಸಿಗುತ್ತಿದೆ. ಇದೇ ಸಂತೋಷ ನೀಡುತ್ತಿದೆ. ಹೆಸರು, ಜನನ, ದಿನಾಂಕ, ಸಮಯ, ಸ್ಥಳ ಇಷ್ಟನ್ನು ಟೈಪ್ ಮಾಡಿ ಪ್ರಿಂಟ್‌ಗೆ ಕೊಟ್ಟಾಗ 28 ಪುಟದ ಜಾತಕ ಸ್ಫುಟವಾಗಿ ಬರುತ್ತದೆ. 15 ನಿಮಿಷದಲ್ಲಿ ಜಾತಕ ಮಾಡಿ ಪುಸ್ತಕ ರಚಿಸಿಕೊಡುತ್ತೇನೆ. ಈಗ ಮನೆಯ ಒಬ್ಬರು ಜಾತಕ ಮಾಡಿಸಿಕೊಂಡರೆ ಮನೆಮಂದಿ ಎಲ್ಲರದ್ದು ಮಾಡಿಸುತ್ತಿರುವುದರಿಂದ ಜಾತಕದ ಮಾಪನ ಸರಿ ಇರಬಹುದೆಂದು ಎಣಿಸುತ್ತೇನೆ. ನಿವೃತ್ತಿ ಬಳಿಕ 6 ವರ್ಷ ಬಲ್ಮಠ ಸರಕಾರಿ, ಮಹಿಳಾ ಶಿಕ್ಷಕ ತರಬೇತಿ ಸಂಸ್ಥೆಯಲ್ಲಿಯ ಡಿ.ಎಡ್ ವಿದ್ಯಾರ್ಥಿನಿಯರಿಗೆ ಉಚಿತವಾಗಿ ಚಿತ್ರಕಲಾ ಬೋಧನೆ ಮಾಡಿದೆ. ಈಗ ಬೆಳಿಗ್ಗೆ 9ರಿಂದ 12ರ ತನಕ ಕಾವೂರು ಕಾಂಪ್ಲೆಕ್ಸ್ ಜಾತಕದ ಅಂಗಡಿಯಲ್ಲಿದ್ದು ಸಂಜೆ ಗಂಟೆ 2ರಿಂದ 4ರ ತನಕ **ಕಟೀಲು ಪ್ರೌಢಶಾಲೆಯಲ್ಲಿ ಚಿತ್ರಕಲೆಯನ್ನು ಕಲಿಸುತ್ತಾ ಶಾಲಾ ಮಕ್ಕಳೊಂದಿಗೆ ಸಂತೋಷವಾಗಿ ನಿವೃತ್ತಿ ಜೀವನ ನಡೆಸುತ್ತಿದ್ದೇನೆ.**

# ನನ್ನ ಮಗ ಗುರುಪ್ರಸಾದ – ಸುಮನರ ವಿವಾಹ (1–3–2012)

## 13–11–2011ನೇ ಆದಿತ್ಯವಾರ ಗುರುಪ್ರಸಾದ ಸುಮನರ ನಿಶ್ಚಿತಾರ್ಥ



ನನ್ನ ಮಗ **ಗುರುಪ್ರಸಾದ**ನಿಗೆ ಕಲಿಯುವ ಆಸಕ್ತಿ ಇಲ್ಲದ್ದರಿಂದ ಅವನ ಅಭಿಪ್ರಾಯದಂತೆ ಚಿತ್ರಕಲೆ ಕಲಿಸುವ ಉದ್ದೇಶದಿಂದ ಮೈಸೂರಿನ **"ಕಾವಾ"** ಎಂಬ ಕಲಾಶಾಲೆಗೆ ಸೇರಿಸಿದೆ. ಅವನು ಪ್ರಚಾರ ಕಲೆಯಲ್ಲಿ **ಬಿ.ಎಫ್.ಎ** ಪದವಿ ಪಡೆದ ನಂತರ ಚಿತ್ರಕಲೆಗೆ ಸಂಬಂಧಿಸಿ ಕೆಲವು ಕಂಪ್ಯೂಟರ್ ಕೋರ್ಸ್ ಮಾಡಿಕೊಂಡ (ಕೊರಲ್‌ಡ್ರಾ, ಎನಿಮೇಷನ್, ಎಡೋಬ್ ಫೋಟೋಶೋಪ್) 7–8 ವರ್ಷ ಮಲ್ಲಿಕಟ್ಟೆಯ **ವಿವೇಕ್ ಸ್ಟುಡಿಯೋ**ದಲ್ಲಿ ಎಡಿಟಿಂಗ್ ಕೆಲಸ ಮಾಡಿ ಬಳಿಕ ಬೆಂಗಳೂರಿನ ವಿಲ್ಸನ್ ಗಾರ್ಡನ್‌ನಲ್ಲಿರುವ **ಶೀತಲ್ ಸ್ಟುಡಿಯೋ**ದಲ್ಲಿ 2 ವರ್ಷ ಕೆಲಸ ಮಾಡಿದ. ಆವಾಗ ಅವನಿಗೆ 32 ವರ್ಷ ಮುಗಿದಿತ್ತು. ಕನ್ಯಾನ್ವೇಷಣೆ ಮಾಡುತ್ತಿದ್ದೆ.

ಪುತ್ತೂರು ಕರ್ತಡ್ಕದ ಕೇಕುಣ್ಣಾಯರ ವಂಶಸ್ಥರಲ್ಲಿ ಒಬ್ಬರಾದ **ಶ್ರೀಯುತ ಶಿವರಾಮ ಕೇಕುಣ್ಣಾಯರು** ಕರ್ತಡ್ಕದಲ್ಲೇ ಹುಟ್ಟಿ ಬೆಳೆದವರು. ಬಿ.ಎ.ಬಿ.ಎಡ್ ವಿದ್ಯಾಭ್ಯಾಸ ಮಾಡಿದ್ದರೂ ಸರಕಾರಿ ಶಾಲೆಯಲ್ಲಿ ಶಿಕ್ಷಕ ಕೆಲಸ ಸಿಗದ ಕಾರಣ ಪೌರೋಹಿತ್ಯದಿಂದ ಜೀವನ ತೆಗೆಯಲು ಪ್ರಾರಂಭಿಸಿದರು. ಇವರ ಪತ್ನಿ **ಮನೋರಮಾ ಕೇಕುಣ್ಣಾಯರು.** ಇವರು ಕೆಲವು ಸಮಯ ಬಾಲವಾಡಿ ಶಿಕ್ಷಕಿಯಾಗಿ ಕೆಲಸ ನಿರ್ವಹಿಸಿದ್ದರು. ಇವರಿಗೆ **ಸುಮನ** ಮತ್ತು **ಸಹನ** ಎಂಬ ಹೆಸರಿನ ಎರಡು ಹೆಣ್ಣುಮಕ್ಕಳು. ಇಬ್ಬರಿಗೂ ಉತ್ತಮವಾದ ವಿದ್ಯಾಬುದ್ಧಿಯಿಂದ ಕಲಿಸಿ ಬೆಳೆಸಿದ್ದರು. ಸುಮನ **ಬಿ.ಎಸ್ಸಿ, ಬಿ.ಎಡ್** ಮಾಡಿದ್ದು, **ಸಂಗೀತದಲ್ಲಿ ಸೀನಿಯರ್** ಪರೀಕ್ಷೆ ಮುಗಿಸಿಕೊಂಡಿದ್ದಳು. ಆ ಸಂದರ್ಭ ವರಾನ್ವೇಷಣೆಗಾಗಿ ತೊಡಗಿ ಜಾತಕ ಸಂಬಂಧಿಗಳಲ್ಲಿ ಕೊಟ್ಟದ್ದು ದೊಡ್ಡ ತೋಟದ **ಶ್ರೀಮತಿ ಮಾಲತಿ ಮುರಾರಿ**ಯವರ ಮೂಲಕ ನನ್ನ ಮಗಳ ಮನೆಗೆ ಬಂದು ನನ್ನ ಕೈ ಸೇರಿತು. ಜಾತಕ ತುಲನೆ ಮಾಡಿ ನೋಡಿದಾಗ ಕೂಡಿ ಬಂದುದರಿಂದ ಹುಡುಗಿ ನೋಡಲು ಶ್ರೀಯುತ ಶಿವರಾಮ ಕೇಕುಣ್ಣಾಯರು ನೆಲೆಸಿದ್ದ ಪುತ್ತೂರಿನಲ್ಲಿ ಹೊಸದಾಗಿ ಕಟ್ಟಿಸಿದ್ದ **"ಶಾಂತಿ ಕಲಾನಿಕೇತನ"** ಮನೆಗೆ ಬಾಲಕೃಷ್ಣ ಪೊಯ್ಯಾತ್ತಾಯರು, ದೇವಿಪ್ರಸಾದ, ನಾನು, ನನ್ನ ಪತ್ನಿ, ಮಗ ಗುರುಪ್ರಸಾದ್ ಹೋದೆವು. ನಮಗೆ ಒಪ್ಪಿಗೆಯಾಗಿ ಹುಡುಗಿಯ ಕಡೆಯವರದ್ದೂ ಒಪ್ಪಿಗೆ ಸಿಕ್ಕಿದ ಕಾರಣ ನಿಶ್ಚಿತಾರ್ಥಕ್ಕೆ ವ್ಯವಸ್ಥೆ ಮಾಡಿದೇವು.

ನನ್ನ ಗುರು ಹಿರಿಯರಿಗಾಗಿ ಬಂಧುಗಳಿಗಾಗಿ ಮಿತ್ರರಿಗಾಗಿ ನಾನೇ ರಚಿಸಿದ ಆಮಂತ್ರಣ ಹಾಗೂ ಅದರ ಹಿಂಬದಿಯಲ್ಲಿ **ಉಡುಪಿಯಿಂದ ಕರ್ತಡ್ಕದ** ತನಕ ಹೋಗಲು 50 ಆಸನವಿರುವ ವಾಹನ ವ್ಯವಸ್ಥೆ ಮಾಡಿದೆ. ಉಡುಪಿಯಿಂದ ಪಡುಬೆಳ್ಳೆಗಾಗಿ, ಮಾಣಿ ಬೆಟ್ಟಿಗಾಗಿ, ಶಿರ್ವ ಮುದರಂಗಡಿ, ಪಡುಬಿದ್ರೆ – ಮುಲ್ಕಿ ಪುನರೂರು – ಕಟೀಲು ಬಜ್ಪೆ, ಕಾವೂರಿನ ನಮ್ಮ ಮನೆಗೆ ಬಂದು ಬಿ.ಸಿ ರೋಡ್ ಪುತ್ತೂರು ಮೂಲಕ ಕರ್ತಡ್ಕ ಹೋಗಿ ಮನೆ ಸೇರಿದಾಗ ಗಂಟೆ 1 ಆಗಿತ್ತು. **ಕೆಮ್ಮಾಯಿ ವಿಷ್ಣು ಮಂಟಪದಲ್ಲಿ 1–3–2012ರಂದು**

**ಗುರುಪ್ರಸಾದ ಸುಮನರಿಗೆ ವಿವಾಹ ಮಾಡುವುದಾಗಿ ಗುರುಹಿರಿಯರಿದ್ದು ನಿಶ್ಚಯವಾಯ್ತು.** ಮೈಸೂರಿನಿಂದ **ಬಾಲಕೃಷ್ಣ ಬಾವ** ಹಾಗೂ **ಹಯವದನ ಆಚಾರ್ಯ**ರು ಬಂದಿದ್ದರು. 100–125 ಜನ ಸೇರಿದ್ದರು. ಊಟ ಮಾಡಿ 3 ಗಂಟೆಗೆ ಹೊರಟು ಬಸ್ಸು ಉಡುಪಿಗೆ ಹೋದಾಗ ರಾತ್ರಿ ಗಂಟೆ ಎಂಟು ಆಗಿತ್ತಂತೆ. ನಾವು ಕಾವೂರಿನಲ್ಲಿ ಇಳಿದೆವು. ಲಕ್ಷ್ಮೀಯ ಪದಕವಿರುವ ಮುತ್ತಿನ ಸರ ಹಾಗು ಉಂಗುರ ಸೀರೆ ಮದುಮಗಳಿಗೆ ನಾವು ಕೊಟ್ಟೆವು. ಮದುಮಗನಿಗೆ ಉಂಗುರ ಹುಡುಗಿ ಕಡೆಯವರು ಕೊಟ್ಟರು.

ಶಿಕ್ಷಕಿಯರೆಂದರೆ ಭಾರತದ ಸುಸಂಸ್ಕøತ ಶ್ರೇಷ್ಠ ಉದ್ಯೋಗಿಗಳೆಂದು ನಾನು ತಿಳಿದಿದ್ದೇನೆ. ಯಾಕೆಂದರೆ ಕೈ ತುಂಬಾ ಬಳೆ ಇಟ್ಟು, ಸೀರೆ ಉಟ್ಟುಕೊಂಡು, ತಲೆ ತುಂಬ ಹೂ ಮುಡಿದು, ತಿಲಕವಿಟ್ಟುಕೊಂಡು ಮನೆಗೆ ಬರುವ ಹೆಂಗಸು ಲಕ್ಷ್ಮೀಯಂತೆಯೂ, ಶಾಲೆಯಲ್ಲಿ ಸರಸ್ವತಿಯಂತೆಯೂ ಕಾಣುತ್ತಾಳೆ. ಅಂತಹ ಹುಡುಗಿ ನನಗೆ ಸೊಸೆಯಾಗಿ ಸಿಕ್ಕಿರುವುದು ನನ್ನ ಅದೃಷ್ಟವೆಂದು ತಿಳಿದಿದ್ದೇನೆ.

ಬಿ.ಎಸ್.ಸಿ., ಬಿ.ಎಡ್. ಹಾಗೂ ಶಾಸ್ತ್ರೀಯ ಸಂಗೀತವದಲ್ಲಿ ಸೀನಿಯರ್ ಪರೀಕ್ಷೆ ಪಾಸಾಗಿದ್ದ ಹುಡುಗಿ ನನಗೆ ಸೊಸೆಯಾಗಿ ಬರುತ್ತಾಳೆ ಎಂದು ಸಂತೋಷಪಟ್ಟೆ. 20 ವರ್ಷ ನಾನು ಟಿ.ಸಿ.ಎಚ್,ಡಿ.ಎಡ್., ಬಿಎಡ್ ಶಿಕ್ಷಕರಿಗೆ ಕಲಿಸುವ ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದಕ್ಕೆ ಭಗವಂತ ನನಗೆ ಕೊಟ್ಟ ವರವೆಂದು ಎಲ್ಲರಲ್ಲೂ ಹೇಳಿ ಹೆಮ್ಮೆ ಪಟ್ಟುಕೊಂಡೆ. ಕಲಾವಿದನ ಸೊಸೆ ಸಂಗೀತ ಕಲಾವಿದೆಯಾಗಿ ಸಿಕ್ಕಿರುವುದು ನನ್ನ ಭಾಗ್ಯ.

## 1–3–2012 ಬುಧವಾರ ಗುರುಪ್ರಸಾದ–ಸುಮನರ ವಿವಾಹ ಪುತ್ತೂರು ಕೆಮ್ಮಾಯಿ ವಿಷ್ಣು ಮಂಟಪದಲ್ಲಿ



ನನ್ನದೇ ಆದ ರೀತಿಯಲ್ಲಿ 800 ಆಮಂತ್ರಣ ಪತ್ರಿಕೆ ಮಾಡಿ ಹಿಂದುಗಡೆ ವಾಹನ ಸಮಯ ಸೂಚಿ ಪ್ರಿಂಟ್ ಮಾಡಿಸಿದ್ದೆ. ಗುರುಪ್ರಸಾದ ಸುಮನರು ಹಾರ ಹಿಡಿದು ನಿಂತಿರುವ ಭಂಗಿ ಮೇಲ್ಭಾಗದಲ್ಲಿದ್ದರೆ, ಮಧ್ಯಭಾಗದಲ್ಲಿ 2–3–2013ರಂದು ನಡೆಯುವ ಬೀಗರ ಔತಣದ ಆಮಂತ್ರಣ ಆದಿನ ನಡೆಯಲಿರುವ ಶರಣ್ಯ ಪೊಯ್ಯತ್ತಾಯರ ಭರತನಾಟ್ಯದ ಫೋಟೋ, ಸುಮನ ಜಿ. ಪ್ರಸಾದಳಿಂದ ಸಂಗೀತಕ್ಕಾಗಿ ಅವಳ ಪೋಟೋ ಹಾಕಿದ್ದೆ. ಚಿತ್ರ ಪ್ರದರ್ಶನಕ್ಕಾಗಿ ನನ್ನ ಫೋಟೋ ಕೆಳಭಾಗದಲ್ಲಿ ಗುರುಪ್ರಸಾದ್ ಸುಮನರ ಪೋಟೋದೊಂದಿಗೆ ಆಮಂತ್ರಿತರ ಹೆಸರನ್ನು ಹಾಕಿದ್ದೆ. ದಿಬ್ಬಣದ ಬಸ್ಸು ಉಡುಪಿಯಿಂದ 6 ಗಂಟೆಗೆ ಹೊರಟು ಮಾಣಿ ಬೆಟ್ಟಿಗಾಗಿ ಮುದರಂಗಡಿ ಪಡುಬಿದ್ರೆ – ಮುಲ್ಕಿ – ಬಪ್ಪನಾಡು ಕಟೀಲು – ಬಜ್ಪೆಗಾಗಿ ಕಾವೂರು ದೇವಸ್ಥಾನದಲ್ಲಿ ಟಿಫಿನ್ ಮಾಡಿ ಬಿ.ಸಿ.ರೋಡ್‌ನ ಮೂಲಕ ಪುತ್ತೂರು ಕೆಮ್ಮಾಯ ವಿಷ್ಣು ಮಂಟಪ ಮುಟ್ಟಿದಾಗ ಗಂಟೆ 11–30 ಆಗಿತ್ತು.

ಮಧ್ಯಾಹ್ನ ಒಂದು ಗಂಟೆಗೆ ಸರಿಯಾಗಿ ಕಾವೂರು **ಸತ್ಯಭಾಮ ಜಿ.ಆರ್. ಗೋಪಾಲಕೃಷ್ಣ ಉಪಾಧ್ಯಾಯರ** ಮಗ **ಗುರುಪ್ರಸಾದ**ನೊಂದಿಗೆ **ಸಂಪ್ಯ ಮನೋರಮಾ ಶಿವರಾಮ ಕೇಕುಣ್ಣಾಯರ** ಪ್ರ.ಪುತ್ರಿ **ಸುಮನ**ರ ವಿವಾಹ ಗುರುಹಿರಿಯರ ಸಮ್ಮುಖದಲ್ಲಿ ಹಾರ ಬದಲಾಯಿಸಿಸುವುದರೊಂದಿಗೆ ಕರಿಮಣಿ ಕಟ್ಟುವುದರೊಂದಿಗೆ, ಸಪ್ತಪದಿ ತುಳಿಯುವುದರೊಂದಿಗೆ ವಿಜೃಂಭಣೆಯಿಂದ ನಡೆಯಿತು. 700–800 ಜನ ಸೇರಿದ್ದರು. ಮೈಸೂರಿನ ನಮ್ಮ ಬಂಧುಗಳಲ್ಲಿ 50 ಜನ ಬಂದಿರುವುದು ಆಶ್ಚರ್ಯವೆಂದು ಶ್ರೀ ಹಯವದನ ಆಚಾರ್ಯರು ಹೇಳುತ್ತಿದ್ದರು. ಮದುವೆ ಹಿಂದಿನ ರಾತ್ರಿ ಮೈಸೂರಿನಿಂದ ಬಂದಿರುವ ಹುಡುಗನ ಕಡೆಯ ಬಂಧು ಬಾಂಧವರಿಗೆ ಹುಡುಗಿಯ ಕಡೆಯವರು ವಿಷ್ಣು ಮಂಟಪದಲ್ಲಿ ವಸತಿ ವ್ಯವಸ್ಥೆ ಊಟೋಪಚಾರದ ವ್ಯವಸ್ಥೆ ಚೆನ್ನಾಗಿ ಮಾಡಿದ್ದರೆಂದು ತಿಳಿದು ಸಂತೋಷವಾಯ್ತು.

ಗುರುಪ್ರಸಾದ ಸುಮನ, ಸೌಮ್ಯ ಮದುಮಗಳ ಅತ್ತೆ ದೇವಿಪ್ರಸಾದನ ಕಾರಿನಲ್ಲಿ ಕಾವೂರಿಗೆ ಬಂದರೆ ನಾವೆಲ್ಲಾ ಮದುವೆ ದಿಬ್ಬಣದ ಬಸ್ಸಿನಲ್ಲಿ ಬಂದೆವು. ಕಾವೂರಿನ ಶ್ರೀ ಸತ್ಯಕಲಾ ನಿಕೇತನಕ್ಕೆ ಮದುಮಕ್ಕಳು ಗೃಹಪ್ರವೇಶ ಮಾಡಿದಾಗ ಸಂಜೆ ಗಂಟೆ 6–30. ನಾನು ಮತ್ತು ನನ್ನ ಸೊಸೆಯಂದಿರು ಅಳಿಯಂದಿರು (ಮೈಸೂರು ಸುಮತಿ ಅಕ್ಕನ ಮಕ್ಕಳು) ಸೇರಿ ಜೀಪಿನಲ್ಲಿ ದೇವಸ್ಥಾನಕ್ಕೆ ಹೋಗಿ 02–03–2012ರ ಬೀಗರ ಔತಣದ ವ್ಯವಸ್ಥೆ ಮಾಡಿದೆವು. ಮನೆಗೆ ಬಂದ ಅತಿಥಿಗಳಿಗೆ ಊಟ ಉಪಚಾರಕ್ಕೆ ಬಾಯಾರಿಕೆ ಕೊಡಲು ಹೂ ಹಾಕುವ ಕಲ್ಲಿನ ಶ್ರೀ ಬಾಲು ಭಟ್ಟರು ಇದ್ದರು. ಚಿತ್ರಕಲಾ ಪ್ರದರ್ಶನಕ್ಕೆ ಶ್ರೀಯುತ ಶ್ರೀ ಪಿಲಾರು ಕೃಷ್ಣ ಭಟ್ಟರ ಮಗ ಸುಬ್ರಹ್ಮಣ್ಯ ಭಟ್ ತಾನೇ ಜವಾಬ್ದಾರಿ ತೆಗೆದುಕೊಂಡು ದೇವಸ್ಥಾನ ಹೊರಾಂಗಣದ ಗೋಡೆಯಲ್ಲಿ ಚಿತ್ರಗಳನ್ನು ವ್ಯವಸ್ಥೆ ಮಾಡಿದ್ದನ್ನು ಜೀವಮಾನದಲ್ಲಿ ಮರೆಯಲು ಸಾಧ್ಯವಿಲ್ಲ. (ರಾತ್ರಿ 1 ಗಂಟೆಯ ನಂತರ ನನ್ನ ಅಳಿಯನ ಜೀಪಿನಲ್ಲಿ ಕೂಳೂರಿಗೆ ಹೋಗಿ ಅಲ್ಲಿಂದ ಮುದರಂಗಡಿಗೆ ಲಾರಿಯಲ್ಲಿ ಹೋಗಿ ಅಲ್ಲಿಯ ಬ್ರಹ್ಮಕಲಶದ ಕೆಲಸಕ್ಕೆ ಸಹಾಯ ಮಾಡಲು ಹೋಗಿದ್ದ).

01–03–12ರ ರಾತ್ರಿ 12 ಗಂಟೆಯ ತನಕ ಸೊಸೆಯಂದಿರು ಅಳಿಯಂದಿರು ಸೇರಿ 1000 ಪ್ಯಾಕೇಟಿನಲ್ಲಿ 3 ಲಾಡು–ಬೀಡ–ಶಿವಪಾರ್ವತಿ ಚಿತ್ರ ಹಾಕಿ ಪ್ಯಾಕ್ ಮಾಡಿಕೊಟ್ಟರು. ರಾತ್ರಿ 50 ಜನಕ್ಕೆ ದೇವಸ್ಥಾನದಲ್ಲೇ ಊಟ.

## 2–3–2012ರಂದು "ಬೀಗರ ಔತಣ"

02–03–2012ರಂದು ಗುರುವಾರ ಬೆಳಿಗ್ಗೆ 7–30ಕ್ಕೆ ಶ್ರೀ **ಸತ್ಯನಾರಾಯಣ ದೇವರ ಪೂಜೆ,** ಮನೆಯಲ್ಲಿ **ಗುರುಸುಮ**ನರು ಸಂಕಲ್ಪಕ್ಕೆ ಕುಳಿತರು. ಬಳಿಕ ನಾನು ಸತ್ಯಭಾಮ 10 ಗಂಟೆಗೆ ದೇವಸ್ಥಾನಕ್ಕೆ ಹೋಗಿ **ಗಣಹೋಮ**ಕ್ಕೆ ಕುಳಿತೆವು. 11ಕ್ಕೆ ಬಚ್ಚಂಗಾಯಿ ಶರ್ಬತ್ ನೀಡಿ ಬಂದವರ ದಣಿವು ನಿವಾರಿಸುವ ವ್ಯವಸ್ಥೆ ಮಾಡಲಾಗಿತ್ತು. ಸ್ವಾಗತಕ್ಕೆ 2 ಜೋಕರ್‌ಗಳಿದ್ದರು. 11–30ಕ್ಕೆ ಸರಿಯಾಗಿ **ಲಕ್ಷ್ಮೀ ಶೋಭಾನ ಎಕ್ಕಾರು ಶ್ರೀಮತಿ ಕಾಂಚನ**ರವರ ನೇತೃತ್ವದಲ್ಲಿ ಐದು ಜನ ಸುಮಂಗಲೆಯರು ಹಾಡಿದರು. ಕಾವೂರು ಮಹಾಲಿಂಗೇಶ್ವರ ದೇವಸ್ಥಾನದ ಸಭಾಭವನ ತುಂಬಿದ್ದು ಕಂಡು ತುಂಬಾ

ಸಂತೋಷವಾಯ್ತು. 15 ನಿಮಿಷ ಬಾಲಕೃಷ್ಣ ಪೊಯ್ಯತ್ತಾಯರ ಮೊಮ್ಮಗಳು (ನನ್ನ ಮಗಳು ಸೌಮ್ಯ ದೇವಿಪ್ರಸಾದರ ಪ್ರಥಮ ಪುತ್ರಿ) **ಶರಣ್ಯ ಪೊಯ್ಯತ್ತಾಯ**ಳಿಂದ ಭರತನಾಟ್ಯ ಮುಗಿದು, ಸುಮನ ಜಿ. ಪ್ರಸಾದ್ ಮದುಮಗಳಿಂದ 15 ನಿಮಿಷ ಸುಶ್ರಾವ್ಯಕಂಟದಿಂದ ಎರಡು **ಭಕ್ತಿಗೀತೆ** ಆದ ನಂತ್ರ ನನ್ನ ಚಿಕ್ಕಪ್ಪನ ಮಗ ಮೋಹನ ಸುಕನ್ಯಾ ದಂಪತಿಗಳ 2ನೇ ಮಗಳು **"ಅರ್ಪಿತಾ"**ಳಿಂದ ತುಳುವಿನಲ್ಲಿ ದಂಪತಿಗಳಿಗೆ ಶುಭಾಶಯ ಪದ್ಯ ಹಾಡಿದ್ದು, ಜೋರಾಗಿ ತಟ್ಟಿದ ಎಲ್ಲರ ಕೈ ಚಪ್ಪಾಳೆಯ ಸದ್ದು, ಈಗಲೂ ಕೇಳುತ್ತಿದೆ. ಮದುಮಕ್ಕಳ ಆರತಕ್ಷತೆ ಶುಭಾಶಯದೊಂದಿಗೆ ಫೋಟೋ ಕ್ಲಿಕ್ಕಿಸಿಕೊಳ್ಳುವ ಕಾರ್ಯಕ್ರಮ ಮುಗಿದು ಬೀಗರ ಔತಣದ ಊಟ 800 ಜನರ ಊಟಕ್ಕೆ ವ್ಯವಸ್ಥೆ ಮಾಡಿದ್ದೆನಾದರೂ 700 ಜನ ಮಾತ್ರ ಬಂದಿದ್ದರಿಂದ ಮಾಡಿದ ಪದಾರ್ಥ ಉಳಿಯಿತು. ಲಾಡು ಹೋಳಿಗೆ ಜಿಲೇಬಿ ಭಕ್ಷ್ಯ ಪಾದಾರ್ಥಗಳ ಊಟವನ್ನು ಹೆಚ್ಚಿನವರು ಮೆಚ್ಚಿದರು. ದೇವಸ್ಥಾನದ ಸುತ್ತಲೂ ಹಾಕಿದ್ದ ನನ್ನ ಚಿತ್ರಕಲಾ ಪ್ರದರ್ಶನಕ್ಕೂ ಎಲ್ಲರಿಂದ ಪ್ರಶಂಸೆ ಬಂತು. **ಶ್ರೀ ಕಾವೂರು ಮಹಾಲಿಂಗೇಶ್ವರ ದೇವರ ಅನುಗ್ರಹದಿಂದ ವಿವಾಹ ಹಾಗೂ ಬೀಗರ ಔತಣ ವಿಜೃಂಭಣೆಯಿಂದ ನಡೆಯಿತು.**

## ನನ್ನ ಮಗ ಗುರುಪ್ರಸಾದ (ಮತ್ತು) ನಂಬರ್ – 1 = (1.10.19.28)

ಗುರುಪ್ರಸಾದನ ಜನನ ದಿನಾಂಕ : 1–01–1979 ದಿನಾಂಕ = **1**

1+1+1+9+7+9=28=2+8=10 = **1**

ಜನನ ತಿಂಗಳು : ಜನವರಿ = **1**

ಜನನ ಸಮಯ ಮಧ್ಯಾಹ್ನ ಗಂಟೆ = **1**

ಕನ್ಯಾನ್ವೇಷಣೆ ಹುಡುಗಿ ನೋಡಿದ್ದು = **1**

ಸುಮನಳನ್ನು ನೋಡಲು ಹೋದ ದಿನಾಂಕ : 2011 ಜುಲೈ 10 = **1**

ಪುತ್ತೂರಿನಿಂದ ಸುಮನಳ ಮನೆಯವರು ನಮ್ಮ ಮನೆ ನೋಡಲು ಪ್ರಥಮವಾಗಿ ಬಂದ ದಿನ :

2011 ಆಗಸ್ಟ್ 19 = 1+9=10 = **1**

ಗುರುಪ್ರಸಾದ ಸುಮನರ ನಿಶ್ಚಿತಾರ್ಥ: 13–11–2011, 1+3+1+1+2+0+1+1=10 = **1**

13+11+2011=2035=2+0+3+5=10 = **1**

ಗುರುಪ್ರಸಾದ ಸುಮನರ ವಿವಾಹ 2012–3–1 = **1**

ಗುರುಪ್ರಸಾದ ಸುಮನರ ಬೀಗರ ಔತಣ=2–03–2012, 2+3+2+0+1+2=10 = **1**

ಗುರುಪ್ರಸಾದನ ಜನನ ಜನವರಿ=1, ಸುಮನಳ ಜನನ ದಿನಾಂಕ–ಮೇ18=19 = 1+9 = 10 = **1**

ಗುರುಪ್ರಸಾದನ ಮೊ:ನಂಬ್ರ: 9448622785=9+4+4+8+6+2+2+7+8+5=55, 55=5+5=10 = **1**

## "ಅನ್ವಿತಾಳ ಜನನ"

**12–12–2013 ಗುರುಪ್ರಸಾದ್ ಸುಮನರ ಪ್ರಥಮ ಪುತ್ರಿ** (ಮಧ್ಯಾಹ್ನ ಸಮಯ 12–17ಕ್ಕೆ ಪುತ್ತೂರು ಸಿಟಿ ಆಸ್ಪತ್ರೆಯಲ್ಲಿ) **ಅನ್ವಿತಾಳ ಜನನ.** ಈ ದಿನ ನನ್ನ ಆತ್ಮೀಯರಾದ ಫಲಿಮಾರಿನ



ಕರ್ನಿಕರೆ ಮನೆ ಶ್ರೀ **ಪರಶುರಾಮ್** ಹಾಗೂ ರತ್ನ ದಂಪತಿಗಳ ಸುಪುತ್ರ **ಶ್ರೀನಿವಾಸ – ಸ್ವಾತಿಯ** ವಿವಾಹ ಬಹಳ ವಿಜೃಂಭಣೆಯಿಂದ ಮೂಡಬಿದ್ರೆ ಅಲಂಗಾರು ಮಹಾಲಿಂಗೇಶ್ವರ ದೇವಸ್ಥಾನದ ಪರಿಸರದಲ್ಲಿ ಇಷ್ಟರ ತನಕ ನಾನು ಕಂಡಿರದ ರೀತಿಯ ಚಪ್ಪರ–ಮಂಟಪ–ಊಟದ ವ್ಯವಸ್ಥೆಗಳೊಂದಿಗೆ ನಡೆದಿತ್ತು. ವಿವಾಹವಾಗಿ ಊಟಕ್ಕೆ ಪ್ರಾರಂಭಿಸಿದಾಗ ಗುರುಪ್ರಸಾದನ ಮಾವ **ಶ್ರೀಯುತ ಶಿವರಾಮ ಕೇಕುಣ್ಣಾಯ**ರಿಂದ ಅತೀ ಸಂತೋಷದ (ದೂರವಾಣಿ) ಮೋಬೈಲ್ ಬಂತು. ಸುಮನ ಮಧ್ಯಾಹ್ನ 12.17 ಗಂಟೆಗೆ ಪುತ್ತೂರಿನ ಸಿಟಿ ಆಸ್ಪತ್ರೆಯಲ್ಲಿ ಹೆಣ್ಣು ಮಗುವಿಗೆ ಸಾಮಾನ್ಯ ಜನನ ನೀಡಿರುವುದು ಕೇಳಿ ತುಂಬಾ ತುಂಬಾ ಸಂತೋಷವಾಗಿತ್ತು. ನನ್ನ ಆತ್ಮೀಯರಿಗೆ ಬಂಧುಗಳಿಗೆ ಕೂಡಲೇ ಸಂತೋಷದ ಸುದ್ದಿ ಮೊಬೈಲ್ ಮೂಲಕ ತಿಳಿಸಿ ಸಂತೋಷಪಟ್ಟೆ.

## "ನಮ್ಮ ಕುಡ್ಲ"ದವರ ಗೂಡುದೀಪ ಸ್ಪರ್ಧೆಗೆ ನಾನು ಮಾಡಿದ "ಬಂಗಾರ್‌ದ ತೇರ್" ಗೂಡುದೀಪ ಪ್ರತಿಕೃತಿ

2013ನೇ ವರ್ಷದ ದೀಪಾವಳಿ ಸಂದರ್ಭ **"ನಮ್ಮ ಕುಡ್ಲ"** ಚೆನಾಲ್‌ನವರು ಪ್ರತೀವರ್ಷ ನಡೆಸುತ್ತಿದ್ದ ಗೂಡುದೀಪ ಸ್ಪರ್ಧೆಯಲ್ಲಿ ನಾನೂ ಯಾಕೆ ಭಾಗವಹಿಸಬಾರದೆಂದು ನಾನೊಂದು **ರಥದ ಮಾದರಿ ಗೂಡು ದೀಪ** ಮಾಡಬೇಕೆಂದು ಕೆಲಸಕ್ಕೆ ತೊಡಗಿದೆ. ಚಕ್ರದಂತಹ ದುಂಡಗಿನ 5–6 ತುಂಡುಗಳನ್ನು ಪೊಯ್ಯತ್ತಬೈಲಿನ ಆಚಾರಿಯವರೊಬ್ಬರಿಂದ ಮಾಡಿಸಿಕೊಂಡೆ. ಬಳಿಕ



ಎಲ್ಲಾ ಕೆಲಸವನ್ನು ನಾನೇ ಮಾಡಿದೆ. ದಕ್ಷಿಣ ಕನ್ನಡ ಜಿಲ್ಲೆಯ ಹೆಚ್ಚಿನ ಎಲ್ಲಾ ದೇವಾಲಯಗಳಲ್ಲೂ ಜಾತ್ರಾ ಸಂದರ್ಭ ನಡೆಯುವ ರಥೋತ್ಸವವನ್ನು ಊರಿನ ಆಸುಪಾಸಿನ ಎಲ್ಲಾ ಜನರು ಸೇರಿ ವಿಜೃಂಭಣೆಯಿಂದ ನೆರವೇರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರ ಇಂತಹ ರಥೋತ್ಸವದ ಕಾರ್ಯಕ್ರಮ ಇರುವುದು. ರಥದ ಮಾದರಿಯಲ್ಲಿ ನಾನೂ ಒಂದು ಗೂಡು ದೀಪ ತಯಾರಿಸಬೇಕೆಂದು ನಿರ್ಧರಿಸಿ ಪ್ರಾರಂಭಿಸಿದೆ. ಬೇರೆ ಬೇರೆ ರೀತಿಯ ಮರದ ಕೆತ್ತನೆಕೆಲಸದ ರಥದ ಕೆಳಭಾಗ ರಚಿಸಲು ನಾನು ನಕ್ಷೆ ಕೆತ್ತನೆ ಇರುವ ಬೀಡಿಂಗ್ ರೀಪುಗಳನ್ನು ನನಗೆ ಬೇಕಾದಂತೆ ಎಕ್ಸಲ್ ಬ್ಲೇಡಿನಲ್ಲಿ ತುಂಡುಮಾಡಿ ಪೆವಿಕಾಲ್ ಎಂ.ಸೀಲ್, ಎಸ್.ಆರ್.ಗರಿಗಳಲ್ಲಿ ಅಂಟಿಸಿ ರಚಿಸಿದೆ. ದೇವರು ಇಡುವ ಜಾಗದಲ್ಲಿ ಬಲ್ಬು ಹಾಕಿದೆ. ಸುತ್ತ ನಾನು ಬಿಡಿಸಿದ ಚಿತ್ರಗಳನ್ನು (ಮರಗಳಲ್ಲಿ ಇರುವ ದೇವರ ಚಿತ್ರಗಳನ್ನು) ಹಾಕಿದೆ. 40–50 ನಾನು ಬಿಡಿಸಿದ ಸಣ್ಣ ಚಿತ್ರಗಳನ್ನು ಅದಕ್ಕಿಂತ ಮೇಲ್ಭಾಗದ ಹಂತದಲ್ಲಿ ಹಾಕಿದೆ. ಹೆಂಗಸರ ಆಭರಣಗಳ ಮಾದರಿಗಳನ್ನು ರಥದ ಸುತ್ತ ಜೋತಾಡುವಂತೆ ಅಂಟಿಸಿದೆ. ಬಳಿಕ ವೃತ್ತಾಕಾರವಾಗಿ ಥರ್ಮೋಕೋಲ್‌ಗಳನ್ನು ಕತ್ತರಿಸಿ ಅಂಟಿಸಿದೆ. ಹೊರಭಾಗದಲ್ಲಿ ಧ್ವಜಗಳನ್ನು ಕೆಂಪು ಮತ್ತು ಬಿಳಿ ಬಣ್ಣದ ವಿನ್ಯೆಲ್ ಕತ್ತರಿಸಿ ಅಂಟಿಸಿದೆ. ಸುಮಾರು 2 ಸಾವಿರ ಧ್ವಜಗಳನ್ನು ಅಂಟಿಸಿ ಹಲ್ಲಿನ

ಕಸ ತೆಗೆಯುವ ಕಡ್ಡಿಗೆ ಧ್ವಜ ಅಂಟಿಸಿ ತುದಿಗೆ ಬಂಗಾರದಂತಹ ಬಣ್ಣದ ಮಣಿಗಳನ್ನು ತುದಿಗೆ ಸಿಕ್ಕಿಸಿ ವೃತ್ತಾಕಾರವಾಗಿ ಥರ್ಮೋಕೋಲ್‌ಗೆ ಚುಚ್ಚುತ್ತಾ ಹೋದೆ. ತುದಿ ಭಾಗದಲ್ಲಿ ದುಂಡಗಿನ ಪ್ಲಾಸ್ಟಿಕ್ ಚೆಂಡಿನಲ್ಲಿ ಕಲಶ ರಚಿಸಿದ ಈ ಗೂಡುದೀಪಕ್ಕೆ **"ಬಂಗಾರ್‌ದ ತೇರ್"** ಎಂಬ ಹೆಸರಿಟ್ಟೆ. ನಾಲ್ಕು ಹೊರಗಡೆ ಮೂಲೆಗೆ ಕಂಬ ರಚಿಸಿ ಸೀರಿಯಲ್ ಬಲ್ಬ್ ಹಾಕಿ ರಥ ರಾತ್ರಿಗೂ ಚಂದ ಕಾಣುವಂತೆ ಮಾಡಿದೆ. ಮೇಲಿನ ಕಲಶಭಾಗಕ್ಕೆ ಮೋಟಾರ್ ಅಳವಡಿಸಿ ಸ್ವಿಚ್ ಹಾಕಿದಾಗ ಕಲಶ ತಿರುಗುವಂತೆ ಮಾಡಿದೆ. ಇದು 5 ಅಡಿ ಎತ್ತರವಿರುವ ಗೂಡುದೀಪ.

**"ಈ ಬಂಗಾರದ ತೇರ್"**ಗೂಡುದೀಪವನ್ನು ತೊಕ್ಕೊಟ್ಟಿನಲ್ಲಿ 2013ರ ದೀಪಾವಳಿಯಲ್ಲಿ ಗೂಡುದೀಪ ಸ್ಪರ್ಧೆಗೆ ಕೊಂಡುಹೋಗಿ ಜೋಡಿಸಿದೆ. ಅಲ್ಲಿ ಈ ಗೂಡುದೀಪಕ್ಕೆ ಮೂರನೇ ಬಹುಮಾನ ಬಂದಿರುವುದು ತುಂಬಾ ಸಂತಸ ತಂದಿದೆ. ಅಲ್ಲದೆ ಕುದ್ರೋಳಿಯಲ್ಲಿ **2013ರ ಗೂಡುದೀಪ ಸ್ಪರ್ಧೆ**ಗೆ ಕೊಂಡುಹೋಗಿ ಜೋಡಿಸಿದೆ. ಅಲ್ಲಿ ಸುಮಾರು 1 ಸಾವಿರಕ್ಕಿಂತಲೂ ಹೆಚ್ಚು ಗೂಡುದೀಪ ಬಂದಿದ್ದು ನನ್ನ "ಬಂಗಾರ್‌ದ ತೇರ್" ಈ ಗೂಡುದೀಪಕ್ಕೆ **ನಾಲ್ಕನೇ ಬಹುಮಾನ** ಬಂದು ಸಾವಿರಾರು ಜನರು ವೀಕ್ಷಿಸಿ ನನ್ನ ರಥದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದ್ದರು. **2014ರಲ್ಲಿ ಅಡ್ಯಾರಿನಲ್ಲಿ "ವಿಶ್ವ ತುಳು ಪರ್ಬ"** ನಡೆದ ಸಂದರ್ಭ ನನ್ನ ಚಿತ್ರಕಲಾ ಮಾರಾಟ ಮಳಿಗೆಯಲ್ಲಿ ಪ್ರದರ್ಶನಕ್ಕೆ ಇರಿಸಿ ಸಾವಿರಾರು ಜನ ವೀಕ್ಷಿಸಿ ಸಂತೋಷಪಟ್ಟರು. ಬಳಿಕ ಕಟೀಲು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನದ ಸಂಯುಕ್ತ ವಿದ್ಯಾಸಂಸ್ಥೆಗಳ ಸ್ವರ್ಣ ಮಹೋತ್ಸವ ಸಂದರ್ಭ **"ಬಂಗಾರ್‌ದ ತೇರ್"** ಗೂಡುದೀಪವನ್ನು ಪ್ರದರ್ಶನಕ್ಕೆ ಇಟ್ಟು ಬಳಿಕ ಅಲ್ಲಿಯ ಪದವಿ ಪೂರ್ವ ಕಾಲೇಜಿನ **ಪ್ರಾಂಶುಪಾಲರು ಶ್ರೀಯುತ ಟಿ. ಜಯರಾಮಪೂಂಜ**ರವರು ಪ್ರಾರಂಭಿಸಿದ **ವಸ್ತು ಸಂಗ್ರಹಾಲಯಕ್ಕೆ ಈ ಬಂಗಾರ್‌ದ ತೇರ್** ಗೂಡುದೀಪವನ್ನು ಉಡುಗೊರೆಯಾಗಿ ಕೊಟ್ಟೆ. **ಈಗ ಅದು ಅಲ್ಲಿಯ ವಸ್ತು ಸಂಗ್ರಹಾಲಯದಲ್ಲಿದೆ.**

### ಮೈಸೂರಿನ ಹೊಟೇಲ್ ಗೋವರ್ಧನದಲ್ಲಿಯ ಇರುವ "ಗೋಪಿಕಾಕೃಷ್ಣ"





ಮೈಸೂರು ಕೆ.ಎಸ್.ಆರ್.ಟಿ.ಸಿ ಬಳಿಯಲ್ಲಿ ಹರ್ಷರೋಡಿನಲ್ಲಿ ಹೊಟೇಲ್ ಗೋವರ್ಧನ ವಸತಿಗೃಹವಿದೆ. ಅದಕ್ಕೆ ಸಂಬಂಧಿಸಿ ಗೋಪಿಕಾ ರೆಸ್ಟೋರೆಂಟ್ ಕೂಡಾ ಇದೆ. ಈ ಎರಡರ ಪಾಲುಧಾರರಾಗಿರುವ **ಬೆಳ್ಳೆ ಹಯವದನ ಆಚಾರ್ಯ**ರು (ನನ್ನ ಕ್ಲಾಸ್‌ಮೇಟ್ ಅಲ್ಲದೆ ಬೆಂಚ್‌ಮೆಟ್ ಆಗಿದ್ದವರು. ವಿದ್ಯಾಭ್ಯಾಸ ಸಂದರ್ಭ 1963–65ರಲ್ಲಿ ಮೂಡುಬೆಳ್ಳೆ ಸೈಂಟ್‌ಲಾರೆನ್ಸ್ ಹೈಸ್ಕೂಲ್‌ನಲ್ಲಿ ವಿದ್ಯಾಭ್ಯಾಸ ಸಂದರ್ಭ ನನ್ನ ಕ್ಲಾಸ್‌ಮೇಟ್, ಬೆಂಚ್‌ಮೇಟ್) ಮತ್ತು ಅವರ ಅಣ್ಣ ಬೆಳ್ಳೆ ಬಾಲಕೃಷ್ಣ ಆಚಾರ್ಯರು (ನನ್ನ ಅಪ್ಪನ ಅಕ್ಕ ಜಲಜಮ್ಮ ಹಾಗೂ ವಿಠಲದಾಸ ಆಚಾರ್ಯರ ಮಕ್ಕಳು.)7**x**3.5 ಅಡಿ ಉದ್ದ ಅಗಲದ 9 ಕನ್ಯೆಯರೊಂದಿಗೆ ಕೊಳಲ ಕೃಷ್ಣನಿರುವ ತೈಲಚಿತ್ರ ಬಿಡಿಸುವ ಸಲುವಾಗಿ ರಜಾ ಸಮಯ ಬಾವ ಶ್ರೀ **ಬಾಲಕೃಷ್ಣ ಆಚಾರ್ಯರ** ಇಟ್ಟಿಗೆ ಗೂಡಿನಲ್ಲಿರುವ **ಶ್ರೀ ಹರಿ ಗುರುನಿಲಯ**ದಲ್ಲಿ ಮಾಳಿಗೆಯ ಕೋಣೆಯೊಂದರಲ್ಲಿ ಚಿತ್ರ ಬಿಡಿಸಲು ಪ್ರಾರಂಭಿಸಿದೆ. ಸುಮಾರು ಹದಿನೈದು ದಿನದಲ್ಲಿ ಮೂಡಿಬಂದ ತೈಲಚಿತ್ರ ಈಗಲೂ ಹೋಟೇಲ್ ಗೋವರ್ಧನದಲ್ಲಿ ಬಂದ ಪ್ರವಾಸಿಗರಿಗೆ ವೀಕ್ಷಿಸಲು ಅನುಕೂಲವಾಗುವಂತೆ ಇರಿಸಿರುವುದು ನನಗೆ ತುಂಬಾ ಸಂತೋಷಕೊಟ್ಟಿದೆ. ಇನ್ನೊಂದು ತೈಲಚಿತ್ರ **"ಗೋವರ್ಧನ"**.

# ಚಿತ್ರಕಲಾ ಪ್ರದರ್ಶನಗಳು
# ಹಾಗೂ ದೂರದರ್ಶನ ಪ್ರಸಾರದಲ್ಲಿ ನನ್ನ ಚಿತ್ರಗಳು

**"ಪ್ರದರ್ಶನ ಮಾಡದ ಪ್ರತಿಭೆ ವ್ಯರ್ಥ – ಪ್ರೇಕ್ಷಕರೇ ಇಲ್ಲದ ಪ್ರದರ್ಶನವೂ ವ್ಯರ್ಥ"** ಹೀಗೆ ನನ್ನ ಅನಿಸಿಕೆ. ಪ್ರತಿಭೆ ಇದ್ದ ವ್ಯಕ್ತಿ ತನ್ನ ಪ್ರತಿಭೆಯನ್ನು ಪ್ರೇಕ್ಷಕರು ನೋಡುವಂತೆ ಪ್ರದರ್ಶಿದರೆ ಮಾತ್ರ ಅದು ಪ್ರಖ್ಯಾತಿಗೆ ಬರುತ್ತದೆ. ನಾನು ಚಿತ್ರಕಲಾ ಅಧ್ಯಾಪಕನಾಗಿ ಇದ್ದುದರಿಂದ ಕಲಾವಿದರ ಸಮೂಹದಲ್ಲಿ ಸೇರಲಿಲ್ಲ. **ಕಲಾವಿದ ಹೊಸ ಹೊಸ ಅನ್ವೇಷಣೆ ಮಾಡಿ ಹೊಸಹೊಸ ಕೃತಿಗಳನ್ನು ರಚಿಸುತ್ತಾನೆ. ಆದರೆ ಚಿತ್ರಕಲಾ ಅಧ್ಯಾಪಕ ತನ್ನ ತಿಳಿವಳಿಕೆಗೆ ಗೊತ್ತಿರುವ ಚಿತ್ರಗಳನ್ನು ವಿದ್ಯಾರ್ಥಿಗಳಿಗೆ ಕಲಿಸುತ್ತಾನೆ. ಹಾಗಾಗಿ ನಾನು 36ವರ್ಷ ಬೋಧನೆ ಮಾಡಿದ ಅಧ್ಯಾಪಕನಾಗಿಯೇ ಇದ್ದೆ. ಕಲಾವಿದನಾಗಿ ಇರಲಿಲ್ಲ.** ನಿವೃತ್ತಿ ತನಕ ಮತ್ತು ನಿವೃತ್ತಿ ನಂತರ ನನಗೆ ಮನಸ್ಸಿಗೆ ಸಂತೋಷ ಕೊಡುವ ಚಿತ್ರಗಳನ್ನು ದೊಡ್ಡದು ಮಾಡಿ ಬಿಡಿಸುತ್ತಾ, ದೇವಸ್ಥಾನಗಳಲ್ಲಿ ದೇವರ ಚಿತ್ರಗಳನ್ನು ಬಿಡಿಸುತ್ತಾ, ಸಮಯದ ಸದುಪಯೋಗ ಮಾಡಿಕೊಳ್ಳುತ್ತಿದ್ದೆ. ನನ್ನ ಚಿತ್ರಗಳನ್ನು ಕಲಾಸಕ್ತ ಸಾಮಾನ್ಯ ಜನರೂ ನೋಡಿ ಸಂತೋಷ ಪಡೆಯಬೇಕು ಎಂಬ ಆಸಕ್ತಿ ಮನಸ್ಸಿನಲ್ಲಿತ್ತು. ಆರ್ಟ್ ಗ್ಯಾಲರಿಯಲ್ಲಿ ನನ್ನ ಚಿತ್ರಗಳನ್ನು ಪ್ರದರ್ಶಿಸಲು ನನಗೆ ಮನಸ್ಸಿರಲಿಲ್ಲ. ಯಾಕೆಂದರೆ ನನ್ನ ಚಿತ್ರಗಳು ಬೇರೆ ಚಿತ್ರಗಳನ್ನು ನೋಡಿ ಬಿಡಿಸಿದವುಗಳು. **"ನಾನು ಚಿತ್ರಕಲಾ ಅಧ್ಯಾಪಕ ಮಾತ್ರ – ಕಲಾವಿದನಲ್ಲ"**

**ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ** ಇರುವಾಗ ನನ್ನದೇ ಆದ ರೀತಿಯಲ್ಲಿ **ಬಲ್ಮಠ ಸರಕಾರಿ ಪದವಿಪೂರ್ವ ಕಾಲೇಜಿನಲ್ಲಿ** ಸಂಸ್ಥೆಯ ಎಲ್ಲಾ ಮಕ್ಕಳು ನೋಡಿ ಸಂತೋಷ ಪಡೆಯಲಿ ಎಂದು ಒಂದು ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ ಮಾಡಿದೆ. ಪದವಿಪೂರ್ವ ಕಾಲೇಜಿನ ಅಂದಿನ **ಪ್ರಿನ್ಸಿಪಾಲ್ ಶ್ರೀಮತಿ ರಮಾ ಹಂದೆ**ಯವರಿಂದ ಉದ್ಘಾಟನೆ ಮಾಡಿಸಿದೆ. ಎಲ್ಲಾ ಮಕ್ಕಳು ನಾನು ಬಿಡಿಸಿದ ದೊಡ್ಡ ದೊಡ್ಡ ಗಾತ್ರದ 40 ಚಿತ್ರಗಳನ್ನು ನೋಡಿ ಸಂತೋಷಪಟ್ಟರು. ಅದುವೇ ನನಗೆ ತೃಪ್ತಿ, ಇದು ನನ್ನ **ಪ್ರಥಮ ಪ್ರದರ್ಶನ.**

**ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆ**ಯಲ್ಲಿ ಕರ್ನಾಟಕ ಬ್ಯಾಂಕಿನ ನೆರವಿನಿಂದ ಮಕ್ಕಳ ದಿನಾಚರಣೆ ಸಂದರ್ಭ ಮಾಡಿದ ಪ್ರದರ್ಶನವನ್ನು **ಶ್ರೀಯುತ ನವನೀತ ಶೆಟ್ಟರು** ಉದ್ಘಾಟಿಸಿದ್ದರು. ಎಲ್ಲಾ ಮಕ್ಕಳು ಸಂತೋಷಪಟ್ಟರು.

ಪಡುಬೆಳ್ಳೆಯಲ್ಲಿ **"ಆಚಾರ್ಯ ಸಹೋದರ"**ರಲ್ಲಿ ಒಬ್ಬರಾದ **ಬಿ. ಹಯವದನ ಆಚಾರ್ಯರು ನಾಗಮಂಡಲ** ಸೇವೆ ಮಾಡಿಸಿದರು. ಈ ಸಂದರ್ಭದಲ್ಲಿ ನಾನು ಬಿಡಿಸಿದ ನೂರಾರು ಚಿತ್ರ ಪ್ರದರ್ಶನ ಮಾಡಿದೆ. ಬಂದವರೆಲ್ಲಾ ನೋಡಿ ಸಂತೋಷಪಟ್ಟರು.

**ಇನ್ನ ಮುದ್ದಾಣು ಶ್ರೀ ಮಹಾಲಿಂಗೇಶ್ವರ ದೇವಸ್ಥಾನ**ದಲ್ಲಿ ಬ್ರಹ್ಮಕಲಶೋತ್ಸವ ಸಂದರ್ಭ ದೇವಸ್ಥಾನದ ಹೊರಾಂಗಣದ ಸುತ್ತ ನಾನು ಬಿಡಿಸಿದ ಚಿತ್ರಗಳನ್ನು ಪ್ರದರ್ಶನ ಮಾಡಿದೆ. ಇದನ್ನು ಸಾವಿರಾರು ಭಕ್ತರು ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುವ ಸಂದರ್ಭ ವೀಕ್ಷಿಸಿ ಸಂತೋಷಪಟ್ಟರು.

**ಕಾರ್ಕಳ – ಪ್ರಕಾಶ್ ಹೋಟೇಲ್**ನಲ್ಲಿ ನನ್ನ ಕೆಲವು ಚಿತ್ರಗಳನ್ನು ಮೂರು ವರ್ಷ ರೆಸ್ಟೋರೆಂಟ್ ವಿಭಾಗದಲ್ಲಿ ಪ್ರದರ್ಶನಕ್ಕೆ ಇಟ್ಟು ಸಾವಿರಾರು ಪ್ರೇಕ್ಷಕರು ನೋಡುವಂತೆ ಸಹಕಾರ ನೀಡಿದ ಹೋಟೇಲ್ ಮಾಲಕ **ಶ್ರೀಯುತ ಪ್ರಕಾಶ**ರನ್ನು ಎಂದಿಗೂ ಮರೆಯಲಾರೆ.

**ಶಿರ್ವ ಮಾಣಿಬೆಟ್ಟು ಶ್ರೀ ಮಹಾಲಿಂಗೇಶ್ವರ ದೇವಸ್ಥಾನ**ದ ಹೊರಾಂಗಣದಲ್ಲಿ ಬ್ರಹ್ಮಕಲಶೋತ್ಸವದ ಸಂದರ್ಭ ನನ್ನ ಚಿತ್ರಗಳನ್ನು ಪ್ರದರ್ಶನಕ್ಕೆ ಇಟ್ಟಿದ್ದೆ. ನನ್ನ ಹುಟ್ಟೂರಿನಲ್ಲಿ ಚಿತ್ರ ಪ್ರದರ್ಶನ ಮಾಡಿದಕ್ಕೆ ಊರಿನ ಎಲ್ಲಾ ಜನರು ನನ್ನನ್ನು ಪ್ರಶಂಸಿಸಿ ಸನ್ಮಾನ ಮಾಡಿದರು.

**ಮಂಗಳೂರಿನ "ಶಾರದಾ ವಿದ್ಯಾಸಂಸ್ಥೆ"ಯಲ್ಲಿ ರಜತೋತ್ಸವ ಸಂದರ್ಭ** ಹಲವಾರು ವಿಧದ ಪ್ರದರ್ಶನಗಳನ್ನು ವ್ಯವಸ್ಥೆ ಮಾಡಿದ್ದರು. ಬೇರೆ ಬೇರೆ ರೀತಿಯ ವಸ್ತುಗಳ ಸಂಗ್ರಹಕಾರರಿಂದ ನಡೆದ ಪ್ರದರ್ಶನದಲ್ಲಿ ಒಂದು ಕೊಠಡಿಯನ್ನು ನಾನು ಬಿಡಿಸಿದ ಚಿತ್ರಗಳಿಗಾಗಿ ಮೀಸಲಿಡಲಾಗಿತ್ತು. ಅತ್ಯದ್ಭುತವಾದ ಈ ಪ್ರದರ್ಶನಗಳನ್ನು ವೀಕ್ಷಿಸಲು ಸ್ಥಳೀಯ ವಿದ್ಯಾಸಂಸ್ಥೆಗಳ ಸಾವಿರಾರು ವಿದ್ಯಾರ್ಥಿಗಳು ಪ್ರೇಕ್ಷಕರು ಸಾಲುಗಟ್ಟಿ ಬಂದು ನನ್ನ ಚಿತ್ರಗಳನ್ನೂ ವೀಕ್ಷಿಸಿ ಸಂತೋಷಪಟ್ಟದ್ದು ನನಗೆ ತುಂಬಲಾರದಷ್ಟು ಆನಂದವನ್ನು ಕೊಟ್ಟಿದೆ.

**ಕಟೀಲು ಪದವಿಪೂರ್ವ ಕಾಲೇಜಿನಲ್ಲಿ ಮಕ್ಕಳ ದಿನಾಚರಣೆ** ಸಂದರ್ಭ ಅತಿಥಿ–ಯಾಗಿ ನನ್ನನ್ನು ಕರೆದಿದ್ದರು. ಅಂದು ನಾನು ಬಿಡಿಸಿರುವ ಚಿತ್ರಗಳನ್ನು ವೀಕ್ಷಿಸಲು ಅವಕಾಶವಾಗುವಂತೆ ಪ್ರದರ್ಶನಕ್ಕೆ ಇಟ್ಟಿದ್ದೆ. ನಾನು ಬಿಡಿಸಿದ ಚಿತ್ರಗಳನ್ನು ಸಂಸ್ಥೆಯ ಎಲ್ಲಾ ವಿದ್ಯಾರ್ಥಿಗಳು ನೋಡಿ ಸಂತೋಷಪಟ್ಟರು. **ಪ್ರಿನ್ಸಿಪಾಲ್ ಶ್ರೀಯುತ ಜಯರಾಮ ಪೂಂಜ**ರವರು ನನಗೆ ತುಂಬಾ ಸಹಾಯ, ಸಹಕಾರ ಪ್ರೋತ್ಸಾಹ ಕೊಟ್ಟಿದ್ದಾರೆ.




ಮೂಡುಬಿದಿರೆಯಲ್ಲಿ ವರ್ಷಂಪ್ರತಿ ನಡೆಯುವ **"ನುಡಿಸಿರಿ"** ಕಾರ್ಯಕ್ರಮ **ಡಾ। ಎಂ.ಮೋಹನ ಆಳ್ವರ ನೇತೃತ್ವ**ದಲ್ಲಿ ನಡೆಯುತ್ತಿದೆ. ಇದು ರಾಜ್ಯದ ಲಕ್ಷಗಟ್ಟಲೆ ಜನರನ್ನು ಆಕರ್ಷಿಸುತ್ತಿದೆ. ಅಲ್ಲಿ ಹೆಚ್ಚಾಗಿ 5–6 ವರ್ಷದಿಂದ ನನ್ನ ಚಿತ್ರ ಪ್ರದರ್ಶನವನ್ನು ಒಂದು ಕೊಠಡಿಯುಲ್ಲಿ ಅಣಿಗೊಳಿಸುತ್ತಿದ್ದೇನೆ. ಸಾವಿರಾರು ಕಲಾಭಿಮಾನಿಗಳು ನನ್ನ ಚಿತ್ರಗಳನ್ನು ವೀಕ್ಷಿಸಿ ಸಂತೋಷಪಟ್ಟಿರುವುದು ಖಂಡಿತ. **"ವಿಶ್ವ ನುಡಿಸಿರಿ"** ಸಂದರ್ಭ **"ಕನ್ನಡ ಜ್ಞಾನಪೀಠ ಪುಷ್ಪಗಳು"** ಎಂಬ ಶೀರ್ಷಿಕೆಯಲ್ಲಿ ಎಂಟು ಕನ್ನಡ ಜ್ಞಾನಪೀಠ ಪುರಸ್ಕೃತರ ಚಿತ್ರವನ್ನು ಎಂಟು ಸೂರ್ಯಕಾಂತಿ ಪುಷ್ಪದಲ್ಲಿ ಬಿಡಿಸಿ ಚಿತ್ರಪ್ರತಿಯನ್ನು **ಡಾ॥ ಎಂ. ಮೋಹನ ಆಳ್ವ**ರಿಗೆ ಕೊಟ್ಟದ್ದು, ಅದನ್ನು ಅವರು ಮುಖ್ಯ ವೇದಿಕೆಯ ಮಧ್ಯಭಾಗದಲ್ಲಿ ಇರಿಸಿ ನನಗೆ ಪ್ರೋತ್ಸಾಹ ಕೊಟ್ಟದ್ದನ್ನು ಎಂದಿಗೂ

ಮರೆಯಲಾರೆ. ಇದರ ಮೂಲಕೃತಿಯನ್ನು ಕಟೀಲು ಪ್ರೌಢಶಾಲೆಯಲ್ಲಿ ನಾನು ನಿವೃತ್ತಿ ಬಳಿಕ 3 ವರ್ಷ ಚಿತ್ರಕಲಾ ಅಧ್ಯಾಪಕನಾಗಿದ್ದ ನೆನಪಿಗಾಗಿ ಕೊಟ್ಟಿರುತ್ತೇನೆ.

**ಉಜಿರೆಯಲ್ಲಿ ನಡೆದ ವಿಶ್ವ ತುಳುಸಮ್ಮೇಳನ ಧರ್ಮಸ್ಥಳ ಧರ್ಮಾಧಿಕಾರಿಗಳಾದ ಡಾ|| ಡಿ. ವೀರೇಂದ್ರ ಹೆಗ್ಗಡೆಯವರ ನೇತ್ರತ್ವದ**ಲ್ಲಿ ನಡೆದು ಲಕ್ಷಾನುಗಟ್ಟಲೆ ತುಳು ಜನರ ಮನಸ್ಸಿನಲ್ಲಿ ಶಾಶ್ವತವಾಗಿ ಅಚ್ಚಳಿಯದಂತೆ ಉಳಿದಿದೆ. ಇಂತಹ ಅವಕಾಶವನ್ನು ನಾನು ಬಳಸಿಕೊಂಡು ಇಲ್ಲಿ ಹತ್ತುಹಲವು ಯಕ್ಷಗಾನದ ಚಿತ್ರಗಳನ್ನು ಬಿಡಿಸಿ ಪ್ರದರ್ಶನಕ್ಕೆ ಮತ್ತು ಮಾರಾಟಕ್ಕೆ ಇಟ್ಟಿದ್ದೆ. ತುಳುವರ ರಾಜ ಕಲೆಯಾದ ಯಕ್ಷಗಾನದ ಚಿತ್ರಗಳನ್ನು ಯಕ್ಷಗಾನ ಪ್ರಿಯರು ನೋಡಿ ಸಂತೋಷಪಟ್ಟರು ಕೆಲವರು ಖರೀದಿಸಿದರು. ಸಾವಿರಾರು ಜನರು ನೋಡಿ ಸಂತೋಷಪಟ್ಟದ್ದು ನನಗೂ ಸಂತೋಷಕೊಟ್ಟಿದೆ.

**ಬೆಂಗಳೂರಿನ ಚಿತ್ರಕಲಾ ಪರಿಷತ್ "ಚಿತ್ರಕಲಾ ಸಂತೆ"**ಗೆ ಮೂರು ವರ್ಷ ನನ್ನ ಚಿತ್ರವನ್ನು ಮಾರಾಟಕ್ಕಾಗಿ ಕೊಂಡುಹೋಗಿದ್ದೆ. ಕೆಲವು ಚಿತ್ರ ಮಾರಾಟವಾಗಿರುವುದು. ಅಲ್ಲದೆ ಒಂದು ವರ್ಷ ಮೈಸೂರಿನ ಚಿತ್ರಕಲಾ ಸಂತೆಯಲ್ಲೂ ನನ್ನ ಚಿತ್ರ ಪ್ರದರ್ಶನವಾಗಿತ್ತು. ಮಂಗಳೂರಿನ ಕದ್ರಿ ಪಾರ್ಕಿನಲ್ಲಿ 5–6 ವರ್ಷದಿಂದ ನಡೆದ **"ಕಲಾವಳಿ"** ಸಂದರ್ಭ ನನ್ನ ಚಿತ್ರಗಳನ್ನು ಸಾವಿರಾರು ಪ್ರೇಕ್ಷಕರು ವೀಕ್ಷಿಸಿ ಸಂತೋಷಪಟ್ಟಿದ್ದರು.

**ಕಾವೂರು ಕಾಂಪ್ಲೆಕ್ಸ್‌ನಲ್ಲಿ ಡಾ| ರಾಮಚಂದ್ರರಾಯ**ರಿಂದ ಉದ್ಘಾಟಿಸಲ್ಪಟ್ಟ ನನ್ನ ನೂರಾರು ಚಿತ್ರಗಳನ್ನು ಸಾವಿರಾರು ಪ್ರೇಕ್ಷಕರು ವೀಕ್ಷಿಸಿದ್ದರು. ಏಳು ದಿನದ ಈ ಪ್ರದರ್ಶನವನ್ನು ಸ್ಥಳೀಯ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳು ವೀಕ್ಷಿಸಿ ಆನಂದಿಸಿದರು. **2013 ಸಪ್ಟೆಂಬರ್ 16ನೇ ದಿನಾಂಕದ ಡೈಜಿವರ್ಲ್ಡ್ ವಾರ್ತೆಯಲ್ಲಿ ನನ್ನ ಚಿತ್ರಕಲಾ ಪ್ರದರ್ಶನದ ಬಗ್ಗೆ ಬಂದಿತ್ತು.**

**ಒಂದು ವರ್ಷ ಸುರತ್ಕಲ್ ಗೋವಿಂದದಾಸ್ ಕಾಲೇಜಿ**ನಲ್ಲಿ ಒಂದು ವಾರ ನಡೆಯುತ್ತಿದ್ದ ಯಕ್ಷಗಾನ ಸಪ್ತಾಹ ಕಾರ್ಯಕ್ರಮದಲ್ಲಿ ನನ್ನ ಚಿತ್ರಗಳನ್ನು ಪ್ರದರ್ಶನಕ್ಕೆ ಇಟ್ಟಿದ್ದೆ. ಕಾಲೇಜಿನ ವಿದ್ಯಾರ್ಥಿಗಳು ಅಲ್ಲದೆ ಯಕ್ಷಗಾನಪ್ರಿಯರು ನನ್ನ ಚಿತ್ರದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದರು. ಅಲ್ಲಿಯ ಪ್ರಾಂಶುಪಾಲರು **ಶ್ರೀ ರಾಜಮೋಹನರವರು** ನನಗೆ ತುಂಬಾ ಸಹಕಾರ ನೀಡಿದರು. ಅಲ್ಲಿ **"ನಮ್ಮ ಟಿವಿ"**ಯವರು ಸಂದರ್ಶನ ನಡೆಸಿದರು.

**ಮೂಡುಬೆಳ್ಳೆ ಸೈಂಟ್‌ಲಾರೆನ್ಸ್ ಹೈಸ್ಕೂಲಿನ** ಹಳೆ ವಿದ್ಯಾರ್ಥಿಯಾದ ನನಗೆ – ರಾಜ್ಯ ಮಟ್ಟದ ಪದವಿಪೂರ್ವ ಕಾಲೇಜಿನ ವಿದ್ಯಾರ್ಥಿಗಳ **"ಸ್ವಯಂಸೇವಾ"** ಕಾರ್ಯಕ್ರಮದಲ್ಲಿ ಚಿತ್ರಗಳನ್ನು ಪ್ರದರ್ಶಿಸುವಂತೆ ಕರೆ ಬಂತು. ಹಾಗಾಗಿ ಅಲ್ಲಿ ಒಂದು ದಿನದ ಪ್ರದರ್ಶನ ಇರಿಸಿದ್ದೆ. ವಿದ್ಯಾರ್ಥಿಗಳು ಚಿತ್ರಗಳನ್ನು ನೋಡಿ ಮೆಚ್ಚಿದರು.

**1994 ಕಾವೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಬ್ರಹ್ಮಕಲೋತ್ಸವದ** ಸಂದರ್ಭ ಸಭಾ ಮಂಟಪದ ಮಹಡಿ ಭಾಗದಲ್ಲಿ ನನ್ನ ಚಿತ್ರಕಲಾ ಪ್ರದರ್ಶನವನ್ನು

ಕಾವೂರಿನ ಹೆಚ್ಚಿನ ಜನರು ನೋಡಿದ್ದಾರೆ, ಮೆಚ್ಚಿದ್ದಾರೆ. **2014 ಕಟೀಲು ಪದವಿ ಕಾಲೇಜಿನಲ್ಲಿ** ಚಿತ್ರಕಲೆ ಕಾರ್ಯಾಗಾರಕ್ಕೆ ಒಂದು ದಿನ ನನ್ನನ್ನು ಕರೆದಿದ್ದರು. ಅಂದು ನಾನು ಬಿಡಿಸಿದ ನೂರಾರು ಚಿತ್ರಗಳನ್ನು ಅಲ್ಲಿಯ ವಿದ್ಯಾರ್ಥಿಗಳು ವೀಕ್ಷಿಸಲು ಪ್ರದರ್ಶನಕ್ಕೆ ಇಟ್ಟಿದ್ದೆ. ಎಲ್ಲರೂ ಆನಂದಪಟ್ಟರು.

**2012 ಬಲ್ಮಠ ವಿದ್ಯಾ ಸಂಸ್ಥೆಯ ಶತಮಾನೋತ್ಸವದ ಸಂದರ್ಭ** ಅಲ್ಲಿಯ **ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿದ್ದ ಶ್ರೀಯುತ ವಾಸುದೇವ ಕಾಮತ್**ರವರು ನಾನು ಬಿಡಿಸಿದ್ದ ಕರಾವಳಿ ಜಾನಪದ ಚಿತ್ರವನ್ನು ಇನ್ನೂರು ಜನರಿಗೆ ಸ್ಮರಣಿಕೆ–ಯಾಗಿ ನೀಡಿರುತ್ತಾರೆ. **ಶ್ರೀಯುತ ಕಾಮತ್**ರವರು ನನಗೆ, ನನ್ನ ಚಿತ್ರಕಲೆಗೆ, ತುಂಬಾ ಪ್ರೋತ್ಸಾಹಕೊಟ್ಟಿದ್ದಾರೆ. ಇದೇ ಸಂದರ್ಭ **ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯ ಪ್ರಾಂಶುಪಾಲರಾಗಿದ್ದ ಶ್ರೀಮತಿ ಉಷಾ**ರವರೂ ಕೂಡ ನನ್ನ ಕರಾವಳಿ ಜಾನಪದ ಚಿತ್ರದ ನೂರು ಸ್ಮರಣಿಕೆ ಮಾಡಿಸಿ ನೂರು ಜನರಿಗೆ ಕೊಟ್ಟಿರುವುದು ನನ್ನ ಮೇಲಿನ ಅಭಿಮಾನದಿಂದ ಎಂದು ತಿಳಿಯುತ್ತೇನೆ. ಈ ಸಂದರ್ಭ ಎರಡು ದಿನಗಳಲ್ಲಿ ಸಂಸ್ಥೆಯ ವಿದ್ಯಾರ್ಥಿಗಳು, ಬಂದ ಅತಿಥಿಗಳು, ವೀಕ್ಷಿಸಲು ನಾನು ಬಿಡಿಸಿದ್ದ ನೂರಾರು ಚಿತ್ರಗಳನ್ನು ಪ್ರದರ್ಶನಕ್ಕೆ ಇಟ್ಟಿದ್ದೆ. **ಮಂಗಳೂರಿನ ವಿಶ್ವವಿದ್ಯಾನಿಲಯ**ದಲ್ಲಿ ನನ್ನ ಚಿತ್ರಗಳನ್ನು ಒಂದು ಬಾರಿ ಪ್ರದರ್ಶನಕ್ಕೆ ಇಟ್ಟಿದ್ದೆ.

**2014 ತುಳು ಪರ್ಬ**ದಲ್ಲಿ ಒಂದು ಮಳಿಗೆಯಲ್ಲಿ ನಾನು ಬಿಡಿಸಿರುವ **ಯಕ್ಷಗಾನದ ಮತ್ತು ಕಂಬಳದ ಚಿತ್ರಗಳನ್ನು ಪ್ರದರ್ಶನಕ್ಕೆ ಮತ್ತು ಮಾರಾಟಕ್ಕೆ ಇರಿಸಿದ್ದೆ**. ಜೊತೆಗೆ ನಾನು ಮಾಡಿದ (ಬಂಗಾರದ ತೇರ್) ಬಂಗಾರದ ರಥದ ಮಾದರಿಯ ಗೂಡುದೀಪವನ್ನು ಪ್ರದರ್ಶನಕ್ಕೆ ಇಟ್ಟಿದ್ದೆ. ಹೆಚ್ಚಿನ ಜನರಿಂದ ಪ್ರೋತ್ಸಾಹದ ಮಾತು ಬಂತು.



**ಪುತ್ತೂರು ವಿವೇಕಾನಂದ ಕಾಲೇಜಿನ ಶತಮಾನೋತ್ಸವದ** ಸಂದರ್ಭ ನನಗಾಗಿ ಒಂದು ಕೊಠಡಿಯನ್ನು ಖಾಲಿ ಇರಿಸಿದ್ದರು. ನನ್ನ ನೂರಾರು ಚಿತ್ರಗಳನ್ನು ಪ್ರದರ್ಶನಕ್ಕೆ ಇರಿಸಿದ್ದೆ. ಸಾವಿರಾರು ವೀಕ್ಷಕರು ಅಭಿಪ್ರಾಯ ಪುಸ್ತಕದಲ್ಲಿ ನನ್ನ ಚಿತ್ರದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದ್ದಾರೆ. ಅಲ್ಲದೆ ಅಲ್ಲಿಯ ಕಾಲೇಜಿನ ಸಿಬ್ಬಂದಿವರ್ಗ ಪ್ರಾಂಶುಪಾಲರು ತುಂಬಾ ಸಹಕಾರ ಸಹಾಯಕೊಟ್ಟಿರುವುದನ್ನು ಜೀವನದಲ್ಲಿ ಮರೆಯಲು ಸಾಧ್ಯವಿಲ್ಲ.



**ದೀಪಕನ್ಯೆ** ತೈಲಚಿತ್ರವನ್ನು **ಶ್ರೀಮತಿ ಸೇಸಮ್ಮ** ಎಂಬ ಟಿಸಿಹೆಚ್ ವಿದ್ಯಾರ್ಥಿನಿಯವರಿಗೆ ಬಿಡಿಸಿಕೊಟ್ಟಿರುತ್ತೇನೆ.




ಇದು ಶಕ್ತಿನಗರದ ಭಜನಾ ಮಂದಿರಕ್ಕೆ ಬಿಡಿಸಿಕೊಟ್ಟಿರುವ ದೊಡ್ಡದಾದ ತೈಲಚಿತ್ರ

## ನಾನು ಬಿಡಿಸಿರುವ ಚಿತ್ರಗಳನ್ನು ನೋಡ ಬಯಸುವವರು

**YouTube G. R. Upadhyaya**

YOU TUBE ನಲ್ಲಿ G.R. Upadhyaya ನೋಡಿದರೆ ನನ್ನ ಜೀವನ ಚರಿತ್ರೆ ಹಾಗೂ ಚಿತ್ರ ಪ್ರದರ್ಶನ ಮತ್ತು 250 ಚಿತ್ರಗಳನ್ನು ವೀಕ್ಷಿಸಬಹುದಾಗಿದೆ. ಇದರ ವಿಸಿಡಿ ಮಾರಾಟಕ್ಕೆ ಸಿಗುತ್ತದೆ.

**ನನ್ನನ್ನು YOU TUBE ನ ಮೂಲಕ ಪ್ರಪಂಚಕ್ಕೆ ಪರಿಚಯ ಮಾಡಿಸಿದವರು ಶ್ರೀಯುತ ಹಿರಿಯಡ್ಕ ಮುರಳೀಧರ ಉಪಾಧ್ಯಾಯರು.** ಇವರು ಸಣ್ಣ ಪ್ರಾಯದಿಂದಲೂ ಸಾಹಿತ್ಯಾಸಕ್ತರು ಅಲ್ಲದೆ ಕಲಿಯುವುದರಲ್ಲೂ ನಿಪುಣರಾಗಿದ್ದರು. ನನ್ನ ಅಮ್ಮನ ಅಕ್ಕನ ಮಗ ಎನ್ನುವುದಕ್ಕೆ ನನಗೆ ಹೆಮ್ಮೆ ಅನಿಸುತ್ತದೆ. ಉಡುಪಿ ಪೂರ್ಣಪ್ರಜ್ಞಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದು ನಿವೃತ್ತರಾಗಿದ್ದಾರೆ. ನಮ್ಮ ದೇಶದ ಕೆಲವೇ ಪುಸ್ತಕ ವಿಮರ್ಶಕರಲ್ಲಿ ಇವರೂ ಒಬ್ಬರಾಗಿ ಸೇವೆ ಸಲ್ಲಿಸಿದವರು. ತನ್ನ ಬಾಳಿನುದ್ದಕ್ಕೂ ಸಾಹಿತಿಗಳಾಗಿ, ವಿಮರ್ಶಕರಾಗಿ, ಉಪನ್ಯಾಸಕರಾಗಿ ಸೇವೆ ಸಲ್ಲಿಸಿದವರು. ಇವರ ಧರ್ಮಪತ್ನಿ ಶ್ರೀಮತಿ ಶಾರದಾ ಎಂ. ಉಪಾಧ್ಯಾಯ ಇವರು ಕಡಿಯಾಳಿ ಶಾಲೆಯಲ್ಲಿ ಶಿಕ್ಷಕಿಯಾಗಿ ಕೆಲಸ ನಿರ್ವಹಿಸಿರುತ್ತಾರೆ. ಉಡುಪಿ ದೊಡ್ಡಣಗುಡ್ಡೆಯಲ್ಲಿ ಹಲವು ವರ್ಷಗಳಿಂದ ಹೌಸಿಂಗ್ ಬೋರ್ಡಿನ **ಎಂ.ಐ.ಜಿ ವಿಭಾಗದ 1 ನಂಬ್ರ**ದ ಮನೆಯಲ್ಲಿ ವಾಸವಾಗಿದ್ದು ಈಗ ಅದೇ ಜಾಗದಲ್ಲಿ ಮನೆಗೆ ಹೊಸ ರೂಪ ಕೊಟ್ಟು ಕಲಾತ್ಮಕವಾಗಿ **"ಸಖೀಗೀತ"** ಎಂಬ ಹೆಸರಿನ ಮಾಳಿಗೆ ಮನೆಯಲ್ಲಿ ವಾಸವಾಗಿದ್ದಾರೆ. ಸಖೀಗೀತದಲ್ಲಿ ಒಂದು ದೊಡ್ಡ ಕೊಠಡಿಯನ್ನು **ಗ್ರಂಥಾಲಯವನ್ನಾಗಿ** ಮಾಡಿ ತನ್ನ ಸಾಹಿತ್ಯಾಸಕ್ತಿಗೆ ಸರಿಯಾಗಿ ಬೇರೆ ಬೇರೆ ಕವಿಗಳ ಹೆಸರಿಗೆ ಸರಿಯಾಗಿ ವಿಭಾಗಗಳನ್ನು ಮಾಡಿ ಸಾವಿರಾರು ಪುಸ್ತಕಗಳನ್ನು ಜೋಡಿಸಿ ಇಟ್ಟಿರುವುದನ್ನು ನೋಡಿದರೆ ಲೈಬ್ರೆರಿಗಳು ನಾಚುವಂತಿದೆ. ಇವರ ಮನೆಯ ಒಂದು ಕೊಠಡಿ ಬಾಗಿಲಲ್ಲಿ ನಾನು ಬಿಡಿಸಿದ Glass Painting ಚಿತ್ರ ಇರಿಸಿದ್ದಾರೆ. ಇವರಿಗೆ ಮತ್ತು ಮನೆಯವರಿಗೆ ಪರಮಾತ್ಮ ಆಯುರಾರೋಗ್ಯ ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಇವರು ನನ್ನ **"(ವಿ)ಚಿತ್ರ ಜೀವನ"** ಪುಸ್ತಕಕ್ಕೆ ವಿಮರ್ಶಕರಾಗಿ ಒಪ್ಪಿಕೊಂಡಿರುವುದು ನನ್ನ ಭಾಗ್ಯ ಎನ್ನಬಹುದು.

**www.artistgrupadhyaya.weebly.com ಇದರಲ್ಲಿ ನನ್ನ ಪರಿಪೂರ್ಣ ಜೀವನ ಚರಿತ್ರೆ ಹಾಗೂ ಪರಿಚಯ, ಪತ್ರಿಕೆಗಳಲ್ಲಿ ಬಂದಿರುವ ಚಿತ್ರಗಳನ್ನು, ಮಾಡಿರುವ ಪ್ರದರ್ಶನಗಳನ್ನು, ಹಾಗೂ ಬಿಡಿಸಿರುವ ಚಿತ್ರಗಳನ್ನು ನೋಡಬಹುದು.**

## ಟಿ.ವಿ. ಮಾಧ್ಯಮದಲ್ಲಿ

**19.11.2005 ರಂದು "ನಮ್ಮ ಟಿವಿಯ" "ಪ್ರಥಮ ಕಿರಣ"** ಕಾರ್ಯಕ್ರಮದಲ್ಲಿ

**28.5.2008ರಂದು "ವಿ4 ಚಾನೆಲ್"ನ "ರಂಗಸ್ಥಳ"** ಕಾರ್ಯಕ್ರಮದಲ್ಲಿ **ಶ್ರೀಯುತ ಭಾಸ್ಕರ ರೈ ಕುಕ್ಕುವಳ್ಳಿಯವರೊಂದಿಗೆ** ಸಂಭಾಷಣೆ.

9.7.2010ರಿಂದ 16.7.2010ರ ತನಕ ಸುರತ್ಕಲ್ ಗೋವಿಂದದಾಸ್ ಕಾಲೇಜಿನಲ್ಲಿ ನಾನು ನಡೆಸಿದ ಚಿತ್ರಕಲಾ ಪ್ರದರ್ಶನವನ್ನು **"ಶ್ರೀಯುತ ನವೀನ"** ರವರು **ನಮ್ಮ ಟಿವಿ**ಯಲ್ಲಿ **"ನವೀನ ಸ್ಪರ್ಷ"** ಎಂಬ ಶೀರ್ಷಿಕೆಯೊಂದಿಗೆ ಪ್ರಸಾರಗೊಳಿಸಿದ್ದರು.



**ದುಬ್ಬಾ "ವೀನಸ್ ಹೋಟೇಲಿ'ನಲ್ಲಿ ನಾನು ಬಿಡಿಸಿರುವ ಐದು ರಂಗಸ್ಥಳ ಸಹಿತ ಯಕ್ಷಗಾನದ ತೆಂಕುತಿಟ್ಟು ಚಿತ್ರಗಳಿವೆ.**

**ಕಾವೂರಿನ ಮಹಾತ್ಮಾ ನಗರ**ದಲ್ಲಿರುವ ನನ್ನ ಮನೆ **ಶ್ರೀ ಸತ್ಯಕಲಾ ನಿಕೇತನ**ದಲ್ಲಿ ನಾನು ಬಿಡಿಸಿದ ಕೆಲವು ಮೂಲ ಕೃತಿಗಳು ಹಾಗೂ ಕೆಲವು ಪ್ರತಿಕೃತಿಗಳನ್ನು ನೋಡಬಹುದು.

**ಕಾವೂರು ಬೊಂದೇಲ್ ಮಧ್ಯಭಾಗ**ದಲ್ಲಿರುವ ಕೆ.ಯಚ್.ಬಿ ಕಾಲೋನಿಯ ಬಾಲಭವನದಲ್ಲಿ ನಾನು ಬಿಡಿಸಿರುವ 108 ಚಿತ್ರಗಳ ಪ್ರತಿಕೃತಿಯನ್ನು ಪ್ರಿಂಟ್ ಮಾಡಿಸಿ ಫ್ರೇಮ್ ಹಾಕಿ ಕಲಾಸಕ್ತರಿಗಾಗಿ ಪ್ರದರ್ಶನಕ್ಕೆ ಇಟ್ಟಿದ್ದೇನೆ. ಅಲ್ಲದೆ ಈ ಚಿತ್ರಗಳನ್ನು ಕೆ.ಯಚ್.ಬಿ ಕಾಲೋನಿಯ ಕ್ಷೇಮಾಭ್ಯುದಯ ಸಂಘಕ್ಕೆ ಉದಾರವಾಗಿ ಕೊಟ್ಟಿದ್ದೇನೆ.

**ಶಿರ್ವ ಮಾಣಿಬೆಟ್ಟು ಶ್ರೀ ಮಹಾಲಿಂಗೇಶ್ವರ ದೇವಸ್ಥಾನ**ದ ಒಳಾಂಗಣದ ಗೋಡೆಯಲ್ಲಿ ಪ್ರದಕ್ಷಿಣೆ ಬರುವಾಗ ನನ್ನ ಕೆಲವು ಚಿತ್ರಗಳನ್ನು ವೀಕ್ಷಿಸಬಹುದು. ಶಕ್ತಿನಗರದ ನನ್ನ ಟಿ.ಸಿ.ಎಚ್ ವಿದ್ಯಾರ್ಥಿನಿಗಾಗಿ ಬಿಡಿಸಿದ ಮೈಸೂರಿನ ಆರ್ಟ್‌ಗ್ಯಾಲರಿಯಲ್ಲಿರುವ "ದೀಪಲಕ್ಷ್ಮೀ" ತೈಲಚಿತ್ರ ಅವರ ಮನೆಯಲ್ಲಿದೆ.

**ಕಟೀಲು ಶ್ರೀ ದುರ್ಗಾಪರಮೇಶ್ವರೀ ಪದವಿಪೂರ್ವ ಕಾಲೇಜಿನ ವಸ್ತು ಸಂಗ್ರಹಾಲಯಕ್ಕೆ** ಸುಮಾರು 60 ಪ್ರತಿಕೃತಿ ಚಿತ್ರಗಳನ್ನು ಕೊಟ್ಟಿರುತ್ತೇನೆ. ಅಲ್ಲಿಯ **ಪ್ರಿನ್ಸಿಪಾಲ್ ಶ್ರೀಯುತ ಜಯರಾಮ ಪೂಂಜ**ರು ಅಲ್ಲಿ ಅತೀ ಉತ್ತಮ ರೀತಿಯಲ್ಲಿ ಅಳವಡಿಸಿ ಪ್ರದರ್ಶನಕ್ಕೆ ಇರಿಸಿದ್ದಾರೆ. ಅಲ್ಲದೆ ನಾನು ರಚಿಸಿರುವ **"ಬಂಗಾರ್‌ದ ತೇರ್" (ಗೂಡುದೀಪ ರಥದ ಮಾದರಿಯನ್ನು)** ದಾನವಾಗಿ ಕೊಟ್ಟಿರುತ್ತೇನೆ. ಅದನ್ನೂ ಅಲ್ಲಿ ವ್ಯವಸ್ಥೆ ಮಾಡಿ ಇರಿಸಿದ್ದಾರೆ.

**ಮಧ್ವಾಚಾರ್ಯರ ಜನ್ಮಸ್ಥಳ ಪಾಜಕ ಕ್ಷೇತ್ರದಲ್ಲಿ ಮುಖ್ಯಪ್ರಾಣ** ಹಾಗೂ **ಭೀಮನ ಚಿತ್ರಗಳಿವೆ.** ಮೂಡು ಅಲೆವೂರು ಶ್ರೀ ವಿಷ್ಣುಮೂರ್ತಿ ದೇವಸ್ಥಾನದಲ್ಲಿ **"ದಶಾವತಾರ, ವಿಷ್ಣು, ಬಾಲಕೃಷ್ಣ" – "ಶ್ರೀನಿವಾಸ ದೇವರ"** ಚಿತ್ರವನ್ನು ನೋಡಬಹುದು. ಪಡು ಅಲೆವೂರು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನದಲ್ಲಿ **"ಗಾಯತ್ರಿ"** ಮತ್ತು **"ಲಕ್ಷ್ಮೀ"**ಯ ಚಿತ್ರಗಳು ಪಡುಬಿದ್ರೆಯಲ್ಲಿ **ಭಕ್ತ ಮಾರ್ಕಂಡೇಯ, ಗಂಗಾವತರಣ, ಗಿರಿಜಾ ಕಲ್ಯಾಣ, ನಟರಾಜ** ಈ

ಚಿತ್ರಗಳು, ಶ್ರೀ ಗಣಪತಿ ದೇವಸ್ಥಾನದಲ್ಲಿ ಇವೆ. ನಂದಿಕೂರು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ ಮತ್ತು ಫಲಿಮಾರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನ ವಾಲಗ ಮಂಟಪಗಳಲ್ಲಿ ನಾನು ಬಿಡಿಸಿದ ಚಿತ್ರಗಳಿವೆ. ಇನ್ನ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ **"ಈಶ್ವರ ಪಾರ್ವತಿ ಗಣಪತಿ ಸುಬ್ರಹ್ಮಣ್ಯ"** ಇರುವ ಚಿತ್ರವಿದೆ. ಕಾರ್ಕಳ ರಾಘವೇಂದ್ರ ಮಠದಲ್ಲಿ **ಶ್ರೀ ರಾಘವೇಂದ್ರರ ಚಿತ್ರ**ವಿದೆ. ಸಾಗರ ರಾಘವೇಂದ್ರ ಮಠದಲ್ಲಿ ನಾನು ಬಿಡಿಸಿದ 2–3 ಭಂಗಿಯ ರಾಘವೇಂದ್ರ ಸ್ವಾಮಿಗಳ ಚಿತ್ರವಿದೆ. **ಸಾಂತೂರು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ, ಇನ್ನ ದೇವಸ್ಥಾನದ, ಕಾವೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಬ್ರಹ್ಮರಥದ ಎಲ್ಲಾ ಚಿತ್ರಗಳನ್ನು ನಾನು ಬಿಡಿಸಿಕೊಟ್ಟಿರುತ್ತೇನೆ.** ಇತ್ತೀಚೆಗೆ **ಶರವು ಶ್ರೀ ಗಣಪತಿ ದೇವಸ್ಥಾನದ ಸಣ್ಣ ರಥದ ಚಿತ್ರ**ಗಳನ್ನು ಬಿಡಿಸಿಕೊಟ್ಟಿರುತ್ತೇನೆ. ಕಟೀಲು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನಕ್ಕೆ **ಶ್ರೀ ರಾಜರಾಜೇಶ್ವರೀ ಚಿತ್ರ** ಬಿಡಿಸಿಕೊಟ್ಟಿರುತ್ತೇನೆ. ಅತ್ತೂರು ಜನಾರ್ಧನ ಉಡುಪರ ಮನೆಯಲ್ಲಿ **ರಾಘವೇಂದ್ರ ಸ್ವಾಮಿ**ಗಳ ತೈಲಚಿತ್ರ, ಕಣಂತೂರು ಭಂಡಾರದ ಮನೆಯಲ್ಲಿ **ವೈದ್ಯನಾಥೇಶ್ವರ ದೇವರ** ಚಿತ್ರ, ಕುಲಶೇಖರ ದೇವಿಪ್ರಸಾದ ನಿಲಯದಲ್ಲಿ **ದೇವಿಯ ಚಿತ್ರ**, ಬೊಂದೇಲ್ ಎಂ.ಜಿ.ಸಿ ಶಾಲೆಯಲ್ಲಿ ಕ್ರಿಶ್ಚಿಯನ್ನರಿಗೆ ಸಂಬಂಧಿಸಿದ **(ಮೇರಿ, ಏಸು, ಪಿಯೆಟ್ಟಾ)** 7–8 ತೈಲ ಚಿತ್ರಗಳು, **ಕಾವೂರು ಆದಿಚುಂಚನಗಿರಿಯ ಫ್ರೌಡಶಾಲೆ**ಯಲ್ಲಿ 20 ಪ್ರಕೃತಿ ಚಿತ್ರಗಳು, ಬಲ್ಮಠ ಸರಕಾರಿ ಮಹಿಳಾ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ **ಭಾರತ ಮಾತೆಯ ಚಿತ್ರ,** ಶಕ್ತಿನಗರದ **ಶ್ರೀರಾಮ ಭಜನಾ ಮಂದಿರದಲ್ಲಿ ಆಂಜನೇಯ ಸಹಿತ ರಾಮ, ಸೀತೆ, ಲಕ್ಷ್ಮಣ ದೇವರ ತೈಲಚಿತ್ರ,** ಶಿರ್ವ ವಿಷ್ಣುಮೂರ್ತಿ ದೇವಸ್ಥಾನದಲ್ಲಿ **ವಿಷ್ಣುಮೂರ್ತಿ** ದೇವರ ದೊಡ್ಡ ಗಾತ್ರದ ತೈಲಚಿತ್ರ ನೋಡಬಹುದು. ಕಾವೂರಿನ **ತೋಡ್ಲಮಜಲು ಶ್ರೀ ದುರ್ಗಾ ಚಾಮುಂಡೇಶ್ವರಿ ದೇವಸ್ಥಾನ**ದಲ್ಲಿ ನಾನು ಬಿಡಿಸಿದ ನಾಲ್ಕು ದೊಡ್ಡ ದೊಡ್ಡ ದೇವರ ಚಿತ್ರಗಳು ಇವೆ. **ಹೊಸಬೆಟ್ಟು ಶ್ರೀ ರಾಘವೇಂದ್ರ ಮಠದ ದ್ವಾರಭಾಗದಲ್ಲಿ** ನಾನು ಇಷ್ಟರತನಕ ಬಿಡಿಸಿದ ತೈಲ ಚಿತ್ರಗಳಲ್ಲಿ ಅತೀ ದೊಡ್ಡ ಗಾತ್ರದ **"ವಿಶ್ವರೂಪ ದರ್ಶನ"** (9X7) ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ. 2016ರಲ್ಲಿ ಬಿಡಿಸಿದ ಶ್ರೀ ವಿಶ್ವೇಶತೀರ್ಥರ ತೈಲಚಿತ್ರ ಸೌಮ್ಯಳ ಮನೆಯಲ್ಲಿದೆ.

ಮೈಸೂರು ಹರ್ಷ ರೋಡಿನಲ್ಲಿ ಹೋಟೆಲ್ ಗೋವರ್ಧನ ವಸತಿಗ್ರಹದಲ್ಲಿ **20 ಕೊಠಡಿಗಳಲ್ಲಿ** ನಾನು ಬಿಡಿಸಿದ **20 ಚಿತ್ರಗಳನ್ನು** ಇರಿಸಿದ್ದಾರೆ. ಅಲ್ಲದೆ **ಕೃಷ್ಣ ಗೋವರ್ಧನ ಗಿರಿ** ಎತ್ತಿದ ಸಂದರ್ಭದ ತೈಲಚಿತ್ರ ಇದೆ. **ನವ ಕನ್ನಿಕೆಯರೊಂದಿಗೆ ಇರುವ ಮುರಳೀಧರ ಕೃಷ್ಣ**ನನ್ನು ನೋಡಬಹುದು.

**ಸಾಗರ ಎಲ್.ಬಿ ಕಾಲೇಜಿ**ನಲ್ಲಿ ನಾನು ಬಿಡಿಸಿಕೊಟ್ಟ **ಜ್ಞಾನಪೀಠ ಪ್ರಶಸ್ತಿ** ಪುರಸ್ಕೃತರಾದ ಸಾಹಿತಿ **ದತ್ತಾತ್ರೇಯ ರಾಮಚಂದ್ರ ಬೇಂದ್ರೆಯ** ಇವರ ದೊಡ್ಡ ತೈಲ ಚಿತ್ರವಿದೆ. **ಪ್ರೋ. ಲಂಬೋದರರ**ವರು ಇಲ್ಲಿ ಉಪನ್ಯಾಸಕರಾಗಿದ್ದ ಸಮಯ ನಾನು ಬಿಡಿಸಿಕೊಟ್ಟಿರುತ್ತೇನೆ.

**ಉಡುಪಿ ಎಂ.ಜಿ.ಎಂ. ಕಾಲೇಜಿ**ನಲ್ಲಿ **ಜ್ಞಾನಪೀಠ ಪ್ರಶಸ್ತಿ** ಪುರಸ್ಕೃತರಾದ **ಶ್ರೀಯುತ ಯು. ಅನಂತಮೂರ್ತಿ**ಯವರ ದೊಡ್ಡ ಪ್ರಮಾಣದ ತೈಲಚಿತ್ರವನ್ನು ಶ್ರೀಯುತ ಮುರಳೀಧರ ಉಪಾಧ್ಯಾಯರ ಸಲಹೆಯ ಮೇರೆಗೆ ಬಿಡಿಸಿಕೊಟ್ಟಿರುತ್ತೇನೆ.

**ಪೂವರಿ** ತಿಂಗೊಲ್ದ ತುಳು ಪತ್ರಿಕೆಯಲ್ಲಿ (ಪುತ್ತೂರು) ಪ್ರತೀ ತಿಂಗಳು **"ಪೊಂಜೆಲ್‌ಗಾದ್ ಕಸೂತಿ ಕಲೆ"** ಎಂಬ ಶೀರ್ಷಿಕೆಯಲ್ಲಿ ನಾನು ಬಿಡಿಸಿರುವ **ಕಸೂತಿ ಚಿತ್ರಗಳು** ಪ್ರಕಟವಾಗುತ್ತಿದೆ.

# ನನಗೆ ಸಿಕ್ಕಿದ ಸನ್ಮಾನಗಳು ಮತ್ತು ನಾನು ಮಾಡಿದ ಸಾಧನೆಗಳು

ಅಧ್ಯಾಪಕನಾದವನಿಗೆ ವಿದ್ಯಾರ್ಥಿಗಳಿಂದ ಸಿಗುವ ಪ್ರೀತಿ–ವಿಶ್ವಾಸ–ಗೌರವಗಳೇ ಅತೀ **ದೊಡ್ಡ** ಸನ್ಮಾನ ಹಾಗೂ ಪ್ರಶಸ್ತಿ. ನಾನು **36** ವರ್ಷ ಶಿಕ್ಷಕನಾಗಿದ್ದಾಗ ನನ್ನ ಎಲ್ಲಾ ವಿದ್ಯಾರ್ಥಿಗಳು ನನ್ನಲ್ಲಿಟ್ಟಿರುವ ಪ್ರೀತಿ–ವಿಶ್ವಾಸ–ಗೌರವ ಯಾವ ಸನ್ಮಾನ ಪ್ರಶಸ್ತಿಗಳಿಗೂ ಸರಿಸಾಟಿಯಾಗಲಾರದು. ವಿದ್ಯಾರ್ಥಿಗಳೇ ನನ್ನ ಪ್ರೋತ್ಸಾಹಕರು. ಎಲ್ಲಾ ಪ್ರಶಸ್ತಿಗಿಂತ ದೊಡ್ಡದಾದ ಸಂತೋಷವನ್ನು ನನ್ನ ವಿದ್ಯಾರ್ಥಿಗಳು ನನಗೆ ಕೊಟ್ಟಿದ್ದಾರೆ. ಅದರಿಂದಾಗಿ ನಾನು ತೃಪ್ತ.

* 2004ನೇ ಕೃಷ್ಣ ಜನ್ಮಾಷ್ಟಮಿ ಸಂದರ್ಭ **ಅಧಮಾರು ಶ್ರೀ ಶ್ರೀ ವಿಶ್ವಪ್ರಿಯತೀರ್ಥ ಶ್ರೀಗಳಿಂದ ಸನ್ಮಾನ.**

* 2008ರಲ್ಲಿ ಪೇಜಾವರ ಶ್ರೀ ಶ್ರೀ **ವಿಶ್ವೇಶತೀರ್ಥ ಶ್ರೀಗಳಿಂದ ಕಲಾವಿದನಾಗಿ ಸನ್ಮಾನ** (ಮೈಸೂರು ಕೃಷ್ಣ ಮಿತ್ರಮಂಡಳಿಯ ವತಿಯಿಂದ).

* 2013ರಲ್ಲಿ **ಶ್ರೀಯುತ ಉಪಾಧ್ಯಾಯ ಮೂಡುಬೆಳ್ಳೆ**ಯವರಿಂದ **"ಉಪಾಧ್ಯಾಯ ಸನ್ಮಾನ್–2013"** ಪ್ರಶಸ್ತಿ.

* 2013ರಲ್ಲಿ **"ಸುಮ ಸೌರಭ"** ಪ್ರಶಸ್ತಿ.

## ಚಿತ್ರಕಲಾ ಸಾಧನೆ

* 2008ರಲ್ಲಿ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಡಾ. ಡಿ. ವೀರೇಂದ್ರ ಹೆಗ್ಡೆಯವರಿಗೆ 61 ಕಲಾಕೃತಿಗಳ ಕೊಡುಗೆ.
* ಮಹಿಳೆಯರಿಗಾಗಿ **"ಕಸೂತಿ ಚಿತ್ರಕಲೆ"** ಪುಸ್ತಕ ರಚನೆ.
* **ಪ್ರಕೃತಿ ಚಿತ್ರದಲ್ಲಿ ರೂಪ ವಿನ್ಯಾಸಗೊಳಿಸುವುದು ನನ್ನ ಚಿತ್ರದ ವಿಶೇಷ.**
* ಪಲಿಮಾರು, ಪಡುಬಿದ್ರೆ, ಸಾಂತೂರು, ನಂದಿಕೂರು, ಇನ್ನ, ಕುಂಜಾರು, ಮಾಣಿಬೆಟ್ಟು, ಅಲೆವೂರು, ಸಾಗರ, ಕಾವೂರು ದೇವಸ್ಥಾನದ ಗೋಡೆಗಳಲ್ಲಿ ಮತ್ತು ಇನ್ನ, **ಸಾಂತೂರು, ಕಾವೂರು,** ಶರವು ಬ್ರಹ್ಮರಥಗಳಲ್ಲಿ **ದೊಡ್ಡ ದೊಡ್ಡ ಗಾತ್ರದ ದೇವರ ಚಿತ್ರ ರಚನೆ.**
* 8x4 ಅಡಿ ಅಳತೆಯ **"ಕರಾವಳಿ ಜಾನಪದ"** 7x3 ಅಳತೆಯ **"ನವ ಗೋಪಿಕಾಕೃಷ್ಣ"**
* $31^{1/2}$x7 ಅಳತೆಯ **"ಮಹಾ ನಡಾವಳಿ 2005"** ಕ್ಯಾನ್‌ವಾಸ್ ತೈಲಚಿತ್ರ
* ಹೊಸಬೆಟ್ಟು ಶ್ರೀ ರಾಘವೇಂದ್ರ ಮಠಕ್ಕೆ 9x7 ಅಡಿ ಅಳತೆಯ ಅತ್ಯಧಿಕ ದೊಡ್ಡ **"ವಿಶ್ವರೂಪ ದರ್ಶನ"** ತೈಲಚಿತ್ರ ಬಿಡಿಸಿರುತ್ತೇನೆ.
* ಹಲವಾರು **"ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ"**ಗಳನ್ನು ಮಾಡಿರುತ್ತೇನೆ.

* **ದುಬ್ಯಾ ಪ್ರಸಿದ್ಧ ವೀನಸ್ ಹೊಟೇಲ್‌ನಲ್ಲಿ 5 ಯಕ್ಷಗಾನ ಚಿತ್ರಗಳು** ಪ್ರದರ್ಶಿಸಲ್ಪಡುತ್ತಿದೆ.
* 2013ರಲ್ಲಿ ನಾನು ಬಿಡಿಸಿರುವ 250 ಚಿತ್ರಗಳ ಸುಶ್ರಾವ್ಯ ಸಂಗೀತದೊಂದಿಗೆ ಇರುವ **VCD**ಯನ್ನು ಮಾರಾಟಕ್ಕಾಗಿ ರಚಿಸಿದ್ದೇನೆ.
* ಇಂಟರ್‌ನೆಟ್ **"YOU TUBE"** ನಲ್ಲಿ **G.R. Upadhyaya** ಹೆಸರಿನಲ್ಲಿ ವೀಡಿಯೋ ರೆಕಾರ್ಡ್ ಆಗಿದೆ.
* **"ಆಳ್ವಾಸ್ ವಿಶ್ವ ನುಡಿಸಿರಿ"** ಸಂದರ್ಭ ಪ್ರದರ್ಶನ ಮತ್ತು ಮಾರಾಟಕ್ಕಾಗಿ ಕನ್ನಡ ಜ್ಞಾನಪೀಠ ಪುರಸ್ಕೃತರ ಭಾವಚಿತ್ರಗಳನ್ನು ಎಂಟು ಹೂಗಳಲ್ಲಿ ಬಿಡಿಸಿ **"ಕನ್ನಡ ಜ್ಞಾನಪೀಠ ಪುಷ್ಪಗಳು"** ಎಂಬ ಶೀರ್ಷಿಕೆಯ ಈ ತೈಲಚಿತ್ರವನ್ನು ಕಟೀಲು ಪ್ರೌಢಶಾಲೆಗೆ ಕೊಟ್ಟಿರುತ್ತೇನೆ.

# ನನ್ನ ನೆನಪಿನ ದಿನಗಳು

01–01–1979 ಗುರುಪ್ರಸಾದನ ಜನನ (ಮಾಣಿಬೆಟ್ಟು ದೇವಸ್ಥಾನದಲ್ಲಿ ನಿತ್ಯ ಪೂಜೆ. ಕಾವೂರು ದೇವಸ್ಥಾನದಲ್ಲಿ ಧನುರ್ಮಾಸ ಸಮಾರಾಧನೆ)

25–02–2009 ಸುದೀಪ್ ಕೃಷ್ಣ ಪೊಯ್ಯತ್ತಾಯನ ಜನನ.

29–02–2004 ಶ್ರೀ ಸತ್ಯಕಲಾ ನಿಕೇತನ.

01–03–2012 ಗುರುಪ್ರಸಾದ – ಸುಮನರ ವಿವಾಹ.

22–04–1954 ಸತ್ಯಭಾಮಳ ಜನನ (ಇನ್ನ ದೇವಸ್ಥಾನದಲ್ಲಿ ನಿತ್ಯ ಪೂಜೆ)

04–05–1975 ಸೌಮ್ಯಳ ಜನನ.

12–05–1974 ಗೋಪಾಲಕೃಷ್ಣ – ಸತ್ಯಭಾಮರ ವಿವಾಹ.

19–05–1947 ಗೋಪಾಲಕೃಷ್ಣನ ಜನನ (ಕಾವೂರು ದೇವಸ್ಥಾನದಲ್ಲಿ ನಿತ್ಯ ಪೂಜೆ)

18–05–1998 ಶರಣ್ಯಳ ಜನನ.

18–05–1988 ಸುಮನಳ ಜನನ.

24–05–1995 ಸೌಮ್ಯ ದೇವಿಪ್ರಸಾದ್‌ರ ವಿವಾಹ.

25–06–2004 ಸೌಜನ್ಯಳ ಜನನ.

27–06–1971 ದೇವಿಪ್ರಸಾದ್‌ನ ಜನನ.

12–12–2013 ಅನ್ವಿತಾಳ ಜನನ.

# ನಾನು ಮೆಚ್ಚಿದ ದಾಸರ ಕೀರ್ತನೆಗಳು

## ಸತ್ಯವಂತರಿಗಿದು ಕಾಲವಲ್ಲ

ಸತ್ಯವಂತರಿಗಿದು ಕಾಲವಲ್ಲ, ದುಷ್ಟ ಜನರಿಗೆ ಸುಭಿಕ್ಷ ಕಾಲ,
ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ ಪರಮ ಪಾಪಿಗಳಿಗೆ ಸುಭಿಕ್ಷ ಕಾಲ,
ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ, ಧರೆಯರಿಯೆ ಜಾರೆಯನು ಕೊಂಡಾಡುವ ಕಾಲ,
ಉಪಕಾರ ಮಾಡಿದರೆ ಅಪಕರಿಸುವ ಕಾಲ, ಸಕಲವನು ತಿಳಿದವಗೆ ದುರ್ಭಿಕ್ಷ ಕಾಲ,
ಸತಿ ಸುತರು ಎಂಬವರ ನಂಬಲರಿಯದ ಕಾಲ, ಸಟೆಯಲ್ಲವಿದು ಬಹು ವಿಪರೀತ ಕಾಲ,
ಧರ್ಮ ಮಾಡುವವ ನಿರ್ಮೂಲವಾಗುವ ಕಾಲ, ಕರ್ಮಿ ಪಾತಕರಿಗೆ ಬಹು ಸೌಖ್ಯ ಕಾಲ,
**ನಿರ್ಮಲಾತ್ಮಕ ಸಿರಿ ಪುರಂದರವಿಠಲನ ಮರ್ಮದೊಳು ಭಜಿಸಲರಿಯದ ಕಾಲವಯ್ಯ.**

## ಹೆತ್ತ ತಾಯಿತಂದೆಗಳ ಚಿತ್ತವ ನೋಯಿಸಿ

ಹೆತ್ತ ತಾಯಿತಂದೆಗಳ ಚಿತ್ತವ ನೋಯಿಸಿ ನಿತ್ಯ ದಾನವ ಮಾಡಿ ಫಲವೇನು,
ಸತ್ಯ ಸದಾಚಾರ ಇಲ್ಲದವನು ಜಪ ಹತ್ತು ಸಾವಿರ ಮಾಡಿ ಫಲವೇನು
ತನ್ನ ಸತಿಸುತರು ಬಂಧುಗಳ ನೋಯಿಸಿ, ಚಿನ್ನದಾನವ ಮಾಡಿ ಫಲವೇನು
ಬಿನ್ನಣದಿಂದಲೆ ದೇಶದೇಶವ ತಿರುಗಿ, ಅನ್ನದಾನವ ಮಾಡಿ ಫಲವೇನು
ಗೋಪ್ಯ ಗುಣ ಗುಟ್ಟು ಇಲ್ಲದ ಹೆಣ್ಣಿಗೆ ರೂಪ ಯವ್ವನವಿದ್ದು ಫಲವೇನು
ತಾಪತ್ರಯದಿ ಸಂಸಾರ ಕೆಡಿಸುವಂಥ ಪಾಪಿ ಮಗನು ಇದ್ದು ಫಲವೇನು
ಸ್ನಾನಕ್ಕೆ ಪಾನಕ್ಕೆ ಆಗುವ ತಿಳಿನೀರು ಕಾನನದೊಳಗಿದ್ದು ಫಲವೇನು
**ಆನಂದ ಮೂರುತಿ ಪುರಂದರವಿಠಲನ ನೆನೆಯದ ತನುವಿದ್ದು ಫಲವೇನು**




ಒಂದೇ ಗೆರೆಯ 'ಬಾಲಕೃಷ್ಣ'

# ಹಿಂದೆ – ಇಂದು – ಮುಂದೆ

## ಅಂದು

**ಅಂದು:** ಮಕ್ಕಳಿರಲವ್ವ ಮನೆತುಂಬ ಎನ್ನುವ ನಾಣ್ಣುಡಿಯನ್ನು ಅಕ್ಷರಶ: ಪರಿಪಾಲಿಸುತ್ತಿದ್ದ ನಮ್ಮ ಪೂರ್ವಜರ ಶಾರೀರಿಕ – ಮಾನಸಿಕ ಆರೋಗ್ಯಗಳ ಮಟ್ಟ ಅತ್ಯುತ್ತಮವಾಗಿತ್ತು. ಹತ್ತಾರು ಮಕ್ಕಳನ್ನು ಹೊತ್ತು, ಹೆತ್ತು, ಸಾಕಿ ಸಲಹುತ್ತಿದ್ದ ಈ ಮಾತೆಯರು ಮುಂಜಾನೆಯಿಂದ ಮುಸ್ಸಂಜೆಯ ತನಕ ಎಡೆಬಿಡದೆ ದುಡಿಯುತ್ತಿದ್ದುದೂ ಇದಕ್ಕೊಂದು ಕಾರಣವಾಗಿತ್ತು. ಅದೇ ರೀತಿ ಈ ಮುಗ್ದೆಯರ “ಬೇಕು–ಬೇಡ” ಗಳಿಗೆ ಇತಿಮಿತಿಗಳೂ ಇದ್ದವು. ಪರಸ್ಪರ ಪ್ರೀತಿ ವಿಶ್ವಾಸಗಳೇ ಜೀವಾಳವೆನಿಸುತ್ತಿದ್ದ ಕಾರಣದಿಂದಾಗಿ ದ್ವೇಷ – ಅಸೂಯೆಗಳಿಗೆ ಅವಕಾಶವೂ ಇರುತ್ತಿರಲಿಲ್ಲ. ಪರಿಶುದ್ಧ ಪರಿಸರದಲ್ಲಿ ಸಂತೃಪ್ತ ಜೀವನ ನಡೆಸಿ, ದೇವರ ಮೇಲೆ ಭಾರ ಹಾಕಿ ದೀರ್ಘಕಾಲ ಬಾಳುತ್ತಿದ್ದ ನಮ್ಮ ಪೂರ್ವಜರು ನಿಜಕ್ಕೂ ಪುಣ್ಯವಂತರು.

## ಇಂದು

ಆದರೆ **ಇಂದು** ಆಧುನಿಕ – ಪಾಶ್ಚಾತ್ಯರ ಜೀವನ ಶೈಲಿಯ ಅಂಧಾನುಕರಣೆ, ಒಂದು ಅಥವಾ ಎರಡು ಮಕ್ಕಳು, ಗೃಹಕೃತ್ಯಗಳಲ್ಲಿ ಅತಿಯಾದ ಯಂತ್ರಗಳ ಬಳಕೆ, ನಿಷ್ಕ್ರಿಯ ಜೀವನ ಶೈಲಿ, ಕೆಲ ಮಹಿಳೆಯರಿಗೆ ಉದ್ಯೋಗ ಹಾಗೂ ಗೃಹಕೃತ್ಯಗಳ ಅವಳಿ ಹೊಣೆಗಾರಿಕೆ, ನೆಮ್ಮದಿಯಿಲ್ಲದ ಬದುಕು, ಸಮಸ್ಯೆಗಳು ಉದ್ಭವಿಸಿದಾಗ ಪರಿಹಾರ – ಸಾಂತ್ವನ ನೀಡುತ್ತಿದ್ದ ಹಿರಿಯರ ಮಾರ್ಗದರ್ಶನದ ಅಭಾವ, ಮಾಯವಾಗುತ್ತಿರುವ ಅವಿಭಕ್ತ ಕುಟುಂಬಗಳು, ಪತಿ – ಪತ್ನಿಯರಲ್ಲಿ ಅನ್ಯೋನ್ಯತೆಯ ಅಭಾವ, ಪರಿಸರ ಮಾಲಿನ್ಯಗಳೇ ಮುಂತಾದ ಕಾರಣಗಳಿಂದ ಯಾಂತ್ರಿಕ ಜೀವನ ನಡೆಸುತ್ತಿರುವ ಮಹಿಳೆಯರಲ್ಲಿ ಶಾರೀರಿಕ ಮತ್ತು ಮಾನಸಿಕ ಆರೋಗ್ಯದ ಮಟ್ಟ ಪಾತಾಳಕ್ಕೆ ಮುಟ್ಟಿರುವುದರಲ್ಲಿ ಆಶ್ಚರ್ಯವೇನಿಲ್ಲ. ರಾಸಾಯನಿಕ ಗೊಬ್ಬರ ಹಾಕಿದ ಹಣ್ಣು, ತರಕಾರಿ, ಅಕ್ಕಿ, ತಿಂದು ವಿಷ ಪದಾರ್ಥಗಳ ಕಲಬೆರಕೆ ತಿಂಡಿ ತಿನಸು ತಿಂದು 90 ಪಾಲು ಜನರು ರೋಗಿಗಳಾಗಿದ್ದಾರೆ.

## ಮುಂದು

**ಮುಂದಕ್ಕೆ** ಕ್ಷಣಮಾತ್ರದಲ್ಲಿ ಏನೂ ಆಗಬಹುದು. ಅದನ್ನು ತಿಳಿದಿರುವವ ಭಗವಂತ ಮಾತ್ರ. ಯಾವ ಸಮಯದಲ್ಲಿ ಕಾಲಕಾಲಕ್ಕೆ ಮಳೆ, ಬೆಳೆ ಆಗುವುದಿಲ್ಲವೋ, ಸಮಾಜದ ಜನರೆಲ್ಲಾ ಸತ್ಯಸದಾಚಾರಗಳನ್ನು ಬಿಟ್ಟು, ನ್ಯಾಯ ಧರ್ಮಗಳನ್ನು ಮರೆತು ಸ್ವೇಚ್ಛಾಚಾರಿಗಳಾಗಿ ದುಷ್ಕೃತ್ಯದಲ್ಲಿ ತೊಡಗಿ, ಅನ್ಯಾಯ ತ್ಯಾಚಾರ ಅನಾಚಾರ ಭ್ರಷ್ಟಾಚಾರ ಮಾಡುತ್ತಾ ಜೀವಿಸುತ್ತಾರೋ, ಬಾವಿಗಳಲ್ಲಿ ನೀರು ಬತ್ತಿ ಹೋಗಿ – ನೀರನ್ನೂ ಖರೀದಿಸಿ ಕುಡಿಯುವ ಸಮಯ ಬರುತ್ತದೋ, ಭೂಮಿ ಬರಡಾಗುತ್ತದೋ, ದುಡ್ಡೇ ದೊಡ್ಡಪ್ಪ ಎಂಬಂತೆ ದುಡ್ಡು ಇದ್ದವರು ಮಾಡುವ ಅನ್ಯಾಯ, ಅತ್ಯಾಚಾರ, ಅನಾಚಾರಗಳನ್ನು ಮನ್ನಿಸಿ ಅಂತವರನ್ನೇ ರಾಜಮರ್ಯಾದೆ ಕೊಟ್ಟು, ಗೌರವಿಸಿ, ಸನ್ಮಾನಿಸುವ ಕಾಲ ಬರುತ್ತದೋ, ಜ್ಞಾನಿಗಳು ಮೂಲೆಗುಂಪಾಗುತ್ತಾರೋ, ತಂದೆ–ತಾಯಿ–ಗುರು–ಹಿರಿಯರನ್ನು ಮಕ್ಕಳು ಗೌರವ ಕೊಡದೆ ನಿಕೃಷ್ಟರನ್ನಾಗಿ ಕಾಣುತ್ತಾರೋ, ನಮ್ಮನ್ನೆಲ್ಲಾ ಸೃಷ್ಟಿಸಿ, ಬೆಳೆಸಿ ರಕ್ಷಿಸಿದ ಭಗವಂತನನ್ನೇ ಎಲ್ಲರೂ ಮರೆಯುವ ಕಾಲಕ್ಕೆ ಸರ್ವನಾಶ ಎಂಬುದು ಭಾಗವತ ಸಾರಾಂಶ.

ವಿಶ್ವದ ಸಮಸ್ತರಿಗೂ ಧರ್ಮಾಚರಣೆಗಳಲ್ಲಿ ಆಸಕ್ತಿ ಹುಟ್ಟಿ ಜೀವಿಸುವಂತೆಯೂ, ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಅನುಗ್ರಹಿಸಿ ಕಾಪಾಡುವಂತೆ ಪ್ರಕೃತಿ ಮಡಿಲಲ್ಲಿ ಪ್ರಶಾಂತನಾಗಿ ಕುಳಿತಿರುವ ಇನ್ನಾ ಶ್ರೀ ಮಹಾಲಿಂಗೇಶ್ವರ ದೇವರಲ್ಲಿ ನಾವೆಲ್ಲಾ ಸೇರಿ ಪ್ರಾರ್ಥಿಸೋಣ.

ಸರ್ವೇ ಜನಾಃ ಸುಖಿನೋ ಭವಂತು

# ಭಾರತದ ಪರಿಸ್ಥಿತಿ



ಇದರ ಸಾವಿರಾರು ಕರಪತ್ರಗಳನ್ನು ಮುದ್ರಿಸಿ ಹಂಚಿದ್ದೇನೆ.



ARTIST
G.R. UPADHYAYA
9480600910

ತಾ: 26-01-14

# ಶುದ್ಧವಾಗಿದ್ದರೆ...

**ಆತ್ಮ ಶುದ್ಧವಾಗಿದ್ದರೆ** ನಮ್ಮಲ್ಲಿ ಭಗವಂತ ನೆಲೆಸುತ್ತಾನೆ.
**ಮನಸ್ಸು ಶುದ್ಧವಾಗಿದ್ದರೆ** ಮಾನಸಿಕ ನೆಮ್ಮದಿ ಇರುತ್ತದೆ.
**ನಾಲಿಗೆ ಶುದ್ಧವಾಗಿದ್ದರೆ** ಜಗಳ ಇರುವುದಿಲ್ಲ.
**ಹೊಟ್ಟೆ ಶುದ್ಧವಾಗಿದ್ದರೆ** ಕಾಯಿಲೆಗಳು ಬರುವುದಿಲ್ಲ.
**ಕೈ ಶುದ್ಧವಾಗಿದ್ದರೆ** ಅನ್ಯಾಯಕ್ಕೆ ಅವಕಾಶ ಇರುವುದಿಲ್ಲ.
**ಉಡುಪು ಶುದ್ಧವಾಗಿದ್ದರೆ** ಸಮಾಜದ ಗೌರವ ಸಿಗುತ್ತದೆ.
**ಮನೆ ಶುದ್ಧವಾಗಿದ್ದರೆ** ಗಂಡ ನಿಮ್ಮನ್ನು ತುಂಬಾ ಪ್ರೀತಿಸುತ್ತಾನೆ.
**ಶಾಲೆ ಶುದ್ಧವಾಗಿದ್ದರೆ** ಆದರ್ಶ ಶಿಕ್ಷಕರು ಎಂಬುದು ಖಂಡಿತ.
**ಪರಿಸರ ಶುದ್ಧವಾಗಿದ್ದರೆ** ಸಾಂಕ್ರಾಮಿಕ ರೋಗ ಬರಲಾರದು.
**ಸಮಾಜ ಶುದ್ಧವಾಗಿದ್ದರೆ** ಎಲ್ಲರಿಗೂ ಸುಖ ಸಂತೋಷ ಸಿಗುತ್ತದೆ.

ಇದು ಕಾಪೂರಿನ ಕಲಾವಿದ
ಜಿ.ಆರ್. ಉಪಾಧ್ಯಾಯರ ಅನುಭವದ ಮಾತು

ದಯಮಾಡಿ ಇದರ 10 ಜೆರಾಕ್ಸ್ ಪ್ರತಿಗಳನ್ನು 10 ಮನೆಗೆ ಹಂಚಿರಿ ಮತ್ತು ಅನುಸರಿಸಿರಿ.
"ಮಾನವರಂತೆ ಬದುಕೋಣ" "ದೇಶವನ್ನು ಉಳಿಸೋಣ"

